# 'ಭೂಮಿ ಒಡೆತನ ಮತ್ತು ಮಹಿಳೆ'

(ಗುಲ್ಬರ್ಗಾ ಜಿಲ್ಲೆಯನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ಜ್ಯೋತ್ಸ್ನಾ ಚಂದ್ರಕಾಂತ

ಮಾರ್ಗದರ್ಶಕರು

ಡಾ.ಶೈಲಜ ಇಂ. ಹಿರೇಮಠ

ಪ್ರವಾಚಕರು



ಮಹಿಳಾ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೮

# 'ಭೂ ಒಡೆತನ ಮತ್ತು ಮಹಿಳೆ'

## (ಗುಲಬರ್ಗಾ ಜಿಲ್ಲೆಯನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕರು
**ಜ್ಯೋತ್ಸ್ನಾ ಚಂದ್ರಕಾಂತ**

ಮಾರ್ಗದರ್ಶಕರು
**ಡಾ.ಶೈಲಜ ಇಂ. ಹಿರೇಮಠ**
ಪ್ರವಾಚಕರು



ಮಹಿಳಾ ಅಧ್ಯಯನ ವಿಭಾಗ
ಭಾಷಾನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬
೨೦೦೮

## <u>ಮಾರ್ಗದರ್ಶಕರ ಪ್ರಮಾಣ ಪತ್ರ</u>

ಜ್ಯೋತ್ಸ್ನಾ ಚಂದ್ರಕಾಂತ ಅವರು ಭೂ ಒಡೆತನ ಮತ್ತು ಮಹಿಳೆ (ಗುಲಬರ್ಗಾ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಶೈಲಜ ಇಂ. ಹಿರೇಮಠ
ಪ್ರವಾಚಕರು ಮತ್ತು ಮಾರ್ಗದರ್ಶಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೬.೦೮.೨೦೦೮
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣ ಪತ್ರ

ಭೂ ಒಡೆತನ ಮತ್ತು ಮಹಿಳೆ (ಗುಲಬರ್ಗಾ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಶೈಲಜ ಇಂ. ಹಿರೇಮಠ, ಪ್ರವಾಚಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಜ್ಯೋತ್ಸ್ನಾ ಚಂದ್ರಕಾಂತ
ಸಂಶೋಧಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೬.೦೮.೨೦೦೮
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಗುಲಬರ್ಗಾ ಜಿಲ್ಲೆ


ಮಹಾರಾಷ್ಟ್ರ ರಾಜ್ಯ
ಬೀದರ್ ಜಿಲ್ಲೆ
ಆಳಂದ
ಚಿಂಚೋಳಿ
ಗುಲ್ಬರ್ಗಾ
ಅಫಜಲಪೂರ
ಚಿತ್ತಾಪೂರ
ಸೇಡಂ
ಜೇವರ್ಗಿ
ಯಾದಗಿರ
ಶಹಾಪುರ
ಸುರಪುರ
ಬಿಜಾಪುರ ಜಿಲ್ಲೆ
ರಾಯಚೂರು ಜಿಲ್ಲೆ
ಆಂಧ್ರಪ್ರದೇಶ ರಾಜ್ಯ

## ಕೋಷ್ಟಕಗಳ ಸೂಚಿ



* * *

## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧. ಪ್ರಸ್ತಾವನೆ

೧.೨. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೩. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೪. ಅಧ್ಯಯನದ ವಿಧಾನ

೧.೫. ಅಧ್ಯಯನದ ಮಹತ್ವ

## ೧.೧. ಪ್ರಸ್ತಾವನೆ

ಯಾವುದೇ ಕ್ಷೇತ್ರದಲ್ಲಿ ಅಭಿವೃದ್ಧಿ ಆಗಬೇಕಾದರೆ ಮಾನವ ಸಂಪನ್ಮೂಲ ಅತೀ ಮುಖ್ಯವೆನಿಸುತ್ತದೆ. ಹಾಗಾಗಿ ಆರೋಗ್ಯವಂತ ವ್ಯಕ್ತಿ ದೇಶದ ನಿಜವಾದ ಸಂಪತ್ತು. ದೇಶದಲ್ಲಿನ ಕೃಷಿ ಕ್ಷೇತ್ರದಲ್ಲಿ ಯಥೇಚ್ಛವಾಗಿ ದೊರೆಯುವ ಸಂಪನ್ಮೂಲವೆಂದರೆ ಈ ಕ್ಷೇತ್ರದಲ್ಲಿನ ಮಹಿಳೆಯರು. ಭಾರತವು ಕೃಷಿ ಪ್ರಧಾನ ದೇಶವಾಗಿರುವುದರಿಂದ ಕೃಷಿಗೂ ಮಹಿಳೆಗೂ ಅವಿನಾಭಾವ ಸಂಬಂಧವಿದೆ. ಕಾರಣ ಗ್ರಾಮೀಣ ಪ್ರದೇಶದ ಆರ್ಥಿಕತೆಗೆ ಮತ್ತು ಕೃಷಿಯ ಅಭಿವೃದ್ಧಿಗೆ ಮಹಿಳೆಯ ಕೊಡುಗೆ ಅಪಾರವಾದುದು. ಕೃಷಿಯನ್ನು ಕಂಡುಹಿಡಿದು ಕೃಷಿಯ ಕಲೆಯನ್ನು ಕರಗತ ಮಾಡಿಕೊಂಡವಳೇ ಮಹಿಳೆ ಎಂದು ಕೃಷಿಯ ಇತಿಹಾಸ ಹೇಳುತ್ತದೆ. ಕೃಷಿ ಪ್ರಕೃತಿಯ ಕೈಗೊಂಬೆ ಎನ್ನುವುದನ್ನು ಅರಿತ ಅವಳು ತನ್ನ ಅನುಭವದಿಂದ ಒರಟು ಕೃಷಿಗೆ ನಾಜೂಕಿನ ರೂಪ ಕೊಟ್ಟಳು. ಅನಾಗರಿಕ ಜೀವನದಲ್ಲಿ ನಾಗರಿಕತೆಯನ್ನು ತುಂಬಿ ಅಲೆದಾಟದ ಬದುಕಿಗೆ ಹೊಸ ತಿರುವನ್ನು, ಹೊಸ ಅರ್ಥವನ್ನು ಕೊಟ್ಟವಳು ಮಹಿಳೆಯೇ. ಕೃಷಿ ಕ್ಷೇತ್ರದಲ್ಲಿ ಪುರುಷರಿಗಿಂತ ಅತ್ಯಧಿಕ ಪ್ರಮಾಣದಲ್ಲಿ ಮಹಿಳೆಯರೆ ಕೆಲಸ ನಿರ್ವಹಿಸುವುದನ್ನು ಇಂದಿಗೂ ಕಾಣಬಹುದು. ಕೃಷಿಯಲ್ಲಿ ಇಷ್ಟೆಲ್ಲ ಕಾರ್ಯಗಳು ಮಹಿಳೆಯಿಂದ ನಿರ್ವಹಿಸಲ್ಪಟ್ಟರೂ ಕೃಷಿ ಎನ್ನುವುದು ಪುರುಷ ಪ್ರಧಾನ ಕಸುಬು ಆಗಿದೆ. ಹಾಗೆಯೇ ಕೃಷಿ ಭೂಮಿಯ ಒಡೆತನ ಕೂಡ ಆತನೆ ಹೊಂದಿರಬೇಕು ಎನ್ನುವ ಮನೋಭಾವ ಸಮಾಜದಲ್ಲಿ ರೂಢಿಗತವಾಗಿ ಬಂದಿದೆ. ಕೃಷಿಯಲ್ಲಿ ಮಹಿಳೆಗೆ ಯಾವುದೇ ರೀತಿಯ ಅಧಿಕಾರಯುತವಾದ ಸ್ಥಾನವಿರುವುದು ಕಂಡುಬರದೆ ಅಧಿಕ ಪ್ರಮಾಣದಲ್ಲಿ ಕೃಷಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ.

ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣು ಎಂದಿಗೂ ಸರ್ವ ಸ್ವತಂತ್ರಳಾಗಿಲ್ಲ ಎಂಬುದು ಗಂಭೀರವಾಗಿ ಆಲೋಚಿಸಬೇಕಾದ ಸಂಗತಿ. ಮಹಿಳೆ ತನ್ನ ಬದುಕಿನ ಎಲ್ಲ ಪ್ರಮುಖ ಘಟ್ಟಗಳಲ್ಲೂ ಪುರುಷನಿಂದ ನಿಯಂತ್ರಿತಗೊಂಡಿದ್ದಾಳೆ. ವಿವಾಹದ ಮೊದಲು ತಂದೆ-ತಾಯಿಯ ಮನೆ, ವಿವಾಹದ ನಂತರ ಗಂಡನ ಮನೆಯಲ್ಲಿ ಕಳೆಯುವುದರಿಂದ ಅವಳಿಗೆ ಆಸ್ತಿಯ ಮೇಲಿನ ಹಕ್ಕೇ ಇಲ್ಲದಂತಾಗಿದೆ. ಹೆಣ್ಣು ಪುರುಷನ ಆಸ್ತಿಯಾದುದರಿಂದ ಅವಳಿಗ್ಯಾಕೆ ಆಸ್ತಿಯ ಹಕ್ಕು? ಎಂದು ಪ್ರಶ್ನಿಸುವವರು ಇಂದಿಗೂ ಇದ್ದಾರೆ. ಆರಂಭದಿಂದಲೂ ಮಹಿಳೆಯರನ್ನು ಆರ್ಥಿಕ ಉತ್ಪಾದನಾ ಕ್ಷೇತ್ರ, ಮತ್ತು ಶಿಕ್ಷಣಗಳಿಂದ ದೂರವಿಡುತ್ತಲೇ ಬರಲಾಗಿದೆ.

ಸಮಾಜದಲ್ಲಿ ಜನರು ಹೊಂದಿರುವ ಸ್ಥಿರ-ಚರಾಸ್ತಿಗಳು ಅವರ ಆರ್ಥಿಕ ಸ್ಥಾನವನ್ನು ನಿರ್ಧರಿಸುತ್ತವೆ. ಸಮಾಜದಲ್ಲಿ ಅದು ಪ್ರತಿಷ್ಠೆಯ ಸಂಕೇತವೂ ಹೌದು. ಬಹುತೇಕ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿದ್ದು,

ಅಲ್ಲಿ ಆಸ್ತಿಯ ಒಡೆತನ ಮತ್ತು ಭೂ ಒಡೆತನ ಪುರುಷರದಾಗಿರುತ್ತದೆ. ಒಡೆತನದ ಅಧಿಕಾರವು ವಂಶಪಾರಂಪರ್ಯವಾಗಿ ಗಂಡು ಮಕ್ಕಳಿಗೆ ವರ್ಗಾಯಿಸಲ್ಪಡುತ್ತದೆ. ಆಸ್ತಿಯ ಮತ್ತು ಭೂಮಿಯ ಮೇಲಿನ ಹಕ್ಕು ಇಲ್ಲದಿರುವುದೇ ಮಹಿಳೆಯರ ತುಳಿತಕ್ಕೆ ಮುಖ್ಯ ಕಾರಣವಾಗಿದೆ. ಜಮೀನಿನಿಂದ ತಟ್ಟೆಯವರೆಗಿನ ಆಹಾರ ವರ್ಗಾವಣೆಯಲ್ಲಿ ಮಹಿಳೆಯರು ಪ್ರಮುಖ ಪಾತ್ರ ವಹಿಸಿದರೂ, ಅವರಿಗೆ ಸಲ್ಲಬೇಕಾದ ನ್ಯಾಯಯುತ ಪಾಲು ಸಿಗುತ್ತಿಲ್ಲ. ಮಹಿಳೆಯು ಕೌಟುಂಬಿಕವಾಗಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಬಲಳಾಗಬೇಕಾದರೆ, ಭೂ ಒಡೆತನದ ಹಕ್ಕನ್ನು ಹೊಂದಿದಾಗ ಮಾತ್ರ ಸಾಧ್ಯವಾಗುತ್ತದೆ.

ದೇಶದಲ್ಲಿ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಲಿಂಗ ತಾರತಮ್ಯಕ್ಕೆ ಸಂಬಂಧಿಸಿದಂತೆ ಅನೇಕ ಕಾಯ್ದೆ, ಕಾನೂನುಗಳು ಜಾರಿಗೆ ಬಂದಿವೆ. ಆದರೆ ಕಾನೂನುಗಳ ಲಾಭ ನಿರೀಕ್ಷಿತ ಮಟ್ಟದಲ್ಲಿ ಮಹಿಳೆಯರಿಗೆ ದಕ್ಕಲಿಲ್ಲ ಎಂಬುದು ಗಂಭೀರವಾದ ಮತ್ತು ಚರ್ಚೆಯಾಗಬೇಕಾದ ಸಂಗತಿಯಾಗಿದೆ. ಭೂ ಒಡೆತನದಲ್ಲಿನ ಅಸಮತೋಲನಕ್ಕೆ ಸಂಬಂಧಿಸಿದಂತೆ ಅತ್ಯಂತ ಪ್ರಮುಖವಾದ, ಮೂಲಭೂತವಾದ ಚರ್ಚೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಭೂ ಒಡೆತನ ಎಂದರೆ ಸಾಮಾನ್ಯ ಅರ್ಥದಲ್ಲಿ ಆಸ್ತಿಯ ಒಡೆತನ. ''ಆಸ್ತಿ ಎಂದರೆ ಇದೆ ಎಂದರ್ಥ. ಅಸ್ತಿತ್ವದಲ್ಲಿರುವುದು ಯಾವುದೋ ಅದು ಆಸ್ತಿ. ಸ್ವಂತದ್ದು ಯಾವುದೋ ಅದು ಸ್ವತ್ತು.'' (ನಾಯಕ ಹಾ.ಮಾ., ೧೯೭೦, ಪು ೧೨೩)

ಆಸ್ಟಿನ್ನನ ಪ್ರಕಾರ - ''ಜೀವನದ ಹಿತಾಸಕ್ತಿಗಳಿಗೆ ಆಸ್ತಿ ಎಂದು ಹೆಸರು. ಒಬ್ಬ ಮನುಷ್ಯನ ಎಲ್ಲಾ ಸ್ಥಿರ ಸ್ವತ್ತುಗಳಿಗೆ ಆಸ್ತಿ ಎಂದು ಹೆಸರು.'' (ಹೊಯ್ಸಳ ಶರ್ಮ.ಕೆ., ೧೯೪೯, ಪು ೩೪೪) ಆಸ್ತಿಯಲ್ಲಿಯೂ ಎರಡು ಭಾಗಗಳಿವೆ. ಸ್ಥಿರ ಆಸ್ತಿ ಮತ್ತು ಚರ ಆಸ್ತಿಗಳೆಂದು. ಸ್ಥಿರಾಸ್ತಿಯಲ್ಲಿ ಭೂಮಿ, ಮನೆ ಇತ್ಯಾದಿಗಳು ಬಂದರೆ, ಚರಾಸ್ತಿಯಲ್ಲಿ ಪಶು, ಪ್ರಾಣಿ, ಒಡವೆಗಳು, ಹಣ, ಇತ್ಯಾದಿಗಳು ಬರುತ್ತವೆ. ಸ್ಥಿರಾಸ್ತಿಯ ಗುಣಗಳನ್ನು ನೋಡಿದಾಗ

''೧. ನಿರ್ದಿಷ್ಟವಾದ ಭೂ ಭಾಗ

೨. ಆ ಭೂಭಾಗದ ಕೆಳಗಡೆ ಭೂಗರ್ಭದಲ್ಲಿ ಅಡಗಿರುವ ಭೂಮಿ

೩. ಭೂಮಿಯ ಮೇಲ್ಭಾಗದ ಆಕಾಶ

೪. ಭೂ ಭಾಗದಲ್ಲಿ ನೈಸರ್ಗಿಕವಾಗಿರುವ ಜಲ, ತರು, ನಿಧಿ, ನಿಕ್ಷೇಪ, ಪಾಷಣಾದಿ ಸಂಪತ್ತು ಮತ್ತು ಭೂಮಿಯ ಮೇಲೆ ಬಿದ್ದಿರುವ ಕಲ್ಲು

೫. ಭೂಮಿಯಲ್ಲಿ ಭದ್ರವಾಗಿ ಹೂತುಕೊಂಡಿರುವ ಅಥವಾ ಉದ್ದೇಶಪಟ್ಟು ಭೂಮಿಗೆ ಶಾಶ್ವತವಾಗಿ ಕೂಡಿಸಿರುವ ಇತರ ಎಲ್ಲಾ ವಸ್ತುಗಳು.'' (ನಾಯಕ ಹಾ.ಮಾ., ೧೯೭೦, ಪು ೧೨೩)

ಈ ಮೇಲೆ ಹೇಳಿದ ಎಲ್ಲಾ ಅಂಶಗಳು ಅಂದರೆ ಭೂಮಿಯ ಮೇಲೆ ಇರುವ ಕಟ್ಟಡಗಳು, ಮನೆ ಕಟ್ಟಬೇಕೆಂದು ತೆಗೆದುಕೊಳ್ಳುವ ಭೂಮಿ, ಕೃಷಿ ಭೂಮಿ ಭೂ ಒಡೆತನಕ್ಕೆ ಸಂಬಂಧಿಸಿವೆ. ಪ್ರಸ್ತುತ 'ಭೂ ಒಡೆತನ ಮತ್ತು ಮಹಿಳೆ' ಎಂಬ ಅಧ್ಯಯನದಲ್ಲಿ ಕೃಷಿ ಭೂಮಿಯ ಒಡೆತನಕ್ಕೆ ಮಾತ್ರ ಆದ್ಯತೆಯನ್ನು ನೀಡಲಾಗಿದೆ. ಮನೆ ಮತ್ತು ಮನೆ ಕಟ್ಟಲು ಬಳಸುವ ಭೂಮಿಗೆ ಸಂಬಂಧಿಸಿದಂತೆ ಅಧ್ಯಯನದಲ್ಲಿ ಸಂದರ್ಭಕ್ಕೆ ತಕ್ಕಂತೆ ಪ್ರಸ್ತಾಪಿಸಲಾಗಿದೆಯೇ ಹೊರತು ಅದನ್ನು ಪೂರ್ಣ ಪ್ರಮಾಣದಲ್ಲಿ ಭೂ ಒಡೆತನದ ವ್ಯಾಪ್ತಿಗೆ ಒಳಪಡಿಸಿಕೊಳ್ಳದೆ, ಕೃಷಿ ಭೂ ಒಡೆತನವನ್ನು

ಮಾತ್ರ ಅಧ್ಯಯನದ ಕೇಂದ್ರವಾಗಿರಿಸಿಕೊಳ್ಳಲಾಗಿದೆ. ಕೃಷಿ ಭೂ ಒಡೆತನದಲ್ಲೂ ಮಹಿಳಾ ಕೃಷಿ ಭೂ ಒಡೆತನವನ್ನೇ ನೋಡಲಾಗಿದೆ. ಸಂದರ್ಭಕ್ಕೆ ತಕ್ಕಂತೆ ಪುರುಷರ ಭೂ ಒಡೆತನದ ಬಗ್ಗೆ ಪ್ರಸ್ತಾಪಿಸಿದರೂ ಕೂಡ ಮಹಿಳಾ ಭೂ ಒಡೆತನಕ್ಕೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗಿದೆ.

ಕೃಷಿ ಕ್ಷೇತ್ರ ಮತ್ತು ಭೂ ಒಡೆತನಕ್ಕೆ ಸಂಬಂಧಿಸಿದಂತೆ ೧೯೯೪ರಲ್ಲಿ ಬಿನಾ ಅಗರವಾಲ್ ಅವರ A fielld of one's own (Gender & Land Rights in South Asia) ಕೃತಿಯು ತನ್ನದೆ ಆದ ಹೆಜ್ಜೆಗುರುತನ್ನು ಮೂಡಿಸಿದೆ. ಈ ಕೃತಿಯಲ್ಲಿ ದಕ್ಷಿಣ ಏಷ್ಯಾದ ಕೆಲವು ಸಮುದಾಯಗಳಲ್ಲಿನ ಮಹಿಳೆಯರ ಭೂ ಒಡೆತನದ ಸ್ಥಿತಿ-ಗತಿಯ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಈ ರೀತಿಯ ಅಧ್ಯಯನ ಕರ್ನಾಟಕಕ್ಕೆ ಸಂಬಂಧಿಸಿದಂತೆ ಮಾಡುವುದು ಅವಶ್ಯಕವಾಗಿದೆ. ಈ ಹಿಂದೆ ಭೂ ಒಡೆತನದ ಬಗ್ಗೆ ಕೆಲವು ಅಧ್ಯಯನಗಳು ನಡೆದರೂ ಕೂಡ ಅವು ಮಹಿಳೆಯರ ಸ್ಥಿತಿಗತಿ ಕುರಿತು ನಡೆದ ಅಧ್ಯಯನಗಳು ವಿರಳ. ಇನ್ನು ಕೆಲವು ಅಧ್ಯಯನಗಳು ಪುರುಷ ಕೇಂದ್ರಿತ ನೆಲೆಯಲ್ಲಿ ಮತ್ತು ಸಮಾಜ ವಿಜ್ಞಾನದ ಹಿನ್ನೆಲೆಯಲ್ಲಿ ನಡೆದಿವೆ. ಈ ಹಿನ್ನೆಲೆಯಲ್ಲಿ ಮಹಿಳಾ ಭೂ ಒಡೆತನದ ಬಗ್ಗೆ ಮಹಿಳಾ ದೃಷ್ಟಿಕೋನದಿಂದ ಗುಲಬರ್ಗಾ ಜಿಲ್ಲೆಯ ಮಹಿಳೆಯರ ಭೂ ಒಡೆತನದ ಸ್ಥಿತಿಗತಿ ಕುರಿತು ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಸಂವಿಧಾನಬದ್ಧವಾಗಿ ಮಹಿಳೆಯರಿಗೆ ಆಸ್ತಿಯಲ್ಲಿ ಮತ್ತು ಕೃಷಿ ಭೂಮಿಯಲ್ಲಿ ಸಮ ಪಾಲು ಪಡೆಯುವ ಹಕ್ಕಿದ್ದಾಗಲೂ ಮಹಿಳೆಯರ ಬದುಕಿನಲ್ಲಾಗಲಿ, ಅವರ ಸ್ಥಿತಿಗತಿಗಳಲ್ಲಾಗಲಿ ಅಂತಹದ್ದೇನು ವಿಶೇಷವಾದ ಇಲ್ಲವೇ ಗುರುತರವಾದ ಬದಲಾವಣೆಯಾಗಿಲ್ಲ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಇದನ್ನು ಕಂಡುಕೊಳ್ಳುವ ಹಿನ್ನೆಲೆಯಲ್ಲಿಯೇ ಪ್ರಸ್ತುತ 'ಭೂ ಒಡೆತನ ಮತ್ತು ಮಹಿಳೆ' ಎಂಬ ಶೀರ್ಷಿಕೆಯಡಿಯಲ್ಲಿ ಕೃಷಿ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವ ಮಹಿಳೆಯರ ಸ್ಥಿತಿಗತಿಯನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಕೃಷಿ ಭೂಮಿಯ ಒಡೆತನ ಎಷ್ಟರ ಮಟ್ಟಿಗೆ ಮಹಿಳೆಯರಿಗೆ ದಕ್ಕಿದೆ? ಅದರ ನಿಯಂತ್ರಣ ಮತ್ತು ನಿರ್ವಹಣೆಯ ಹಕ್ಕನ್ನು ಮಹಿಳೆಯರು ಪಡೆದಿರುವರೇ? ಕೃಷಿ ಕ್ಷೇತ್ರದಲ್ಲಿ ಮಹಿಳೆಯ ಸ್ಥಾನಮಾನವೇನು? ಕೃಷಿಯಲ್ಲಿ ಆಕೆಯ ಪಾಲುದಾರಿಕೆ ಯಾವ ಬಗೆಯದು? ಎನ್ನುವ ಅಂಶಗಳನ್ನು ಕೇಂದ್ರವಾಗಿರಿಸಿಕೊಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**೧.೨. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

೧೯೯೪ ರಲ್ಲಿ ಇಂಗ್ಲಿಷ್‌ನಲ್ಲಿ ಪ್ರಕಟವಾದ ಬಿನಾ ಅಗರವಾಲ್ ಅವರ 'A field of one's own' (ಮಹಿಳೆಯ ಭೂ ಒಡೆತನ) ಕೃತಿ ಮಹಿಳೆ ಮತ್ತು ಅವಳ ಸಮಗ್ರ ಹಕ್ಕು, ಒಡೆತನದ ಸಂದರ್ಭದಲ್ಲಿನ ಮಹತ್ವದ ಅಂಶಗಳನ್ನು ಬೆಳಕಿಗೆ ತಂದಿದೆ. ದಕ್ಷಿಣ ಏಷ್ಯಾದ ನಿರ್ದಿಷ್ಟ ಭೂ ಪ್ರದೇಶದ ಹಿನ್ನೆಲೆಯಲ್ಲಿ ಲಿಂಗ ಮತ್ತು ಭೂ ಒಡೆತನದ ಬಹುಮುಖ್ಯ ಆಯಾಮಗಳನ್ನು ವಿಶ್ಲೇಷಿಸಲಾಗಿದೆ. ಅಗರವಾಲ್ ಅವರ ಈ ಸಂಶೋಧನಾತ್ಮಕ ಕೃತಿ ಇದುವರೆಗೆ ಪರಂಪರೆಯಲ್ಲಿ ಮರೆಯಾಗಿದ್ದ ಕಷ್ಟದ ನೋವಿನ ಕೂಗಿಗೆ ಜೀವ ನೀಡುವಲ್ಲಿ ಸಫಲವಾಗಿದೆ. ಸಂಪತ್ತುಗಳಲ್ಲಿ ವಿಶಿಷ್ಟವಾಗಿದ್ದು ಎಲ್ಲದಕ್ಕೂ ಆಧಾರವಾಗಿರುವುದು ಈ ಭೂಮಿ. ಇದರ ಒಡೆತನವನ್ನು ಯಾವೆಲ್ಲ ಬಗೆಯಿಂದ ಮಹಿಳೆ ಪಡೆಯಬಲ್ಲಳು ಹಾಗೂ ಅದನ್ನು ಪಡೆಯಲು ಸಂಪ್ರದಾಯ, ಸಮುದಾಯಗಳು ಯಾವ ಮಾದರಿಯ ನೀತಿ ನಿಯಮಗಳ ಗಡಿಗಳನ್ನು ಕಟ್ಟಿದ್ದವು ಎಂಬುದರ ಸಮಗ್ರ ಮಾಹಿತಿ ಈ ಕೃತಿಯಲ್ಲಿದೆ. ಸಮಕಾಲೀನ ಸಂದರ್ಭದ ಕಾನೂನಿನ ಚೌಕಟ್ಟು ಮತ್ತು ಸಂವಿಧಾನಿಕ ಬಾಧ್ಯತೆಗಳ ನೆಲೆಯಲ್ಲಿ ಮಹಿಳೆಯ ಭೂ ಒಡೆತನವನ್ನು ನಿರ್ವಚಿಸಿರುವುದು ಉಲ್ಲೇಖಾರ್ಹವಾಗಿದೆ.

ಈ ಕೃತಿಯಲ್ಲಿ ಒಟ್ಟು ೧೦ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯವು ಅನೇಕ ಉಪ ಅಧ್ಯಾಯಗಳಿಂದ ಕೂಡಿದೆ. ಮಹಿಳೆಯರಿಗೆ ಭೂ ಒಡೆತನ, ಲಿಂಗ ಸಂಬಂಧಿ ಕಲ್ಪನೆ, ವಿವಿಧ ಸಮುದಾಯಗಳಲ್ಲಿ ಭೂ ಒಡೆತನ, ಸಮಕಾಲೀನ ಕಾನೂನು, ಪ್ರದೇಶವಾರು ಒಡೆತನದಲ್ಲಿ ಭಿನ್ನತೆ ಹಾಗೂ ಸಾಮ್ಯತೆ, ಮಹಿಳೆಯರ ಭೂ ಒಡೆತನವನ್ನು ವಿವಿಧ ಸಮುದಾಯ, ವರ್ಗ, ಜಾತಿಗಳ ಹಿನ್ನೆಲೆಯಲ್ಲಿಯೇ ಚರ್ಚಿಸಿರುವುದನ್ನು ವಿವಿಧ ಅಧ್ಯಾಯಗಳಲ್ಲಿ ಕಾಣಬಹುದಾಗಿದೆ. ಈವರೆಗೆ ಭೂ ಒಡೆತನ ಕುರಿತು ಇಲ್ಲದ ನವೀನ ನಿರ್ವಚನವನ್ನು ಅಗರವಾಲ್ ಅವರು ಲಿಂಗ ಸಂಬಂಧಿ ನೆಲೆಯಲ್ಲಿ ಮಾಡಿರುವುದು ಗಮನಾರ್ಹ. ಪ್ರತಿಯೊಂದು ವಿಚಾರವನ್ನು ಸೂಕ್ಷ್ಮವಾಗಿ ಗ್ರಹಿಸಿರುವುದರೊಂದಿಗೆ ಅವುಗಳ ವಿಶ್ಲೇಷಣೆಯನ್ನು ತಾತ್ವಿಕ ಚೌಕಟ್ಟಿನಲ್ಲಿ ಕೈಗೊಂಡಿರುವುದು ಪಠ್ಯದ ಸ್ವರೂಪವನ್ನು ಗಟ್ಟಿಗೊಳಿಸಿದೆ ಎನ್ನಬಹುದು.

ಪ್ರಸ್ತುತ ದಿನಗಳಲ್ಲಿ ನಡೆಸುವ ಲಿಂಗ ಸಂಬಂಧಿ ಅಧ್ಯಯನಗಳಿಗೆ ಈ ಕೃತಿ ಹಲವು ದಾರಿಗಳನ್ನು ಸೂಚಿಸಬಲ್ಲದು. ಭಾರತದ ಕೇರಳ ಮತ್ತಿತರ ರಾಜ್ಯಗಳಲ್ಲಿನ ಭೂ ಒಡೆತನ, ಶ್ರೀಲಂಕಾದಲ್ಲಿನ ಭೂ ಒಡೆತನದ ಸ್ವರೂಪ ಇತ್ಯಾದಿಗಳ ಬಗ್ಗೆ ಪ್ರತ್ಯೇಕವಾದ ಚರ್ಚೆಗಳು ನಡೆದಿವೆ. ಮಹಿಳೆಯರ ಭೂ ಒಡೆತನದ ಕುರಿತು ಇದುವರೆಗೆ ಇದ್ದ ಸಾಂಪ್ರದಾಯಿಕ, ಪಾರಂಪರಿಕ ಸಂಗತಿಗಳನ್ನು ಬೆಳಕಿಗೆ ತರುವುದರೊಂದಿಗೆ ಸಮಕಾಲೀನ ಕಾನೂನು ಸಂವಿಧಾನದ ಹಕ್ಕುಗಳ ನೆಲೆಯಲ್ಲಿ ಹಾಗೂ ತಾತ್ವಿಕ ಚರ್ಚೆಯನ್ನು ನಿರೂಪಿಸಲಾಗಿದೆ.

ಕೆ. ಪದ್ಮಾವತಮ್ಮ ಅವರ 'ಮಹಿಳೆ ಮತ್ತು ಆಸ್ತಿಯ ಹಕ್ಕು' (೨೦೦೨) ಕೃತಿಯು ೨೫ ಪುಟಗಳನ್ನು ಒಳಗೊಂಡ ಚಿಕ್ಕ ಹಾಗೂ ಮೌಲ್ಯಯುತ ಕೃತಿಯಾಗಿದೆ. ಈ ಕೃತಿಯಲ್ಲಿ ಹಿಂದಿನ ಕಾಲದಲ್ಲಿದ್ದ ಮಹಿಳೆಯರ ಆಸ್ತಿ ಹಕ್ಕಿನ ಬಗೆಗಿನ ಪದ್ಧತಿಗಳನ್ನು, ನಂತರದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಲೇಖಕರು ಸರಳವಾಗಿ ಎಲ್ಲರಿಗೂ ತಿಳಿಯುವಂತೆ ವಿವೇಚಿಸಿದ್ದಾರೆ.

'ಕುಟುಂಬ, ಖಾಸಗಿ ಆಸ್ತಿ ಮತ್ತು ರಾಜ್ಯ ಇವುಗಳ ಉಗಮ' (೧೮೮೪) ಈ ಗ್ರಂಥ ಲೂಯಿ. ಎಚ್. ಮಾರ್ಗನ್‌ರ ಪರಿಶೋಧನೆಗಳ ಅಡಿಯಲ್ಲಿ ಫ್ರೆಡರಿಕ್ ಎಂಗೆಲ್ಸ್ ಬರೆದಿದ್ದಾರೆ. ಕನ್ನಡಾನುವಾದವನ್ನು ಕೆ.ಎಲ್. ಗೋಪಾಲಕೃಷ್ಣರಾವ್ ಅವರು ೧೯೮೦ ರಲ್ಲಿ ಮಾಡಿದ್ದಾರೆ. ಅತ್ಯುತ್ತಮ ಕೃತಿಗಳೆಂದು ಹೆಸರು ಪಡೆದಿರುವ ಎಂಗೆಲ್ಸ್‌ರ ವಿಚಾರ ಮಾಲೆಯ ಗ್ರಂಥಗಳಲ್ಲಿ ಇದೂ ಒಂದು. ಪ್ರಸ್ತುತ ಗ್ರಂಥದಲ್ಲಿ ಸಂಸ್ಕೃತಿಯ ಇತಿಹಾಸ ಪೂರ್ವ ಘಟ್ಟಗಳನ್ನು ಪರಿಚಯಿಸಲಾಗಿದೆ. ಕುಟುಂಬ ರಚನೆ, ಖಾಸಗಿ ಆಸ್ತಿ ಮತ್ತು ರಾಜ್ಯಗಳ ಉಗಮ ಯಾವ ರೀತಿಯಲ್ಲಿ ಹುಟ್ಟು ಪಡೆದವು ಎನ್ನುವುದನ್ನು ಇಲ್ಲಿ ನಾವು ಕಾಣಬಹುದು. ಕುಟುಂಬದ ಬಗ್ಗೆ ತಿಳಿಸುತ್ತಾ ಲೇಖಕರು ''ಮಾರ್ಕ್ಸ್‌ರವರು ಹೇಳಿದಂತೆ ಮೊದಲ ಶ್ರಮವಿಭಜನೆಯು ಗಂಡಸು ಹೆಂಗಸಿನ ನಡುವೆ ಮಕ್ಕಳ ಪಾಲನೆ ಪೋಷಣೆಗೆ ಸಂಬಂಧಿಸಿ, ಆಯಿತು. ಅದಕ್ಕೆ ನಾನೂ (ಎಂಗೆಲ್ಸ್) ಈ ಕೆಳಗಿನ ಮಾತುಗಳನ್ನು ಸೇರಿಸಬಲ್ಲೆ: ಏಕ ಪತ್ನೀ ವಿವಾಹ ಪದ್ಧತಿಯಲ್ಲಿ ಗಂಡಸು ಹೆಂಗಸಿನ ನಡುವೆ ವೈಷಮ್ಯ ಹುಟ್ಟಿಕೊಂಡಾಗಲೇ ಇತಿಹಾಸದಲ್ಲಿನ ಮೊದಲ ವರ್ಗ ವೈಷಮ್ಯವೂ ಹುಟ್ಟಿಕೊಂಡಿತು ಮತ್ತು ಪುರುಷ ವರ್ಗವು ಸ್ತ್ರೀವರ್ಗದ ಮೇಲೆ ದಬ್ಬಾಳಿಕೆ ನಡೆಸುವುದರೊಂದಿಗೆ ಮೊದಲ ವರ್ಗ ದಬ್ಬಾಳಿಕೆಯೂ ಪ್ರಾರಂಭವಾಯಿತು. ಏಕಪತ್ನಿತ್ವವು ಒಂದು ಮಹಾ ಚಾರಿತ್ರಿಕ ಮುನ್ನಡೆಯೇನೋ ಆಗಿದ್ದಿತು. ಆದರೆ ಅದೇ ಹೊತ್ತಿನಲ್ಲಿ ಅದು ಗುಲಾಮಗಿರಿ ಹಾಗೂ ಖಾಸಗಿ ಆಸ್ತಿಯೊಂದಿಗೆ ಒಂದು ಹೊಸ ಕಾಲಘಟ್ಟವನ್ನು ಇಂದಿನವರೆಗೂ ನಡೆದುಕೊಂಡು ಬಂದಿರುವ ಕಾಲಘಟ್ಟವನ್ನು ಪ್ರಾರಂಭಿಸಿತು.'' (ಪು ೯೩, ೯೪) ಹೀಗೆ ಪುರಾತನ ಕಾಲದಿಂದ ಕುಟುಂಬ, ಸ್ತ್ರೀಯರ ಸ್ಥಾನಮಾನ, ಖಾಸಗೀ ಆಸ್ತಿಗಳಿಗೆ ಸಂಬಂಧಿಸಿದ ವಿವರಣಾತ್ಮಕ ಆಕರಗಳನ್ನು ಈ ಕೃತಿಯು ಒಳಗೊಂಡಿದೆ.

'ವಿಜ್ಞಾನೇಶ್ವರರ ಮಿತಾಕ್ಷರ'. ಎಂಬ ಕೃತಿಯನ್ನು ಶ್ರೀನಿವಾಸ ಸಿರನೂರಕರ್ (೨೦೦೫) ಅವರು ರಚಿಸಿದ್ದಾರೆ. ಈ ಕೃತಿಯು ಸರ್ವಶ್ರೇಷ್ಠ ವ್ಯಾಖ್ಯಾನಕಾರ, ಯಾಜ್ಞವಲ್ಕ್ಯ ಸ್ಮೃತಿಗೆ ವ್ಯಾಖ್ಯಾನ ಬರೆದ ವಿಜ್ಞಾನೇಶ್ವರರ 'ಮಿತಾಕ್ಷರ' ದ ಬಗ್ಗೆ ಸಂಪೂರ್ಣವಾದ ಮಾಹಿತಿ ನೀಡುತ್ತದೆ. ಮಿತಾಕ್ಷರ ಭಾರತೀಯ ನ್ಯಾಯಶಾಸ್ತ್ರದ ಅಡಿಗಲ್ಲು ಎಂದು ಪ್ರಸಿದ್ಧಿ ಪಡೆದಿದೆ. ''ಮಿತಾಕ್ಷರವಿಲ್ಲದ ಹಿಂದು ನ್ಯಾಯಶಾಸ್ತ್ರ, ಭಾರತೀಯ ನ್ಯಾಯ ಪದ್ಧತಿಯ ಬೆಳವಣಿಗೆ ಊಹಿಸುವುದು ಕಷ್ಟ. ಇಂದಿಗೂ ಯಾವುದೇ ಧರ್ಮಸೂಕ್ಷ್ಮದ ಸಂಘರ್ಷ ಏರ್ಪಟ್ಟಾಗ, ವಿಷಯಗಳ ಪ್ರತಿಪಾದನೆಯಲ್ಲಿ, ಅರ್ಥೈಸುವಲ್ಲಿ ಗೊಂದಲ ಉಂಟಾದಾಗ ಭಾರತದ ಸುಪ್ರಿಂಕೋರ್ಟ್ ಮೊರೆ ಹೋಗುವುದು ಮಿತಾಕ್ಷರಕ್ಕೆ.'' (ಪು ೨೯) ಈ ಹೇಳಿಕೆಯೇ ಈ ಗ್ರಂಥದ ಮಹತ್ವವನ್ನು ಹೇಳುತ್ತದೆ. ಮಿತಾಕ್ಷರ ಮತ್ತು ಮಹಿಳೆ ಎಂಬ ಅಧ್ಯಾಯದಲ್ಲಿ ವಿಧವಾ ವಿವಾಹ, ಸ್ತ್ರೀಯರ ಆಸ್ತಿ ಹಕ್ಕು-ವಾರಸುದಾರಿಕೆ, ಉತ್ತರಾಧಿಕಾರ, ಮಗಳಿಗಿರುವ ಹಕ್ಕು, ತಾಯಿ ಮೊದಲು, ಸ್ತ್ರೀಧನ, ಸ್ತ್ರೀಧನದ ಉತ್ತರಾಧಿಕಾರ, ವ್ಯಭಿಚಾರ, ಹೇಯ ಅಪರಾಧಗಳು ಹೀಗೆ ಸಮಾಜದ ಎಲ್ಲಾ ಹಕ್ಕು, ಅಧಿಕಾರ, ಕಾರ್ಯಗಳನ್ನು ನ್ಯಾಯಶಾಸ್ತ್ರದ ಒಳಗೆ ತರಲಾಗಿದೆ.

ಹೆಣ್ಣು ಮಕ್ಕಳ ಹಕ್ಕಿಗೆ ಸಂಬಂಧಿಸಿದಂತೆ ಮಿತಾಕ್ಷರ ದಯಪಾಲಿಸಿರುವ ಅವಕಾಶಗಳನ್ನು ಪ್ರಾಯಶಃ ಬೇರೆ ಯಾವ ಪದ್ಧತಿಯೂ ನೀಡಿಲ್ಲವೆಂಬುದು ಗಮನಾರ್ಹ. ಹೆಣ್ಣು ಮಕ್ಕಳಿಗೆ ವಿಶೇಷ ರಕ್ಷಣೆಯನ್ನು ಒದಗಿಸುತ್ತದೆ. ''ಸಾಮಾನ್ಯವಾಗಿ ಮಹಿಳೆಯರನ್ನು ನ್ಯಾಯ ತೀರ್ಮಾನ ಸಂದರ್ಭದಲ್ಲಿ ಸಾಕ್ಷಿಗಳನ್ನಾಗಿ ಕರೆಯಬಾರದೆಂದು ಮಿತಾಕ್ಷರ ಬಯಸುತ್ತದೆ. ಅಲ್ಲದೆ ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ ಪ್ರಕರಣಗಳನ್ನು, ಘೋರ ಅಪರಾಧಗಳೆಂದು ಘೋಷಿಸಿ ಯಾವುದೇ ವಿಳಂಬವಿಲ್ಲದೆ ಪ್ರಕರಣದ ವಿಚಾರಣೆಗೆ ಅನುವು ಮಾಡಿಕೊಡುತ್ತವೆ.'' (ಪು ೧೧೫) ಒಟ್ಟಾರೆಯಾಗಿ ಮಿತಾಕ್ಷರ ನ್ಯಾಯಶಾಸ್ತ್ರದ ಮಹತ್ವದ ಆಕರವಾದಂತೆ ಮಹಿಳಾ ಹಕ್ಕು, ಕಾನೂನುಗಳ ಅಧ್ಯಯನಕ್ಕೆ ಕೂಡ ಆಕರ ಗ್ರಂಥವಾಗಿದೆ.

ಗೀತಾ ಕೃಷ್ಣಮೂರ್ತಿ ಅವರ 'ಮಹಿಳೆ ಕಾನೂನು ಮತ್ತು ರಾಜಕಾರಣ' ಕೃತಿಯು ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದ ಮಹತ್ವದ ಕೃತಿಗಳಲ್ಲಿ ಒಂದು. ಮಹಿಳೆ ಮತ್ತು ಕಾನೂನು ಹಾಗೂ ಮಹಿಳೆ ಮತ್ತು ರಾಜಕಾರಣ ಎಂಬ ಎರಡು ಭಾಗಗಳನ್ನು ಈ ಕೃತಿಯು ಒಳಗೊಂಡಿದೆ.

ಭಾಗ ಒಂದರಲ್ಲಿ ಮಹಿಳೆಗೆ ಸಂಬಂಧಿಸಿದ ಎಲ್ಲಾ ಕಾನೂನುಗಳನ್ನು, ಬೆಳವಣಿಗೆಗಳನ್ನು ಮಹಿಳಾ ಅಧ್ಯಯನದ ದೃಷ್ಟಿಯಿಂದ ವಿವೇಚಿಸಲಾಗಿದೆ. ಮಹಿಳೆಯರ ಆಸ್ತಿ ಹಕ್ಕಿಗೆ ಸಂಬಂಧಿಸಿದ ಕಾನೂನು ಮಾಹಿತಿಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ ಲೇಖಕರು. ವರದಕ್ಷಿಣೆ, ವಿವಾಹ ಕಾನೂನು, ವಿವಾಹ ವಿಚ್ಛೇದನೆ, ಕುಟುಂಬ ನ್ಯಾಯಾಲಯ, ವೇಶ್ಯಾವೃತ್ತಿ, ಅತ್ಯಾಚಾರ, ರಾಷ್ಟ್ರೀಯ ಮಹಿಳಾ ಆಯೋಗ ಹೀಗೆ ಇನ್ನಿತರ ಮಹಿಳಾ ಕ್ಷೇತ್ರಗಳಲ್ಲಿನ ಮಜಲುಗಳನ್ನು ವಿಶ್ಲೇಷಿಸುವ ಮೂಲಕ ಮಹಿಳೆಯ ಉನ್ನತಿಯನ್ನು ಸಾಧಿಸುವಲ್ಲಿ ಕಾನೂನು ಯಾವ ಪಾತ್ರ ವಹಿಸಬಲ್ಲದು ಎಂಬುದನ್ನು ಇಲ್ಲಿ ತಿಳಿಯಬಹುದಾಗಿದೆ.

ಎರಡನೆ ಭಾಗದಲ್ಲಿ ದೇಶದ ಮಹಿಳಾ ಚಳುವಳಿಗಳು, ಸಕ್ರಿಯ ರಾಜಕಾರಣದಲ್ಲಿ ಮಹಿಳೆ ಮತ್ತು ಮೀಸಲಾತಿಗಳ ಬಗೆಗೆ ಚರ್ಚಿಸಲಾಗಿದೆ.

ಪ್ರಸಿದ್ಧ ಪರಿಸರವಾದಿ, ಮಹಿಳಾ ಚಿಂತಕಿ ವಂದನಾಶಿವ ಅವರ 'ಭಾರತದಲ್ಲಿ ಮಹಿಳೆ, ಅಭಿವೃದ್ಧಿ ಮತ್ತು ಇಕಾಲಜಿ' ಗ್ರಂಥದ ಕನ್ನಡಾನುವಾದವೇ 'ಬತ್ತದ ಚಿಲುಮೆ', ಅನುವಾದಕರು ಮಾದವ ಐತಾಳ (೨೦೦೫).

ಭಾರತದಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಪರಿಸರ ಮತ್ತು ಮಹಿಳೆ ಇಬ್ಬರೂ ಹತ್ತಿಕ್ಕಲ್ಪಟ್ಟಿದ್ದಾರೆ. ಬಹುಸಂಖ್ಯೆಯ ಹೆಣ್ಣು ಮಕ್ಕಳ ಸ್ಥಿತಿ ಶೋಚನೀಯವಾಗಿದೆ. ಹಕ್ಕು ನಿರಾಕರಣೆ, ಶೋಷಣೆಗಳಿಂದ ಮಹಿಳೆಯರು ಸಂತ್ರಸ್ತರಾಗಿದ್ದಾರೆ. ಪರಿಸರ, ಅಭಿವೃದ್ಧಿ ಮತ್ತು ಇಕಾಲಜಿ ಇವು ಒಂದಕ್ಕೊಂದು ಪೂರಕ. ಈ ನಿಟ್ಟಿನಲ್ಲಿ ದೇಶದಲ್ಲಿ ನಡೆಯುತ್ತಿರುವುದನ್ನು ದಿಟ್ಟವಾಗಿ ಈ ಗ್ರಂಥದಲ್ಲಿ ಲೇಖಕರು ವಿವರಿಸಿದ್ದಾರೆ. ಸುಮಾರು ಏಳು ಅಧ್ಯಾಯಗಳಲ್ಲಿ ಮಹಿಳೆಗೆ ಸಂಬಂಧಿಸಿದಂತೆ ಎಲ್ಲಾ ವಿಷಯಗಳನ್ನು ವಿಮರ್ಶಿಸಲು ಪ್ರಯತ್ನಿಸಿ ಸಫಲರಾಗಿದ್ದಾರೆ. ಮಹಿಳಾ ದೃಷ್ಟಿಕೋನದಿಂದ ಪ್ರಕೃತಿ, ಅರಣ್ಯ ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ನಿರ್ವಚನ ಈ ಗ್ರಂಥದಲ್ಲಿದೆ.

ಗೀತಾ ಕೃಷ್ಣಮೂರ್ತಿ ಅವರ 'ಮಹಿಳೆ ಸಮಾಜ ಕಾನೂನು' (೨೦೦೭) ಪುಸ್ತಕದಲ್ಲಿರುವ ಎಲ್ಲಾ ಲೇಖನಗಳು ಮಹಿಳಾ ಸಂಬಂಧೀ ಲೇಖನಗಳು. ಮಹಿಳೆಯರ ವಿರುದ್ಧ ನಡೆಯುತ್ತಿರುವ ಶೋಷಣೆ, ಅತ್ಯಾಚಾರ, ವರದಕ್ಷಿಣೆ ಕಿರುಕುಳ, ಕೌಟುಂಬಿಕ ಕ್ರೌರ್ಯ, ಹೆಣ್ಣು ಭ್ರೂಣಹತ್ಯೆ ಇನ್ನಿತರ ಸಮಸ್ಯೆಗಳನ್ನು ಬಿಚ್ಚಿಟ್ಟಿದ್ದಾರೆ. ''ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕು ಸಮಾನತೆಯತ್ತ ಮಹತ್ವದ ಹೆಜ್ಜೆ'' ಎಂಬ ಲೇಖನದಲ್ಲಿ ೧೯೫೦ ರ ಹಿಂದೂ ಉತ್ತರಾಧಿಕಾರ ತಿದ್ದುಪಡಿ ಕಾಯ್ದೆ ಬಗ್ಗೆ ಬರೆದಿದ್ದಾರೆ. (ಪು ೧೭, ೨೫) ''ಸ್ತ್ರೀಯರಿಗೂ ಪುರುಷರಿಗೂ ಸಮಾನ ಹಕ್ಕುಗಳನ್ನು ನೀಡಿ ಮಹಿಳೆಯರಿಗೆ ಹೊಸ ದಿಗಂತವನ್ನೇ ತೆರೆದಿದೆ. ಆದರೂ ವಿವಿಧ ಮತಗಳಿಗೆ ಸಂಬಂಧಿಸಿದ ವೈಯಕ್ತಿಕ ಕಾನೂನುಗಳಲ್ಲಿ ಸ್ತ್ರೀ ಪುರುಷರ ಹಕ್ಕುಗಳಲ್ಲಿ ತಾರತಮ್ಯ ಉಳಿದುಕೊಂಡೇ ಬಂದಿದೆ. ಇದರಿಂದಾಗಿ ನಮ್ಮ ದೇಶದಲ್ಲಿ ಸ್ತ್ರೀ ಪುರುಷರು ಸಂವೈಧಾನಿಕವಾಗಿ ಸಮಾನರಾದರೂ ಅವರ ವೈಯಕ್ತಿಕ ಕಾನೂನಿನ ಅಡಿಯಲ್ಲಿ ಅಸಮಾನರು.'' (ಪು ೧೪) ಎಂದು ಹೇಳುತ್ತಾ ಸಮಾನತೆಯಡಿಯಲ್ಲಿನ ಅಸಮಾನತೆಯನ್ನು ಬೆಟ್ಟುಮಾಡಿ ತೋರಿಸುತ್ತಾರೆ. ಪ್ರಸ್ತುತ ಕಾಯ್ದೆಯಲ್ಲಿ ಮಹಿಳೆಯರಿಗಿರುವ ಆಸ್ತಿಹಕ್ಕುಗಳ ಪ್ರಮುಖ ಅಂಶಗಳನ್ನು ಈ ಕೃತಿಯಲ್ಲಿ ನೀಡಿದ್ದಾರೆ.

'ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು' (೨೦೦೨) ಕೃತಿಯ ಲೇಖಕರು ಪ್ರೀತಿ ಶುಭ ಚಂದ್ರ. ಈ ಕೃತಿಯಲ್ಲಿ ಎರಡು ಭಾಗಗಳನ್ನು ಮಾಡಲಾಗಿದೆ. ಭಾಗ ಒಂದರಲ್ಲಿ ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳ ಮತ್ತು ಪ್ರಮುಖ ಪರಿಕಲ್ಪನೆಗಳ ಬಗೆಗೆ, ಸ್ತ್ರೀವಾದದ ಹೊಸ ಆಯಾಮಗಳ ಬಗೆಗೆ ಚರ್ಚಿಸಲಾಗಿದೆ. ಭಾಗ ೨ ರಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ಭಾರತದಲ್ಲಿ ಸ್ವಾತಂತ್ರ್ಯೋತ್ತರ ಕಾಲಗಳಲ್ಲಿನ ಮಹಿಳಾ ಚಳುವಳಿಗಳ ಬಗ್ಗೆ ಚರ್ಚಿಸಲಾಗಿದೆ. ಬಂಗಾಲದ ತೇಭಾಗ ಚಳುವಳಿ, ವಾರ್ಲಿ ಚಳುವಳಿ, ತೆಲಂಗಾಣ ಹೋರಾಟ (ಪು ೩೦೬-೩೧೦) ಗಳಲ್ಲಿ ಮಹಿಳೆಯರ ಪಾತ್ರಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಒಟ್ಟಾರೆ ಮಹಿಳೆಯರ ಚಳುವಳಿಗಳ ಬಗೆಗೆ ಮಹತ್ತರವಾರ ವಿಷಯಗಳನ್ನು ಈ ಗ್ರಂಥವು ಒಳಗೊಂಡಿದೆ.

ಭಾರತದ ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್ ಅವರ 'ಮಾನುಷಿಯ ಮಾತು', ಅದರ ಅನುವಾದಕರು ಎಲ್.ಜಿ. ಮೀರಾ (೧೯೯೭). ಮಹಿಳೆಯರ ಮೂಲಭೂತ ಹಕ್ಕುಗಳ ನಿರಾಕರಣೆ, ಶಾಹಬಾನು ವಿವಾದ, ವರದಕ್ಷಿಣೆ ನಿಷೇಧದ ಬಗೆಗೆ ಮರುಚಿಂತನ, ಚಳುವಳಿ, ಹೋರಾಟ ಹಾಗೂ ಮಾನವ ಹಕ್ಕುಗಳ ಬಗೆಗೆ ಆಳವಾದ ಸ್ತ್ರೀಪರವಾದ ಚಿಂತನೆಯ ಮೇಲೆ ಬೆಳಕು ಚೆಲ್ಲುತ್ತದೆ.

ಮಹಿಳೆಯರ ದಾಸ್ಯದ ಬಗ್ಗೆ ''ಸಂವಿಧಾನ ಕೊಡುವ ಹೆಚ್ಚು ಕಡಿಮೆ ಎಲ್ಲ ಮೂಲಭೂತ ಹಕ್ಕುಗಳನ್ನು ಕುಟುಂಬದಲ್ಲಿನ ಬಲಿಷ್ಠ ವ್ಯಕ್ತಿಗಳು ಹೆಂಗಸರಿಂದ ಕಿತ್ತುಕೊಳ್ಳುತ್ತಾರೆ'' ಎಂದು ಹೇಳುತ್ತಾರೆ. ಪ್ರಥಮವಾಗಿ ಕುಟುಂಬದಿಂದಲೇ ಮಹಿಳೆಯರ ಹಕ್ಕುಗಳನ್ನು ನಿರಾಕರಿಸುವುದರ ಜೊತೆಗೆ ಪುರುಷರ ಅಧೀನದಲ್ಲಿರುವಂತೆ, ನಿಯಂತ್ರಣದಲ್ಲಿರುವಂತೆ ಮಾಡಲಾಗುತ್ತದೆ. ಆಸ್ತಿಯ ಹಕ್ಕುಗಳ ಬಗ್ಗೆ ಲೇಖಕರು ''ಆದಾಯಜನಕವಾದ ಯಾವುದೇ

ಆಸ್ತಿಯ ಮೇಲೆ ಅವರಿಗೆ (ಮಹಿಳೆಯರಿಗೆ) ಹಕ್ಕಿರುವುದಿಲ್ಲ. ಮೂಲತಃ ಗ್ರಾಮೀಣ ಸಮಾಜವಾಗಿರುವ ನಮ್ಮಂಥ ಸಮಾಜದಲ್ಲಿ ಜಮೀನು ತುಂಬ ಮುಖ್ಯವಾದ ಆಸ್ತಿರೂಪ. ಅಂದ ಮೇಲೆ ಜಮೀನಿನ ಮೇಲೆ ಹೆಂಗಸರಿಗೆ ನಿಯಂತ್ರಣ ಇಲ್ಲ ಅನ್ನುವುದು ಅವರ ದಾಸ್ಯದ ಸ್ಥಿತಿಗೆ ಸ್ಪಷ್ಟ ಸೂಚನೆ. ಅವರು ಆರ್ಥಿಕ ವಿಷಯಗಳಲ್ಲಿ ಗಂಡಸರ ನಿಯಂತ್ರಣದಲ್ಲಿರಬೇಕಾಗುತ್ತದೆ.'' (ಪು ೨೭) ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಪಶ್ಚಿಮದ ಸ್ತ್ರೀವಾದದ ಪರಿಕಲ್ಪನೆಗಿಂತ ಭಿನ್ನವಾಗಿ ಭಾರತದ ಚಿಂತನಕ್ರಮಗಳ ಮೂಲಕ ಮಹಿಳಾ ಸಮಸ್ಯೆಗಳನ್ನು ಅರ್ಥೈಸುವ ಪ್ರಯತ್ನ ಇಲ್ಲಿ ನಡೆದಿದೆ.

ತಂಬಂಡ ವಿಜಯ್ ಪೂಣಚ್ಚ ಅವರ 'ರೈತ ಚಳುವಳಿಗಳು ಸಂಪುಟ ೬' (೧೯೯೯) ಗ್ರಂಥದಲ್ಲಿ ಕರ್ನಾಟಕದ ರೈತ ಚಳುವಳಿಗಳು ಮತ್ತು ಚಳುವಳಿಗಳಲ್ಲಿ ಪಾಲ್ಗೊಂಡ ಸಂಘಟನೆಗಳನ್ನು ಪರಿಚಯಿಸಿದ್ದಾರೆ. ಹಾಗೂ ಚಳುವಳಿಯ ಪರಿಣಾಮಗಳನ್ನು ವಿಶ್ಲೇಷಿಸಿದ್ದಾರೆ. ಕರ್ನಾಟಕ ರೈತ ಸಂಘ, ಶಿವಮೊಗ್ಗ ಸಮಾಜವಾದಿ ಭೂಮಿ ಆಂದೋಲನ ಇನ್ನಿತರ ಚಳುವಳಿಗಳ ಬಗೆಗೆ ವಿಮರ್ಶೆಗಳಿವೆ. ಆದರೆ ಬಹುತೇಕ ಚಳುವಳಿಗಳಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಭಾಗವಹಿಸಿರುವ ಮಹಿಳೆಯರ ಬಗೆಗೆ ವಿಷಯ ಪ್ರಸ್ತಾಪಿಸದೇ ಇರುವುದು ಈ ಕೃತಿಯಲ್ಲಿ ಒಂದು ಕೊರತೆಯಾಗಿದೆ.

'ಮಹಿಳೆ ಕಾನೂನು ಮತ್ತು ನ್ಯಾಯ' (೨೦೦೩) ಗೀತಾ ಕೃಷ್ಣಮೂರ್ತಿ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ). ಮಹಿಳೆಯರಿಗಾಗಿನ ಕಾನೂನುಗಳ ಮತ್ತು ನ್ಯಾಯಕ್ಕೆ ಸಂಬಂಧಿಸಿದ ಅಧ್ಯಯನ ಇದಾಗಿದೆ. ಮೊದಲನೆ ಅಧ್ಯಾಯದಲ್ಲಿ ಮೂಲಭೂತವಾದ ನ್ಯಾಯ ಪರಿಕಲ್ಪನೆಯನ್ನು ವಿಶ್ಲೇಷಿಸಿದರೆ, ಎರಡನೆ ಅಧ್ಯಾಯದಲ್ಲಿ ಸಂವಿಧಾನದ ಉಪಬಂಧಗಳ ಜಾರಿಯಲ್ಲಿ ಹೊರಬಿದ್ದ ತೀರ್ಪುಗಳ ಹಿನ್ನೆಲೆಯಲ್ಲಿ ವಾಸ್ತವಿಕ ಹಾಗೂ ಔಪಚಾರಿಕ ಸಮಾನತೆಯ ಪರಿಕಲ್ಪನೆಯನ್ನು ವಿಶ್ಲೇಷಿಸಿದ್ದಾರೆ.

ವಿವಾಹ, ವಿಚ್ಛೇದನೆ, ದತ್ತಕ ಮತ್ತು ಆಸ್ತಿಗೆ ಸಂಬಂಧಿಸಿದಂತೆ ಅನ್ವಯವಾಗುವ ಕಾನೂನು, ಪುರುಷ ಪ್ರಧಾನ ಚಿಂತನೆ ಅದರಿಂದಾಗುವ ಪರಿಣಾಮಗಳನ್ನು ಮೂರನೆ ಅಧ್ಯಾಯದಲ್ಲಿ ವಿವರಿಸಿದ್ದಾರೆ. ಮಹಿಳೆಯ ಸಾಮಾಜಿಕ ಸ್ಥಾನಮಾನ, ಆಸ್ತಿ ಹಾಗೂ ಕೃಷಿ ಭೂಮಿಯ ಹಕ್ಕು ಬಗೆಗೆ ಚರ್ಚಿಸಲಾಗಿದೆ. ಕಾನೂನುಗಳ ಮೇರೆಗೆ ತೀರ್ಪು ನೀಡುವಾಗ ನ್ಯಾಯಾಧೀಶರ ಪುರುಷ ಪ್ರಧಾನ ಚಿಂತನೆಗಳು ಯಾವ ರೀತಿಯಲ್ಲಿ ಮಹಿಳೆಯರನ್ನು ನ್ಯಾಯವಂಚಿತರನ್ನಾಗಿಸುವುದರ ಬಗ್ಗೆ ಅಧ್ಯಯನದಲ್ಲಿ ವಿಶ್ಲೇಷಣೆ ಮಾಡಿದ್ದಾರೆ.

ಜೆರಾಲ್ಡಿನ್ ಫೋರ್ಬ್ಸ್ ಅವರ 'Women in modern India' ಕೃತಿಯ ಕನ್ನಡಾನುವಾದ 'ಆಧುನಿಕ ಭಾರತದಲ್ಲಿ ಮಹಿಳೆ'. ಅನುವಾದವನ್ನು ಎಚ್.ಎಸ್. ಶ್ರೀಮತಿಯವರು ಮಾಡಿದ್ದಾರೆ. ಒಟ್ಟು ಎಂಟು ಅಧ್ಯಾಯಗಳಲ್ಲಿ ಹತ್ತೊಂಬತ್ತನೆ ಶತಮಾನದ ಸುಧಾರಣೆ, ಶಿಕ್ಷಣ, ಸಂಘ ಸಂಸ್ಥೆ, ಮಹಿಳಾ ಹಕ್ಕುಗಳಿಗಾಗಿ ಚಳುವಳಿ, ರಾಷ್ಟ್ರೀಯ ಚಳುವಳಿಯಲ್ಲಿ ಮಹಿಳೆ, ಮಹಿಳೆಯರ ದುಡಿಮೆ, ಸ್ಥಿತ್ಯಂತರ ಕಾಲ ಮತ್ತು ಸ್ವತಂತ್ರ ಭಾರತದಲ್ಲಿ ಮಹಿಳೆಯರು ಹೀಗೆ ಒಟ್ಟು ಭಾರತದ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ವಿಶ್ಲೇಷಣೆಗಳಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹಿಳಾ ಹಕ್ಕುಗಳಿಗಾಗಿನ ಚಳುವಳಿಗಳನ್ನು ಮತ್ತು ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿದ ಮಹಿಳೆಯರ ಬಗೆಗಿನ ಅಧ್ಯಾಯಗಳು ಈ ಗ್ರಂಥದಲ್ಲಿರುವುದನ್ನು ಗಮನಿಸಲಾಗಿದೆ.

ಉಷಾ ಎಂ. ಅವರ 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' (೨೦೦೪) ಕೃತಿಯು ದೇಶದಲ್ಲಿ ನಡೆದ ಮಹಿಳಾ ಚಳುವಳಿಗಳ ಬಗೆಗೆ ಮತ್ತು ಪೂರಕವಾದ ವಿಷಯಗಳ ವಿಶ್ಲೇಷಣೆಗೆ ಒತ್ತು ನೀಡಿದೆ. ಸುಮಾರು ೬ ಅಧ್ಯಾಯಗಳಲ್ಲಿ ಚಳುವಳಿಗಳನ್ನು ವಿಶ್ಲೇಷಿಸುತ್ತಾ ಅವುಗಳ ಪರಿಣಾಮಗಳನ್ನು ಪ್ರಸ್ತುತ, ವಾಸ್ತವ ಸ್ಥಿತಿಗತಿಗಳನ್ನು

ನೀಡಿದ್ದಾರೆ. ಪ್ರಮುಖ ಮಹಿಳಾ ವಿಷಯಗಳು-II ಎಂಬ ಶೀರ್ಷಿಕೆಯ ನಾಲ್ಕನೆಯ ಅಧ್ಯಾಯದಲ್ಲಿ ಮಹಿಳೆಯರ ಆಸ್ತಿ ಹಕ್ಕಿನ ಬಗ್ಗೆ ವಿಚಾರಮಾಡಿರುವುದನ್ನು ಕಾಣಬಹುದು. ಆಸ್ತಿ ಹಕ್ಕಿನ ಬಗ್ಗೆ ದೇಶದಲ್ಲಿನ ನಂಬಿಕೆ, ಸಂಪ್ರದಾಯ ಹಾಗೂ ಸ್ವಾತಂತ್ರ್ಯಾನಂತರದ ಕಾನೂನು ಕಾಯ್ದೆಗಳನ್ನು ವಾಸ್ತವ ಸ್ಥಿತಿಗತಿಗಳೊಡನೆ ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಕಾನೂನು ಕಾಯ್ದೆಗಳಿದ್ದರೂ ಸಂಪೂರ್ಣವಾಗಿ ಮಹಿಳೆಯರಿಗೆ ಆಸ್ತಿ ಹಕ್ಕು ಇನ್ನು ಮರೀಚಿಕೆಯಾಗಿರುವುದನ್ನು ಗ್ರಹಿಸಿದ್ದಾರೆ. ''ಕುಟುಂಬ ಸಂಸ್ಥೆಯು ಸ್ತ್ರೀ ಪುರುಷರಿಬ್ಬರ ಸಮಾನ ನೆರವಿನಿಂದ ಊರ್ಜಿತಗೊಳ್ಳುವ ಸಂಸ್ಥೆಯಾದರೂ, ತನ್ನ ಪಿತೃ ಪ್ರಧಾನತೆಯ ಕಾರಣಕ್ಕಾಗಿ ಸ್ತ್ರೀಗೆ ಕುಟುಂಬದ ಯಾವ ಆಸ್ತಿಯ ಮೇಲೂ ಹಕ್ಕಿರುವುದಿಲ್ಲ. ಸಾಂಸ್ಕೃತಿಕ ಮೌಲ್ಯಗಳ ಮೂಸೆಯಲ್ಲಿ ರೂಪುಗೊಂಡ ಸ್ತ್ರೀಯರು (ಉದ್ಯೋಗಸ್ಥ ಸ್ತ್ರೀಯರೂ ಕೂಡ) ಆಧುನಿಕ ಸಮಾಜದಲ್ಲಿ ಇದನ್ನೊಂದು ಕೊರತೆಯಾಗಿ ಭಾವಿಸುವುದಿಲ್ಲ. ಆಸ್ತಿ ಎಂಬುದು ಪುರುಷನ ಹೆಸರಿನಲ್ಲಿರಬೇಕಾದ ವಸ್ತುವಾಗಿಯೇ ಭಾವಿಸುತ್ತಾರೆ.'' (ಪು ೧೦೮) ಇದು ಇಂದಿಗೂ ನಮ್ಮ ಗ್ರಾಮೀಣ ಸಮಾಜದಲ್ಲಿನ ವಾಸ್ತವ ಸಂಗತಿ ಎಂದು ಹೇಳಬೇಕು ಎನ್ನುವುದರ ಬಗ್ಗೆ ವಿಶ್ಲೇಷಿಸಿದ್ದಾರೆ.

ಬೋರಲಿಂಗಯ್ಯ ಹಿ.ಚಿ. ಮತ್ತು ಹುಚ್ಚಪ್ಪ ಮಾಸ್ತರ ಎನ್. ಸಂಪಾದಕತ್ವದಲ್ಲಿ ಪ್ರಕಟವಾದ 'ಕಾಗೋಡು ಚಳುವಳಿ ಸುವರ್ಣ ಸಂಪುಟ' ಕರ್ನಾಟಕದ ಸಾಮಾಜಿಕ ಮತ್ತು ರಾಜಕೀಯ ಇತಿಹಾಸದಲ್ಲಿ ಮಹತ್ವದ ಮೈಲಿಗಲ್ಲಾಗಿ ಉಳಿದ ಕಾಗೋಡು ಚಳುವಳಿಯ ಪೂರ್ಣ ವೃತ್ತಾಂತದ ಕೃತಿ ಇದಾಗಿದೆ. ಈ ಸಂಪುಟದಲ್ಲಿ ನಾಲ್ಕು ಭಾಗಗಳಿದ್ದು ಕಾಗೋಡು ಚಳುವಳಿ ನಡೆದಾಗಿನಿಂದ ಹಿಡಿದು ಇಲ್ಲಿಯವರೆಗಿನ ಸಮಸ್ತ ವಿದ್ಯಮಾನಗಳನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಚಳುವಳಿಗಾರರನ್ನು, ಅವರ ಮಾತುಗಳನ್ನು ಇಲ್ಲಿ ನೀಡಲಾಗಿದೆ. ಚಳುವಳಿಯಲ್ಲಿ ಭಾಗವಹಿಸಿದ ಮಹಿಳೆಯರ ಪರಿಚಯವನ್ನು ಭಾವಚಿತ್ರ ಸಮೇತವಾಗಿ ನೀಡಿರುವುದನ್ನು ಕಾಣಬಹುದು. (ಪು ೨೩೨, ೨೫೩)

'ಮಾನವ ಎಚ್ಚೆತ್ತಾಗ' ಗೋದಾವರಿ ಪರುಳೇಕರ್ ಅವರ ಕೃತಿಯ ಕನ್ನಡಾನುವಾದ, ಸರಸ್ವತಿ ರಿಸಬುಡ್ ಅವರು ಮಾಡಿದ್ದಾರೆ. ನೂರಾರು ವರ್ಷಗಳಿಂದ ಜಮೀನುದಾರ, ಭೂಮಾಲೀಕರ ಕ್ರೌರ್ಯವನ್ನು ಬಾಯಿಮುಚ್ಚಿ ಒಪ್ಪಿಕೊಂಡ ಮುಂಬಯಿ ಪ್ರಾಂತದ ಠಾಣೆ ಜಿಲ್ಲೆಯ 'ವಾರಲೀ' ಆದಿವಾಸಿ ಸಮುದಾಯ ಎಚ್ಚರಗೊಳ್ಳುವವರೆಗಿನ ಹೋರಾಟದ ಕತೆಯೇ ಈ ಕೃತಿಯಲ್ಲಿ ಪಡಿಮೂಡಿದೆ. ಮಹಾರಾಷ್ಟ್ರದ ಪ್ರಥಮ ಮಹಿಳಾ ಕಾನೂನು ಪದವೀಧರೆಯಾದ ಗೋದಾವರಿ ಪರುಳೇಕರ್ ರೈತ ಆಂದೋಲನದ ಒಬ್ಬ ಪ್ರಮುಖ ನಾಯಕಿಯಾಗಿ ಬೆಳೆದವರು. ಅವಿರತ ಶ್ರಮದಿಂದ ವಾರಲೀ ಆದಿವಾಸಿಯರಿಗೆ ಜಯವನ್ನು ದೊರಕಿಸಿಕೊಟ್ಟ ಧೀಮಂತ ಮಹಿಳೆ. ವಾರಲೀ ರೈತ ಮಹಿಳೆಯರ ಮೇಲಾಗುವ ಅತ್ಯಾಚಾರ, ಅನಾಚಾರ, ಶೋಷಣೆಗಳನ್ನು ಖಂಡಿಸಿ ಹೋರಾಡಿ ಸೆರೆವಾಸ ಮಾಡಿದ ಗೋದಾವರಿ ಪರುಳೇಕರ್ ಇಡೀ ವಾರಲೀ ರೈತ ಆಂದೋಲನವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾರೆ.

## ೧.೩. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಮುಖ್ಯವಾಗಿ ಈ ಕೆಳಕಂಡ ಉದ್ದೇಶಗಳ ಹಿನ್ನೆಲೆಯಲ್ಲಿ ರೂಪುಗೊಂಡಿದೆ. ಅವುಗಳೆಂದರೆ,

* ಭೂ ಒಡೆತನಕ್ಕೆ ಹಾಗೂ ಮಹಿಳೆಗೆ ಇರುವ ಸಂಬಂಧ ಮತ್ತು ಸಮಾಜದಲ್ಲಿನ ಲಿಂಗತಾರತಮ್ಯವು ಭೂ ಒಡೆತನದ ವಿಷಯದಲ್ಲಿ ಪಡೆದುಕೊಂಡಿರುವ ಸ್ವರೂಪವನ್ನು ಗುರುತಿಸುವುದು.

* ಮಹಿಳೆಯರ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಇರುವ ಕಾಯ್ದೆ, ಕಾನೂನುಗಳ ಪರಿಶೀಲನೆ ಹಾಗೂ ಭೂಮಿಗೆ ಸಂಬಂಧಿಸಿದ ವಿವಾದಗಳನ್ನು ಬಗೆಹರಿಸಿಕೊಂಡ ಬಗೆಯನ್ನು ಅರಿಯುವುದು.
* ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಭೂ ಒಡೆತನಕ್ಕೆ ನೀಡಿರುವ ಆದ್ಯತೆ ಯಾವ ರೀತಿಯದು ಎಂಬುದನ್ನು ಗಮನಿಸುವುದು.
* ರೈತ ಚಳುವಳಿಗಳಲ್ಲಿ ಮಹಿಳೆಯರ ಸಹಭಾಗಿತ್ವ ಮತ್ತು ಇದರಿಂದಾದ ಪರಿಣಾಮಗಳ ಬಗ್ಗೆ ತಿಳಿಯುವುದು.
* ಮಹಿಳೆಯರ ಭೂ ಒಡೆತನ ಮತ್ತು ಅದರ ಮೇಲಿನ ನಿಯಂತ್ರಣದ ಅಂಶಗಳು ಹಾಗೂ ಅದರ ಉತ್ಪನ್ನದ ಹಂಚಿಕೆಯನ್ನು ಅರ್ಥಮಾಡಿಕೊಳ್ಳುವುದು.
* ಮಹಿಳೆಯರು ಯಾವ ಸ್ವರೂಪದ ಭೂ ಒಡೆತನ ಹೊಂದಲು ಸಫಲರಾಗಿದ್ದಾರೆ ಎಂಬುದನ್ನು ಅಂಕಿ-ಅಂಶಗಳ ಮೂಲಕ ಕಂಡುಕೊಳ್ಳುವುದು.

**ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ**

ಹೈದ್ರಾಬಾದ್-ಕರ್ನಾಟಕದ ಐದು ಜಿಲ್ಲೆಗಳಲ್ಲಿ ಗುಲಬರ್ಗಾ ಜಿಲ್ಲೆಯು ಒಂದು. ಹೈದ್ರಾಬಾದ್-ಕರ್ನಾಟಕ ಹಿಂದುಳಿದ ಪ್ರದೇಶವೆಂದು ಮೊದಲೆ ಹಣೆಪಟ್ಟಿಯನ್ನು ಕಟ್ಟಿಕೊಂಡಿದೆ. ಕಾರಣ ಈ ಪ್ರದೇಶವು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿದೆ. ಅದರಲ್ಲೂ ಕೃಷಿಗೆ ಸಂಬಂಧಿಸಿದಂತೆ ಗುಲಬರ್ಗಾ ಜಿಲ್ಲೆಯು ಒಣ ಭೂ ಪ್ರದೇಶವನ್ನು ಹೊಂದಿದೆ. ಈ ಜಿಲ್ಲೆಯು ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿರುವುದರಿಂದ ಜಮೀನ್ದಾರಿ ಪದ್ಧತಿಯು ಇನ್ನೂ ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ. ಗುಲಬರ್ಗಾ ಜಿಲ್ಲೆಯು ಭೂ ಒಡೆತನದ ಸಂಖ್ಯೆಯಲ್ಲಿ ಮತ್ತು ಭೂಮಿಯ ವಿಸ್ತೀರ್ಣದಲ್ಲಿ ರಾಜ್ಯದಲ್ಲಿಯೇ ಎರಡನೇ ಸ್ಥಾನ ಪಡೆದಿದ್ದರೂ, ಕೃಷಿ ಕಾರ್ಮಿಕರ ಪ್ರಮಾಣದಲ್ಲಿ ಮೊದಲನೆಯ ಸ್ಥಾನದಲ್ಲಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಮಹಿಳೆಯರು ಭೂ ಒಡೆತಿಯರಾಗಿದ್ದರೂ ಸಹ ಕೃಷಿ ಕಾರ್ಮಿಕರಾಗಿರುವುದು ಕಂಡು ಬರುತ್ತದೆ. ಈ ಕಾರಣಗಳಿಂದ ಮಹಿಳೆಯರ ಭೂ ಒಡೆತನದ ಸ್ಥಿತಿಗತಿಯನ್ನು ಅರಿಯಲು ಗುಲಬರ್ಗಾ ಜಿಲ್ಲೆಯನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನಾಗಿ ತೆಗೆದುಕೊಳ್ಳಲಾಗಿದೆ.

ಜಿಲ್ಲೆಯು ಹತ್ತು ತಾಲೂಕುಗಳನ್ನು ಒಳಗೊಂಡಿದ್ದು, ಹತ್ತು ತಾಲೂಕುಗಳನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಪ್ರತಿಯೊಂದು ತಾಲೂಕಿನ ಎರಡು ಹಳ್ಳಿಗಳನ್ನು ಕ್ಷೇತ್ರಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಹಳ್ಳಿಗಳ ಆಯ್ಕೆಯಲ್ಲಿ ರ್‍ಯಾಂಡಮ್ ಪದ್ಧತಿಯನ್ನು ಅನುಸರಿಸಲಾಗಿದೆ. ಪ್ರತಿ ಹಳ್ಳಿಯ ಹತ್ತು ಕುಟುಂಬಗಳಿಗೆ ಭೇಟಿ ನೀಡಿ, ಪ್ರಶ್ನಾವಳಿ, ಸಂದರ್ಶನ, ಗುಂಪು ಚರ್ಚೆಯ ಮೂಲಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನವು ಸೈದ್ಧಾಂತಿಕ ಮತ್ತು ನಿದರ್ಶನಾತ್ಮಕ ಸ್ವರೂಪವನ್ನು ಒಳಗೊಂಡಿರುವ ಅಧ್ಯಯನವಾಗಿದೆ.

**೧.೪. ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಮೂಲಕ ಸಂಗ್ರಹಿಸಿದ ಪ್ರಾಥಮಿಕ ಮಾಹಿತಿಗಳ ಆಧಾರದ ಮೇಲೆ ಕೈಗೊಳ್ಳಲಾಗಿದೆ. ಅಲ್ಲದೆ ಅಧ್ಯಯನಕ್ಕೆ ವಿವಿಧ ಮೂಲಗಳಿಂದ ಆನುಷಂಗಿಕ ಮಾಹಿತಿಯ ಅಗತ್ಯತೆ ಇರುವುದರಿಂದ ಅವುಗಳನ್ನು ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಹಾಗೂ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಾರ್ಯಾಲಯಗಳಿಂದ ಪಡೆದುಕೊಳ್ಳಲಾಗಿದೆ. ಜಿಲ್ಲೆಯ ಬಗೆಗೆ ಮಾಹಿತಿಯನ್ನು ಮತ್ತು ಮಹಿಳಾ

ಭೂ ಒಡೆತನಕ್ಕೆ ಸಂಬಂಧಿಸಿದಂತೆ ಈಗಾಗಲೇ ಲಭ್ಯವಿರುವಂಥ ಪ್ರಕಟಿತ ಮತ್ತು ಅಪ್ರಕಟಿತ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅಲ್ಲದೆ ಆಸ್ತಿ ವಿಷಯಕ್ಕೆ ಸಂಬಂಧಿಸಿದ ಪ್ರಕರಣಗಳ ಅಧ್ಯಯನ (Case Study) ವನ್ನು ಮಾಡಲಾಗಿದೆ. ಒಟ್ಟಾರೆಯಾಗಿ ಅಧ್ಯಯನ ಬಲಗೊಳ್ಳಲು ಯಾವ ಯಾವ ಕ್ರಮ ತೆಗೆದುಕೊಳ್ಳಬೇಕು ಅವನ್ನೆಲ್ಲ ತೆಗೆದುಕೊಳ್ಳಲಾಗಿದೆ.

**ಅಧ್ಯಾಯಗಳ ವಿನ್ಯಾಸ**

ಪ್ರಸ್ತುತ ಮಹಾಪ್ರಬಂಧವು ಒಟ್ಟಾರೆ ಒಂಬತ್ತು ಅಧ್ಯಾಯಗಳ ವ್ಯಾಪ್ತಿಯನ್ನು ಹೊಂದಿದ್ದು ಪ್ರಮುಖ ಉದ್ದೇಶಗಳನ್ನು ಈ ಮುಂದಿನ ವಿಧಾನದಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅವು ಇಂತಿವೆ,

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆಯೊಂದಿಗೆ ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಅಧ್ಯಯನದ ವಿಷಯಕ್ಕೆ ಪೂರಕವಾಗಿ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಸಮೀಕ್ಷೆಯಲ್ಲಿ ಅವುಗಳ ಮಿತಿಗಳನ್ನು ಹೇಳುವುದರ ಜೊತೆಗೆ ಪ್ರಸ್ತುತ ಅಧ್ಯಯನದ ಉದ್ದೇಶಗಳೇನು ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಹಾಗೆಯೇ ಅಧ್ಯಯನದ ವ್ಯಾಪ್ತಿ, ಸ್ವರೂಪ ಮತ್ತು ಮಹತ್ವವನ್ನು ನೀಡಲಾಗಿದೆ.

ಅಧ್ಯಾಯ ಎರಡು 'ಮಹಿಳೆ, ಭೂಮಿ, ಆಸ್ತಿ, ಒಡೆತನ ಕುರಿತ ನಿರ್ವಚನ'ದ್ದಾಗಿದೆ. ಈ ಅಧ್ಯಾಯದಲ್ಲಿ ಮಹಿಳೆ, ಭೂಮಿ, ಆಸ್ತಿ ಒಡೆತನದ ಬಗೆಗೆ ವಿದ್ವಾಂಸರು, ತತ್ವಜ್ಞಾನಿಗಳು ನಿರ್ವಚಿಸಿದ ಬಗೆಯನ್ನು ಚರ್ಚಿಸಲಾಗಿದೆ. ಜೊತೆಗೆ ಮಹಿಳೆ ಮತ್ತು ಭೂ ಒಡೆತನದ ನಡುವಿನ ಸಂಬಂಧವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

'ಮಹಿಳೆ: ಭೂ ಒಡೆತನ ಮತ್ತು ಕಾನೂನು' ಎಂಬ ಮೂರನೆಯ ಅಧ್ಯಾಯದಲ್ಲಿ ಮಹಿಳೆಗೆ ನೀಡಿದ ಆಸ್ತಿ ಹಕ್ಕಿನ ಕಾಯ್ದೆ-ಕಾನೂನುಗಳ ಕುರಿತ ವಿಶ್ಲೇಷಣೆಯ ಜೊತೆಗೆ ಕೃಷಿ ಭೂಮಿಗೆ ಸಂಬಂಧಿಸಿದ ಕಾಯ್ದೆಗಳನ್ನು ಪ್ರತ್ಯೇಕವಾಗಿ ಚರ್ಚೆಗೆ ಒಳಪಡಿಸಲಾಗಿದೆ. ವಿವಿಧ ಕಾಲಘಟ್ಟಗಳಲ್ಲಿ ಮಹಿಳೆಯರ ಆಸ್ತಿಹಕ್ಕು ಮತ್ತು ಭೂಮಿಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳು ಕಂಡ ಬೆಳವಣಿಗೆಯನ್ನು ಗಮನಿಸಲಾಗಿದೆ. ಅವು ಮಹಿಳೆಯರ ಅಭಿವೃದ್ಧಿಗೆ ಎಷ್ಟರ ಮಟ್ಟಿಗೆ ಪೂರಕವಾಗಿವೆ ಎಂಬುದನ್ನು ಮತ್ತು ಅವುಗಳಿಂದಾದ ಪರಿಣಾಮಗಳ ಬಗೆಗೆ ತಿಳಿಯಲು ಪ್ರಯತ್ನಿಸಲಾಗಿದೆ.

ನಾಲ್ಕನೆ ಅಧ್ಯಾಯ 'ಭೂ ಒಡೆತನ: ಕೆಲ ಪ್ರಕರಣಗಳು'. ಈ ಅಧ್ಯಾಯದಲ್ಲಿ ಸಂವಿಧಾನವು ಮಹಿಳೆಯರಿಗೆ ಆಸ್ತಿಹಕ್ಕು ಮತ್ತು ಕೃಷಿ ಭೂಮಿಯ ಒಡೆತನದ ಹಕ್ಕನ್ನು ಪಡೆಯುವ ಕಾನೂನನ್ನು ಜಾರಿಗೆ ತಂದರೂ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರು ಎಷ್ಟರ ಮಟ್ಟಿಗೆ ನ್ಯಾಯ ಪಡೆಯಲು ಕಾನೂನಿನ ಮೊರೆ ಹೋಗಿರುವರು ಎಂದು ಅರಿಯಲು ಪ್ರಕರಣಗಳ ಅಧ್ಯಯನವನ್ನು ಮಾಡಲಾಗಿದೆ. ಅಧ್ಯಯನದ ವ್ಯಾಪ್ತಿಗೆ ಒಳಪಟ್ಟ ಗುಲಬರ್ಗಾ ಜಿಲ್ಲೆಗೆ ಸಂಬಂಧಿಸಿದ ಕೆಲವು ಭೂ ಒಡೆತನದ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಪ್ರಕರಣಗಳಲ್ಲಿ ನ್ಯಾಯಾಲಯಕ್ಕೆ ಸಂಬಂಧಿಸಿದ ಪ್ರಕರಣ ಮತ್ತು ಪಂಚಾಯತಿಗೆ ಸಂಬಂಧಿಸಿದ ಪ್ರಕರಣಗಳನ್ನು ವಿಶ್ಲೇಷಿಸಲಾಗಿದೆ.

'ಪಂಚವಾರ್ಷಿಕ ಯೋಜನೆಗಳು : ಭೂ ಒಡೆತನ ಮತ್ತು ಮಹಿಳೆ' ಎಂಬ ಐದನೆಯ ಅಧ್ಯಾಯದಲ್ಲಿ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರ ಅಭಿವೃದ್ಧಿಗೆ ಮತ್ತು ಮಹಿಳಾ ಭೂ ಒಡೆತನಕ್ಕೆ ನೀಡಿದ ಪ್ರಾತಿನಿಧ್ಯವನ್ನು

ಚರ್ಚಿಸಲಾಗಿದೆ. ದೇಶದ ಅಭಿವೃದ್ಧಿಗೆ ಪೂರಕವಾಗಿ ಜಾರಿಗೆ ತಂದಂಥ ಪಂಚವಾರ್ಷಿಕ ಯೋಜನೆಗಳು ಮಹಿಳಾ ಅಭಿವೃದ್ಧಿಗೆ ಯಾವ ರೀತಿ ಪೂರಕವಾಗಿವೆ ಎಂಬುದರ ಬಗೆಗೆ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯ 'ರೈತ ಚಳುವಳಿಗಳು ಮತ್ತು ಮಹಿಳೆ' ಎನ್ನುವ ಶೀರ್ಷಿಕೆಯದ್ದಾಗಿದೆ. ಈ ಅಧ್ಯಾಯದಲ್ಲಿ ದೇಶದ ಪ್ರಮುಖ ರೈತ ಚಳುವಳಿಗಳ ಬಗ್ಗೆ ಚರ್ಚಿಸಲಾಗಿದೆ. ದೇಶದ ಕೆಲವೇ ಕೆಲವು ಪ್ರಮುಖ ರೈತ ಚಳುವಳಿಗಳಲ್ಲಿನ ಮಹಿಳೆಯರ ಪಾತ್ರ ಮತ್ತು ಪರಿಣಾಮಗಳನ್ನು ಸ್ಥೂಲವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಕರ್ನಾಟಕ ರಾಜ್ಯದ ಪ್ರಮುಖ ರೈತ ಚಳುವಳಿಗಳಲ್ಲಿ ಮಹಿಳೆಯರ ಪಾತ್ರವೇನು? ಮತ್ತು ಚಳುವಳಿಗಳ ಮೂಲಕ ಮಹಿಳೆಯರನ್ನು ಹೊರತುಪಡಿಸಿ ಪುರುಷರಿಗಷ್ಟೇ ಸೀಮಿತವಾದ ಫಲಿತಾಂಶಗಳ ಬಗ್ಗೆ ಅಧ್ಯಯನದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

'ಭೂ ಒಡೆತನ ಮತ್ತು ಮಹಿಳೆ' ಎಂಬ ಏಳನೆಯ ಅಧ್ಯಾಯದಲ್ಲಿ ಕೃಷಿಗಣತಿಯ ಅಂಕಿ-ಅಂಶಗಳ ಆಧಾರಿತ ವಿಶ್ಲೇಷಣೆಯನ್ನೊಳಗೊಂಡಿದೆ. ಅಧ್ಯಯನದ ವ್ಯಾಪ್ತಿಯಾದ ಗುಲಬರ್ಗಾ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ ಮತ್ತು ಭೌಗೋಳಿಕ ಲಕ್ಷಣಗಳ ಸೂಕ್ಷ್ಮ ಚಿತ್ರಣವನ್ನು ನೀಡಲಾಗಿದೆ. ಅತಿ ಸಣ್ಣ, ಸಣ್ಣ, ಅರೆಮಧ್ಯಮ, ಮಧ್ಯಮ ಮತ್ತು ದೊಡ್ಡ ಭೂ ಹಿಡುವಳಿ ಹೀಗೆ ಐದು ತರಹದ ಭೂ ಹಿಡುವಳಿಗಳಲ್ಲಿ ಲಿಂಗವಾರು ಮತ್ತು ಜಾತಿವಾರು ಅಂಕಿ-ಅಂಶಗಳನ್ನು ನೀಡಲಾಗಿದೆ. ಆ ಮೂಲಕ ಮಹಿಳೆಯರ ಭೂ ಒಡೆತನದ ಸ್ಥಿತಿಗತಿಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

'ಸಮಕಾಲೀನ ಸಂದರ್ಭ : ಭೂ ಒಡೆತನದ ಹಕ್ಕುದಾರಿಕೆ' ಎಂಬ ಎಂಟನೆ ಅಧ್ಯಾಯದಲ್ಲಿ ಮಹಿಳಾ ಭೂ ಒಡೆತನದ ಬಗೆಗಿನ ಸಾಮಾಜಿಕ ಗ್ರಹಿಕೆಗಳು, ಮಹಿಳೆ ಭೂ ಒಡೆತನ ಪಡೆದ ಹಿನ್ನೆಲೆ, ಒಡೆತನ ಹೊಂದಿರುವ ಭೂಮಿಯ ಸ್ವರೂಪ, ಮಹಿಳೆ ಒಡೆತನ ಹೊಂದಿದ ಭೂಮಿಯ ನಿಯಂತ್ರಣ ಮತ್ತು ನಿರ್ವಹಣೆ ಹಾಗೂ ಆಸ್ತಿಗೆ ಸಂಬಂಧಿಸಿದ ಕಾನೂನಿನ ಅರಿವು ಹೀಗೆ ಮಹಿಳಾ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಮೂಲಕ ಗುಲಬರ್ಗಾ ಜಿಲ್ಲೆಯ ಗ್ರಾಮೀಣ ಪ್ರದೇಶದ ಮಹಿಳೆಯರ ಅಭಿಪ್ರಾಯಗಳನ್ನು ಅಂಕಿ-ಅಂಶಗಳ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಗುಲಬರ್ಗಾದಂಥ ಹಿಂದುಳಿದ ಜಿಲ್ಲೆಯಲ್ಲಿನ ಮಹಿಳೆಯರು ತಮಗಿರುವ ಭೂ ಒಡೆತನದ ಹಕ್ಕಿನ ಬಗ್ಗೆ ಎಷ್ಟರ ಮಟ್ಟಿಗೆ ತಿಳಿದುಕೊಂಡಿದ್ದಾರೆ, ಮತ್ತು ತಿಳಿದುಕೊಳ್ಳದೆ ಇರಲು ಕಾರಣಗಳೇನು? ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಪ್ರಬಂಧದ ಕೊನೆಯ ಅಧ್ಯಾಯ 'ಸಮಾರೋಪ'. ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಕೋಷ್ಟಕಗಳನ್ನು ಮತ್ತು ಆಕರ ಸೂಚಿಯನ್ನು ನೀಡಲಾಗಿದೆ.

### ೧.೫. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಮಹಿಳಾ ಭೂ ಒಡೆತನವನ್ನು ಕೇಂದ್ರವಾಗಿರಿಸಿಕೊಂಡು ಮಹಿಳಾ ದೃಷ್ಟಿಕೋನದ ಹಿನ್ನೆಲೆಯಲ್ಲಿ ರೂಪುಗೊಂಡಿದ್ದು, ಮಹಿಳಾ ಅಧ್ಯಯನ ಕ್ಷೇತ್ರಕ್ಕೊಂದು ಹೊಸ ಸೇರ್ಪಡೆಯಾಗಬಹುದು. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ನಿರ್ಲಕ್ಷ್ಯಕ್ಕೊಳಗಾದ ಮಹಿಳಾ ಭೂ ಒಡೆತನದ ಬಗೆಗೆ ಆಳವಾಗಿ ಚಿಂತಿಸುವ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಬೇರೂರಿರುವ ಒಡೆತನದ ಬಗೆಗಿನ ತಾರತಮ್ಯಗಳನ್ನು ಪ್ರಶ್ನಿಸುವ ಮತ್ತು ಈ ಬಗೆಯ ಸಾಮಾಜಿಕ ಧೋರಣೆಯ ಹಿಂದಿರುವ ತಾತ್ವಿಕತೆಯನ್ನು ತಿಳಿಸುವ ಮಹತ್ವದ ಕೆಲಸ ಈ ಅಧ್ಯಯನದ್ದಾಗಿದೆ.

ಅಲ್ಲದೆ ಮಹಿಳೆಯರ ಅಭಿವೃದ್ಧಿಗೆ ರೂಪುಗೊಂಡಿರುವ ಆಸ್ತಿ ಹಕ್ಕಿನ ಕಾಯ್ದೆಗಳು ಮಹಿಳೆಯರಿಗೆ ಎಷ್ಟರ ಮಟ್ಟಿಗೆ ಉಪಯೋಗವಾಗುತ್ತಿವೆ? ಮಹಿಳೆಯರಿಗೆ ಆಸ್ತಿ ಹಕ್ಕು ಕಾಯ್ದೆಯ ಬಗೆಗೆ ಇರುವ ಅರಿವಿನ ಕುರಿತು ಮತ್ತು ಮಹಿಳೆಯರ ದೃಷ್ಟಿಯಲ್ಲಿ ಭೂ ಒಡೆತನ ಎಂದರೇನು? ಮಹಿಳೆಯರಿಗೆ ಎಷ್ಟರಮಟ್ಟಿಗೆ ಕೃಷಿ ಭೂ ಒಡೆತನ ದೊರಕಿದೆ? ಹಾಗೂ ಭೂ ಒಡೆತನ ಹೊಂದಿರುವ ಮಹಿಳೆಯು ಅದರ ಮೇಲೆ ನಿಯಂತ್ರಣ ಮತ್ತು ನಿರ್ವಹಣೆ ಪಡೆದಿರುವಳೆ? ಎಂಬುದನ್ನು ಮಹಿಳಾ ಭೂ ಒಡೆತನದ ಹಿನ್ನೆಲೆಯಲ್ಲಿ ನಡೆಸಿದ ಚಿಂತನೆಯನ್ನು ಈ ಅಧ್ಯಯನವು ಒಳಗೊಂಡಿದೆ.

ಒಟ್ಟಿನಲ್ಲಿ ಈ ಅಧ್ಯಯನವು ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಅದರಲ್ಲೂ ಗುಲಬರ್ಗಾದಂಥ ಹಿಂದುಳಿದ ಪ್ರದೇಶದಲ್ಲಿ ಮಹಿಳಾ ಭೂ ಒಡೆತನದ ಸ್ಥಿತಿಗತಿಯ ಹಿಂದಿರುವ ಕಾರಣಗಳನ್ನು ತಿಳಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಬಲ್ಲದು. ಅಲ್ಲದೆ ಈಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿನ ಮಹಿಳಾ ಭೂ ಒಡೆತನದ ಬಗೆಗಿನ ಧೋರಣೆಗಳು ಬದಲಾಗಬೇಕೆಂಬ ಆಶಯದ ಹಿನ್ನೆಲೆಯಲ್ಲಿ ಅಧ್ಯಯನ ರೂಪುಗೊಂಡಿದ್ದು ಈ ನಿಟ್ಟಿನಲ್ಲಿ ಜನರ ಆಲೋಚನೆಗಳನ್ನು ಬದಲಾಯಿಸುವ ಪ್ರಯತ್ನ ಈ ಅಧ್ಯಯನದ ಆಶಯ ಮತ್ತು ಮಹತ್ವವಾಗಿದೆ.

* * *

## ಅಧ್ಯಾಯ - ಎರಡು

# ಮಹಿಳೆ, ಭೂಮಿ, ಆಸ್ತಿ, ಒಡೆತನ ಕುರಿತ ನಿರ್ವಚನ

## ಮಹಿಳೆ, ಭೂಮಿ, ಆಸ್ತಿ, ಒಡೆತನ ಕುರಿತ ನಿರ್ವಚನ

ಪ್ರಸ್ತುತ ಅಧ್ಯಾಯದಲ್ಲಿ ಮಹಿಳೆ, ಭೂಮಿ, ಆಸ್ತಿ, ಒಡೆತನದ ಬಗೆಗೆ ವಿದ್ವಾಂಸರು, ತತ್ವಜ್ಞಾನಿಗಳು ನಿರ್ವಚಿಸಿದ ಬಗೆಯನ್ನು ಚರ್ಚಿಸಲಾಗಿದೆ. ಜೊತೆಗೆ ಮಹಿಳೆ ಮತ್ತು ಭೂ ಒಡೆತನದ ನಡುವಿನ ಸಂಬಂಧವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೨.೧. ಮಹಿಳೆ, ಭೂಮಿ, ಆಸ್ತಿ ಮತ್ತು ಒಡೆತನದ ನಿರ್ವಚನ

### ೨.೧.೧. ಮಹಿಳೆ ಕುರಿತ ನಿರ್ವಚನ

ಭಾರತೀಯ ಸಮಾಜವನ್ನು ಗಮನಿಸಿದಾಗ ಮಹಿಳೆಯರ ಸ್ಥಿತಿಗತಿ ಸ್ಥಾನಮಾನಗಳು ಒಮ್ಮೆ ಉನ್ನತಿಯನ್ನು ಮತ್ತೊಮ್ಮೆ ಅವನತಿಯನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ.

ಮಹಿಳೆಯು ಅಂಗನೆ, ಕಾಮಿನಿ, ನಾರಿ, ನಿತಂಬಿನಿ, ಪುರಂಧ್ರಿ, ಪೆಂಗೂಸು, ಪೊಡವಿ, ಪ್ರಕೃತಿ, ಬಾಲೆ, ಭಗಿನಿ, ಮಾನಸಿ, ಮಾನಿನಿ, ಯೋಪಿತೆ, ರಮೆ, ವನಿತೆ, ವಾಮೆ, ವಿಲಾಸಿನಿ, ಸೀಮಿಂತಿನಿ, ಸ್ತ್ರೀ, ಹೆಂಗಸು, ಹೆಟ್ಟುಗೆ, ಹೆಣ್, ಅಜ, ಇಲೆ, ಕಾಂತೆ, ವಧೂಟಿ, ಚಂಡಿ, ವಶೆ, ಹೆಣ್ಣು, ವರವರ್ಣಿನಿ, ವರ್ಣಿನಿ, ವಾಮಾಕ್ಷಿ, ವಾಸಿತೆ, ವೇಣಿ, ಜೋಸೆ, ಜ್ಯಾ, ನಾರಿ, ದಯಿತೆ, ಪೆಂಡತಿ, ಪೆಣ್, ಪೆಣ್ಣೂಸು, ಪೆಣ್ಣು, ಪ್ರಮದೆ, ಭಾಮೆ, ಭುವನ, ಮಾನವಿ, ಮಾನುಷಿ, ಯುವತಿ, ಯೇಷಿತೆ, ರಮಣಿ, ರಾಮೆ, ಲಲನೆ, ಲಲಿತೆ, ವದು, ವಾಸಿತೆ, ಸಾನಿ, ಸುಂದರಿ ಹೀಗೆ ಹಲವಾರು ಹೆಸರುಗಳಿಂದ ಕರೆಯಲ್ಪಡುವಳು.

''ಸ್ತ್ರೀ ಎಂದರೆ ಭಾರತೀಯ ಸಂಸ್ಕೃತಿಯ ಪರಿಕಲ್ಪನೆಯಂತೆ ಹೆರುವವಳು, ಸೂತ್ರಿ, ಸೋತ್ರ ಎಂಬ ಧಾತುವಿನ ಅರ್ಥದಂತೆ ಹೆರುವ ಪ್ರಾಣಿ. ಸ್ತ್ರೀಗೆ ವ್ಯಕ್ತಿತ್ವವೆನ್ನುವುದೇ ಇಲ್ಲ ಗರ್ಭದ ಅಸ್ತಿತ್ವದಿಂದಲೇ ಪ್ರಾಣಿ ಎನ್ನುವ ಅರ್ಥದಲ್ಲಿ ವ್ಯಕ್ತಿತ್ವವನ್ನು ಪಡೆದುಕೊಂಡಳು ಎಂದು ಹೇಳುತ್ತದೆ. ಪುರುಷ ಬೆಟ್ಟದಷ್ಟು ಕಷ್ಟಕೊಟ್ಟರೂ, ಕೊಲ್ಲುವಷ್ಟು ಕ್ರೂರಿಯಾದರೂ ತಾಳಬೇಕೆಂಬ ಮನೋಭಾವದ ಹಿನ್ನೆಲೆಯಲ್ಲಿ ಹೆಣ್ಣು ಮಹಾ+ಇಳೆ=ಮಹಿಳೆ ಎಂದಾಗಿದೆ.'' (ಪೋತೆ ಎಚ್.ಟಿ., ೨೦೦೫, ಪು ೫೦)

''ಪ್ರಜನಾರ್ಥಂ ಸ್ತ್ರೀಯಂ ಸೃಷ್ಟಾಃ ಸಂತಾನಾರ್ಥಂ ಚ ಮಾನವಾಃ |

ತಸ್ಮಾ ತ್ಸಾ ಧಾರಣೋ ಧರ್ಮಃ ಶ್ರುತಾ ಪತ್ನ್ಯಾನ ಸಹೋದಿತಃ |'' (ಮನು ಮಹರ್ಷಿ, ೧೯೯೮, ಪು ೪೦೦) ಸ್ತ್ರೀಯರನ್ನು ಹೆರುವುದಕ್ಕಾಗಿಯೇ ಸೃಷ್ಟಿಸಲಾಗಿದೆ. ಸಂತಾನ ಸೃಷ್ಟಿಯೆ ಅವರ ಕೆಲಸ. ಸ್ತ್ರೀ ಎಂದರೆ ಒಟ್ಟಿನಲ್ಲಿ

ಹೆರುವವಳು ಎನ್ನಲಾಗಿದೆ. ಸ್ತ್ರೀ ಎಂಬ ಪದದ ಅರ್ಥವೇ ಅವಳು ಗರ್ಭಧರಿಸಲು ಯೋಗ್ಯಳು ಎಂದು ಈ ಮೇಲಿನ ಶ್ಲೋಕದಲ್ಲಿ ವಿವರಿಸಿರುವುದನ್ನು ಕಾಣಬಹುದು.

ಮಹಿಳೆಯ ಕುರಿತು ತತ್ವಜ್ಞಾನಿಗಳ ವ್ಯಾಖ್ಯಾನಗಳನ್ನು ನೋಡಿದಾಗ,

ಅರಿಸ್ಟಾಟಲ್‌ರ ಪ್ರಕಾರ - ''ದೇವನ ಪರಿಪೂರ್ಣ ಸೃಷ್ಟಿ ಗಂಡಸು. ಅಪರಿಪೂರ್ಣ ಸೃಷ್ಟಿ ಹೆಂಗಸು.'' (ಉದ್ಧೃತ: ಮಂಗಳಾ. ಟಿ.ನ., ೧೯೯೦, ಪು ೧೩) ಇವರು ಮಹಿಳೆ ಪರಿಪೂರ್ಣ ಸೃಷ್ಟಿಯಲ್ಲವೆಂದು ಪ್ರತಿಪಾದಿಸಿದ್ದಾರೆ.

ಲಿನ್ ಯುಟಾಂಗ್‌ನು - ''ಸ್ತ್ರೀಯನ್ನು ಸೃಷ್ಟಿಸುವಲ್ಲಿ ದೇವರು ಹೂವಿನ ಸೌಂದರ್ಯವನ್ನು, ಪಕ್ಷಿಗಳ ಇಂಚರವನ್ನೂ, ಕಾಮನ ಬಿಲ್ಲಿನ ಬಣ್ಣಗಳನ್ನೂ, ಮಂದಾನಿಲದ ಮೃದು ಚುಂಬನವನ್ನು, ಅಲೆಗಳ ನಗೆಯನ್ನು, ಕುರಿಯ ಸಂಭಾವ್ಯತೆಯನ್ನು, ನರಿಯ ಯುಕ್ತಿಯನ್ನು ಮೇಘಗಳ ವಕ್ರಗತಿಯನ್ನು, ಮಳೆಯ ಚಂಚಲತೆಯನ್ನು ಕಲೆಹಾಕಿ ಹೆಣ್ಣಾಗಿ ರೂಪಿಸಿ, ಅವಳನ್ನು ಮಾನವನ ಪತ್ನಿಯಾಗಿ ಉಡುಗೊರೆಯಿತ್ತನು ಎಂದಿರುವನು.

ಎಫ್ ಡಬ್ಲ್ಯೂ ಬೈನ್‌ರವರು 'ಡಿಜಿಟ್ ಆಫ್ ದಿ ಮೂನ್' ಎಂಬ ಗ್ರಂಥದಲ್ಲಿ - ''ಸ್ತ್ರೀಯನ್ನು ಸೃಷ್ಟಿಸಲು ಪ್ರಾರಂಭಿಸಿದಾಗ ಆತನಿಗೆ ಪುರುಷನನ್ನು ಸೃಷ್ಟಿಸುವುದರಲ್ಲೇ ಎಲ್ಲಾ ಸಾಮಗ್ರಿಗಳೂ ಮುಗಿದು ಹೋಗಿದ್ದವು. ಗಟ್ಟಿಯಾದ ಯಾವ ವಸ್ತುವು ಸಿಗದ ಕಾರಣ ಅವನು ಇಕ್ಕಟ್ಟಿಗೆ ಸಿಕ್ಕಿ ಸ್ತ್ರೀಯನ್ನು ಮೃದುವಾದ ವಸ್ತುಗಳಿಂದ ಸೃಷ್ಟಿಸಿ ಅವಳನ್ನು ಅಬಲೆಯನ್ನಾಗಿ ಮಾಡಿದನು. ಚಂದ್ರನ ಗುಂಡು ಆಕಾರ, ಲತೆಯ ಬಳುಕು, ಬಳ್ಳಿಯ ಸೇರಿಕೆ ಮತ್ತು ಕಂಪನ, ಜೊಂಡಿನ ದುರ್ಬಲತೆ, ಪುಷ್ಪದ ವಿಕಾಸ, ಎಲೆಗಳ ಹಗುರ, ಆನೆಯ ಸೊಂಡಿಲಿನ ಚೂಪು, ಹರಿಣಗಳ ದೃಷ್ಟಿ, ದುಂಬಿಯ ಝೇಂಕಾರ, ಸೂರ್ಯ ರಶ್ಮಿಯ ಸಂತಸ ಹಾಗೂ ಉಲ್ಲಾಸ, ಮೇಘಗಳ ರೋಧನ, ಮೊಲದ ಅಂಜಿಕೆ, ನವಿಲಿನ ವೈಯಾರ, ಗಿಣಿಯ ಅಂತರ್ಯದ ಮೃದುತ್ವ, ವಜ್ರದ ಕಠಿಣತೆ, ಮಧುವಿನ ಮಧುರತೆ, ಹುಲಿಯ ಕ್ರೂರತೆ, ಅಗ್ನಿಯ ಬೆಳಕು, ನೀಲಕಂಠ ಕಪ್ಪೆಯ ವಟಗುಟ್ಟುವಿಕೆ, ಕೋಗಿಲೆಯ ಮೇಲುಧ್ವನಿ, ಬಕಪಕ್ಷಿಯ ಬೂಟಾಟಿಕೆ, ಚಕ್ರವಾಕ ಪಕ್ಷಿಯ ವಿಧೇಯತೆ ಇವುಗಳೆಲ್ಲವೂ ಸೇರಿದಂತೆ ಸೃಷ್ಟಿಕರ್ತ ಸ್ತ್ರೀಯನ್ನು ರೂಪಿಸಿ ಮಾನವನಿಗೆ ನೀಡಿದ'' ಎಂದಿದ್ದಾರೆ. (ಉದ್ಧೃತ: ಪ್ರಭಾಮಣಿ, ೨೦೦೨, ಪು ೩) ಲಿನ್ ಯುಟಾಂಗ್ ಮತ್ತು ಎಫ್ ಡಬ್ಲ್ಯೂ ಬೈನ್‌ರವರು ಮಹಿಳೆಯು ಯಾವ ಯಾವ ಗುಣಗಳನ್ನು ಹೊಂದಿ ಸೃಷ್ಟಿಯಾಗಿರುವಳು ಎಂದು ಹೇಳುವುದರ ಜೊತೆಗೆ ಈ ಎಲ್ಲ ಗುಣಗಳೇ ಅವಳನ್ನು ಅಬಲೆಯನ್ನಾಗಿ ಮಾಡಿದವು ಎಂದಿದ್ದಾರೆ.

ಪುರುಷ ಪ್ರಧಾನ ಸಮಾಜವು ಪುರುಷರ ದೃಷ್ಟಿಕೋನದಿಂದಲೇ ರಚನೆಯಾಗಿರುವುದರಿಂದ ಪುರುಷನ ಏಳಿಗೆಯನ್ನು ಬಯಸುವಂಥದ್ದಾಗಿದೆ. ಸ್ತ್ರೀಯನ್ನು ಯಾವಾಗಲೂ ಪುರುಷನ ಅಧೀನದಲ್ಲಿಯೇ ಇರುವಂಥ ವ್ಯವಸ್ಥೆಯನ್ನು ನಿರ್ಮಿಸಿದೆ. ಅವಳು ಎಂದಿಗೂ ತನ್ನ ವಿಮೋಚನೆಯನ್ನು ಕುರಿತು ಚಿಂತಿಸದಂತೆ ಮಾಡಿದೆ. ಮಹಿಳೆಯು ತನ್ನ ಬಗ್ಗೆ ರೂಪಿತವಾದ ನಿಯಮಗಳೇ ನಿಜವಾದ ಜೀವನದ ಮೌಲ್ಯಗಳು ಎಂದು ಒಪ್ಪಿಕೊಳ್ಳುವಂತೆ ಮಾಡಲಾಗಿದೆ. ಪುರುಷನು ಹೆಣ್ಣನ್ನು ತನಗೆ ಎಷ್ಟು ಸಾಧ್ಯವೋ ಅಷ್ಟು ಶೋಷಣೆಗೆ ಈಡುಮಾಡಿ ಆ ಮೂಲಕ ತನ್ನ ಅಧೀನಕ್ಕೆ ಒಳಪಡಿಸಿಕೊಂಡಿದ್ದಾನೆ. ಮಹಿಳೆಯನ್ನು ಪ್ರಾಣಿಗೂ, ಭೂಮಿಗೂ, ಹೋಲಿಸುವುದರ ಮೂಲಕ ಅವಳ ಸ್ವಭಾವ ಕುರಿತು ಕೆಲವು ವ್ಯಾಖ್ಯಾನಗಳ ಮೂಲಕ ಹೇಳಲಾಗಿದೆ.

ಋಗ್ವೇದದಲ್ಲಿ 'ಸ್ತ್ರೀಯರು ನಂಬಿಕೆಗೆ ಅರ್ಹರಲ್ಲ, ಅವರ ಸ್ವಭಾವ ತೋಳದಂತೆ ಕಾಪಟ್ಯದಿಂದ ಕೂಡಿರುವುದು.'

ಮೈತ್ರಾಯಣೀ ಸಂಹಿತೆ 'ಹೆಣ್ಣನ್ನು ಮೂರು ಕೆಟ್ಟವಸ್ತುಗಳಲ್ಲಿ ಒಂದು ಎಂದು ಪರಿಗಣಿಸುತ್ತದೆ. ಉಳಿದವೆರಡು ಜೂಜು ಮತ್ತು ಸುರೆ.' (ಉದ್ಧೃತ: ಶೈಲಜಾ ಉಡಚಣ, ೧೯೯೧, ಪು ೫೪)

ಮಹಾಕವಿ ಕಾಳಿದಾಸ ಮಹಿಳೆಯನ್ನು ಕುರಿತು - "ಎಷ್ಟಾದರೂ ಸ್ತ್ರೀ ವಿಷಯೋಪ ಭೋಗದ ವಸ್ತು" ಎಂದಿದ್ದಾನೆ. (ಉದ್ಧೃತ: ಮಂಗಳಾ ಚಿ.ನ., ೧೯೯೦, ಪು ೧೮) ಈ ರೀತಿ ಸ್ತ್ರೀಯ ಸ್ವಭಾವವನ್ನು ಕೆಟ್ಟದ್ದು ಅವಳು ಭೋಗದ ವಸ್ತು ಎಂದರೆ, ಮನು 'ಸ್ವಾತಂತ್ರ್ಯಕ್ಕೆ ಅರ್ಹಳಲ್ಲ' ಎಂದಿರುವನು. ಸರ್ವಜ್ಞನು ಸ್ತ್ರೀಯನ್ನು ಕುರಿತು

"ಹೆಣ್ಣಿಂದೆ ಇಹವುಂಟು ಹೆಣ್ಣಿಂದೆ ಪರವುಂಟು

ಹೆಣ್ಣಿನಿಂದ ಸಕಲ ಪದಮುಂಟು

ಹೆಣ್ಣಿಂದೆ ಮರಣ ಸರ್ವಜ್ಞ" ಎಂದಿರುವರು. (ಪ್ರಭಾಮಣಿ, ೨೦೦೨, ಪು ೩೨)

ಒಟ್ಟಿನಲ್ಲಿ ಮಹಿಳೆಯನ್ನು ವಸ್ತುಗಳಿಗೆ, ಪ್ರಾಣಿಗಳಿಗೆ, ವಿಷಪಾನೀಯಗಳಿಗೆ, ಖಡ್ಗಗಳಿಗೆ ಹೋಲಿಸುವುದರ ಜೊತೆಗೆ ಪುರುಷನ ಮರಣಕ್ಕೂ ಅವಳೆ ಕಾರಣ ಎನ್ನಲಾಗಿದೆ.

ಸಮಾಜದಲ್ಲಿ ಪುರುಷನು ಯಾವಾಗಲೂ ಸ್ತ್ರೀಯನ್ನು ತನ್ನ ಅಲಂಕಾರದ ವಸ್ತುವಿಗೆ ಹೋಲಿಸಿದ್ದಾನೆ. ಅಲ್ಲದೆ ಅವಳು ಶಕ್ತಿ ಹೀನಳು, ಅವಳಿಗೆ ಆಶ್ರಯವಿಲ್ಲದೆ ಸಮಾಜದಲ್ಲಿ ಒಂಟಿಯಾಗಿ ಜೀವಿಸಲಾರಳು ಎಂದು ವಾದಿಸಿ, ಅವಳಿಗೆ ಪುರುಷನ ಆಶ್ರಯದಲ್ಲಿಯೇ ಜೀವಿಸುವಂತೆ ವ್ಯವಸ್ಥೆ ರೂಪಿಸಿದೆ. ಕುಟುಂಬದಲ್ಲಿ ಹೆಣ್ಣುಮಗು ಹುಟ್ಟುವುದೇ ಸ್ವಾಗತಾರ್ಹವಾಗಿಲ್ಲ ಆದರೆ ಗಂಡುಮಗು ಹುಟ್ಟಿದರೆ ಸಂತೋಷ ಸಮಾರಂಭಗಳನ್ನು ಆಚರಿಸುತ್ತಾರೆ. ಸಮಾಜದಲ್ಲಿ ಮಡುಗಟ್ಟಿ ನಿಂತಿರುವ ಬಾಲ್ಯವಿವಾಹ, ಸತಿ ಪದ್ಧತಿ, ಅಮಂಗಳ ಹಣೆಪಟ್ಟಿ ಹೊತ್ತಂತಹ ವಿಧವೆ, ಆಸ್ತಿಯಲ್ಲಿ ಸಮಪಾಲು ಇಲ್ಲದಿರುವುದು ಇತ್ಯಾದಿಗಳಿಂದಾಗಿ ಮಹಿಳೆಯು ಸಮಾನತೆಯಿಂದ ವಂಚಿತಳಾಗುತ್ತಲೇ ಬಂದಿದ್ದಾಳೆ. ಒಟ್ಟಿನಲ್ಲಿ ಮಹಿಳೆಯು ಶೋಷಣೆಯಿಂದ ಹೊರಗೆ ಬರಲು ಪೂರ್ಣ ಪ್ರಮಾಣದಲ್ಲಿ ಸಮಾಜ ವ್ಯವಸ್ಥೆ ಬಿಡುತ್ತಿಲ್ಲವೆಂದು ಹೇಳಬೇಕು.

**ಮಹಿಳೆಯನ್ನು ಭೂಮಿಯಾಗಿ ಕಂಡ ಬಗೆ**

ಪ್ರಾಚೀನ ಕಾಲದಿಂದಲೂ ಮಹಿಳೆಯನ್ನು ಭೂಮಿಗೆ ಹೋಲಿಸಿರುವುದನ್ನು ಸಂಸ್ಕೃತಿಯ ಬೇರೆ ಬೇರೆ ಹಂತದ ಚಿಂತನೆಗಳಲ್ಲಿ ಕಾಣಬಹುದು. ಶತಶತಮಾನಗಳಿಂದಲೂ ಸಮಾಜ ಬದಲಾವಣೆಗಳನ್ನು ಕಂಡರೂ ಸಮಾಜದಲ್ಲಿ ಮಹಿಳೆಯ ಅಸ್ತಿತ್ವವನ್ನೇ ಕಡೆಗಣಿಸಲಾಗಿದೆ.

ರೋಮನ್ ಕಾನೂನಿನ ಪ್ರಕಾರ - "ತಾಯಿ ಮತ್ತು ಮಣ್ಣು ಸಮಾನರು. ಪ್ರಾಚೀನ ಭಾರತದಲ್ಲಿ ಮದುವೆಯ ಆಚರಣೆಯಲ್ಲಿ ಸ್ತ್ರೀಯನ್ನು ಬೀಜ ಬಿತ್ತುವ ಹೊಲವೆಂದು ಕರೆಯಲಾಗುತ್ತಿತ್ತು ಮತ್ತು ಅರ್ಚಕನು ಮದುಮಗನಿಗೆ "ಅವಳ ಮೇಲೆ ನಿನ್ನ ಬೀಜವನ್ನು ಬಿತ್ತು" ಎಂದು ಹಾರೈಸುತ್ತಿದ್ದನು.

ಖುರಾನಿನ ಪ್ರಕಾರ - "ನಿಮ್ಮ ಹೆಂಗಸರು ನಿಮ್ಮ ಹೊಲ" ಎನ್ನಲಾಗಿದೆ. (ಉದ್ಧೃತ: ಸಿದ್ಧಲಿಂಗಯ್ಯ, ೨೦೦೨, ಪು ೧೧೯)

"ಕ್ಷೇತ್ರಭೂತಾ ಸ್ಮೃತಾ ನಾರೀ ಬೀಜಭೂತಃ ಸ್ಮೃತಃ ಪುಮಾನ್

ಕ್ಷೇತ್ರ ಬೀಜ ಸಮಾಯೋ ಗಾತ್ಸಂಭವಃ ಸರ್ವದೇಹಿನಂ." (ಮನು ಮಹರ್ಷಿ, ೧೯೯೮, ಪು ೩೮೭) ಮನುಸ್ಮೃತಿಯು ಸ್ತ್ರೀಯನ್ನು ಕ್ಷೇತ್ರ, ಪುರುಷನನ್ನು ಬೀಜ ಎನ್ನುತ್ತದೆ.

ಪುರುಷನು ಮಹಿಳೆಯನ್ನು ಹೇಗೆ ಬೇಕಾದರೂ ಬಳಸಿಕೊಳ್ಳುವ ಅಧಿಕಾರವನ್ನು ಸಮಾಜ ವ್ಯವಸ್ಥೆ ಕೊಡಮಾಡಿದೆ. ಹೆಣ್ಣನ್ನು ಭೂಮಿಯಂತೆ ಕಂಡ ಈ ಮನೋಭಾವದ ಹಿಂದೆ ಸಂಸ್ಕೃತಿಯಲ್ಲಿ ಹೆಣ್ಣನ್ನು ವಸ್ತುವಿನಂತೆ ಬಳಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

## ೨.೧.೨. ಭೂಮಿ ಕುರಿತ ನಿರ್ವಚನ

ಆರಂಭದಿಂದಲೂ ಭಾರತೀಯ ಸಂಸ್ಕೃತಿಯಲ್ಲಿ ಭೂಮಿಯ ಬಗ್ಗೆ ಪವಿತ್ರವಾದ ಭಾವನೆಯಿದೆ. ಸಂಸ್ಕೃತಿ ಹಾಗೂ ಅದರ ಭಾಗವಾದ ಆಚರಣೆಯ ಸಂದರ್ಭದಲ್ಲಿ ಭೂಮಿಯ ಪಾತ್ರ ಗಮನಾರ್ಹವಾದುದು. ಭೂಮಿಯನ್ನು ಹೆಣ್ಣು ಎಂದು ಪರಿಭಾವಿಸಿ ಗೌರವಾದರಗಳಿಂದ ಪೂಜಿಸುತ್ತಾ ಬಂದಿರುವುದನ್ನು ಕಾಣಬಹುದು. ಪುರಾಣ ಕಾವ್ಯಗಳಲ್ಲಿ ಭೂಮಿಯನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವ ಪ್ರಯತ್ನ ಮಾಡಿದ್ದಾರೆ. ಧರಿತ್ರಿ, ಧರಣಿ, ಕುಂಬಿನಿ, ಕನ್ನೆ, ಉರ್ವಿ, ಸ್ಥಿರೆ, ಕ್ಷಮೆ, ಭೂಮಿಕೆ, ವಿಶ್ವಂಬರೆ, ವಿಶ್ವಧಾರಿಣಿ, ಅನಂತೆ, ಇಳೆ, ಭೂದೇವಿ, ಭುವಿ, ಭೂಮಾತೆ, ಗಂಧವತಿ, ಧಾತ್ರಿ, ಧಾರಿಣಿ, ಮಹಿ, ಅವನಿ, ಅನಂತೆ, ಅಧಿತಿ, ವಸುಂಧರೆ, ವಸುಮತಿ, ಧಾರುಣಿ, ವಿಮಲೆ, ಪೊಡವಿ, ಕ್ಷಿತಿ, ವಿಪುಲೆ, ವಸುಧೆ, ಹೀಗೆ ಸ್ತ್ರೀವಾಚಕ ಹೆಸರುಗಳಿಂದ ಕರೆಯುವ ನಮ್ಮ ಸಂಸ್ಕೃತಿಯಲ್ಲಿ ಭೂಮಿಯನ್ನು ಹೆಣ್ಣಾಗಿ ಪರಿಭಾವಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಆದಿಮಾನವರಿಗೆ ಪ್ರಕೃತಿಯು ನಿಗೂಢವೂ, ರಹಸ್ಯವೂ ಆಗಿ ತೋರಿತ್ತು. ಹೀಗಾಗಿ ಪ್ರಕೃತಿ ಅವರಿಗೆ ಅಚ್ಚರಿಯನ್ನುಂಟು ಮಾಡಿದರೆ ಇನ್ನೊಂದೆಡೆ, ಗೌರವ ಭಾವನೆಯನ್ನು ಹೊಂದಿ ದೈವವಾಗಿ ಆರಾಧಿಸುತ್ತಿದ್ದರು. ಅದೇ ರೀತಿ ಹೆಣ್ಣಿನ ಋತುಸ್ರಾವ, ಗರ್ಭಧರಿಸುವಿಕೆ, ಪ್ರಜನನ ಕ್ರೀಯೆಗಳು ಪುರುಷನಲ್ಲಿ ಆಶ್ಚರ್ಯ ಹುಟ್ಟಿಸುವ ಅಂಶಗಳಾಗಿದ್ದವು. ಸಂತಾನೋತ್ಪತ್ತಿಯಲ್ಲಿ ಗಂಡಿನ ಪಾತ್ರವು ಇರುತ್ತದೆ ಎಂದು ತಿಳಿದಿರಲಿಲ್ಲ. ಹೀಗೆ ''ಆಹಾರೋತ್ಪಾದನಾ ಸಾಮರ್ಥ್ಯ ಮತ್ತು ಸಂತಾನ ಸೃಷ್ಟಿ ಇವೆರಡು ಹೆಣ್ಣಿಗೆ ಇರುವಂಥ ಮಾಂತ್ರಿಕ ಶಕ್ತಿ ಎಂಬುದು ಪ್ರಾಚೀನ ಮಾನವನ ತಿಳುವಳಿಕೆಯಾಗಿತ್ತು. ಹೆಣ್ಣಿನ ಗರ್ಭದಿಂದ ಶಿಶುವೊಂದು ಹೊರಬರುವ ರೀತಿಗೂ ಭೂಮಿಯೊಳಗಿನಿಂದ ಸಸ್ಯವೊಂದು ಕಾಣಿಸಿಕೊಳ್ಳುವುದಕ್ಕೂ ಇರುವ ಹೋಲಿಕೆಯನ್ನು ಅವರು ಕಂಡುಕೊಂಡರು. ಬೇಸಾಯದ ಮೂಲಕ ಬದುಕಿನ ಅವಶ್ಯಕತೆಯಾಗಿದ್ದ ಆಹಾರ ಪೂರೈಕೆ ಚೆನ್ನಾಗಿ ಸಾಗುತ್ತಿದ್ದ ಪರಿಸರದಲ್ಲಿ ಫಸಲನ್ನು ನೀಡಬಲ್ಲ ನೆಲದ ಶಕ್ತಿಯೂ, ಜೀವಿಗೆ ಜನ್ಮ ನೀಡುವ ಹೆಣ್ಣಿನ ಸೃಷ್ಟಿ ಸಾಮರ್ಥ್ಯವೂ ಒಂದೇ ರೀತಿಯಲ್ಲಿ ಕಂಡವು. ಲಿಂಗ ಫಲವಂತಿಕೆಯನ್ನು ಆರಾಧಿಸುವ ನಂಬಿಕೆ ಆಚರಣೆಗಳು ಹುಟ್ಟಿಕೊಂಡವು. ಹೀಗೆ ಭೂಮಿಯೂ, ತಾಯಿಯೂ ಒಂದೇ ಆಗಿ ಭೂಮಿತಾಯಿಯ ಪರಿಕಲ್ಪನೆ ಬೆಳೆಯಿತು.'' (ಸುಮಿತ್ರಾಬಾಯಿ. ಬಿ.ಎನ್., ೨೦೦೦, ಪು ೪೬೫)

ಭೂಮಿಯನ್ನು 'ಹೆಣ್ಣು' ಎಂದು ಕಂಡುಕೊಂಡವುಗಳಲ್ಲಿ ಪುರಾಣವೂ ಒಂದಾಗಿದೆ. ಪಾರ್ವತಿಯು ಭೂದೇವಿಗೆ ಶಾಪಹಾಕಿದ ಕಥೆಯು ವಾಲ್ಮೀಕಿ ರಾಮಾಯಣದ ಬಾಲಕಾಂಡದಲ್ಲಿ ಬರುತ್ತದೆ. ಈ ಕಥೆಯಲ್ಲಿ ಶಿವನು ಪಾರ್ವತಿಯ ಜೊತೆ ವರ್ಷಗಟ್ಟಲೆ ಲೈಂಗಿಕತೆಯಲ್ಲಿ ನಿರತನಾಗಿರುವಾಗ ಭೂಮಿಯು ನಡುಗಲಾರಂಭಿಸಿತು. ಆಗ ದೇವತೆಗಳೆಲ್ಲ ಶಿವನ ಬಳಿಗೆ ಬಂದು ಶಿವನಿಗೆ ಭೋಗದಿಂದ ವಿಮುಖನಾಗುವಂತೆ ಕೇಳಿಕೊಂಡರು. ಶಿವನು ಭೋಗದಿಂದ ವಿಮುಖನಾದ ಕೂಡಲೆ ಶಿವನ ವೀರ್ಯವು ಭೂಮಿಯ ಮೇಲೆ ಬಿದ್ದಿತು. ಇದರಿಂದ ಪಾರ್ವತಿಯು ಕೋಪಗೊಂಡು ಭೂದೇವಿಯನ್ನು ಕುರಿತು 'ನನ್ನನ್ನು ನೀನು ಒಬ್ಬ ಮಗನಿಗೆ ಜನ್ಮ ಕೊಡುವ ಕಾರ್ಯದಿಂದ ತಡೆದಿದ್ದಕ್ಕೆ ನೀನು ನಾನಾ ರೂಪತಾಳಿ ಹಲವರ ಹೆಂಡತಿಯಾಗು' ಎಂದು ಶಾಪಕೊಟ್ಟಳು.

ಪಾರ್ವತಿಯು ಭೂದೇವಿಗೆ ಶಾಪಕೊಟ್ಟ ಪ್ರಕಾರ ಒಮ್ಮೆ ವಿಷ್ಣುದೇವನು ಭೂದೇವಿಯೊಂದಿಗೆ ಅನುರಕ್ತನಾಗುವನು. ಇದರಿಂದ ಭೂಮಿಯು ವಿಷ್ಣುವಿನ ಹೆಂಡತಿಯಾಗಿ ಮಂಗಲ ಎಂಬ ಮಗನಿಗೆ ಜನ್ಮ ನೀಡಿದಳು ಎನ್ನುವ ಸಂಗತಿಯೊಂದಾದರೆ ಇನ್ನೊಂದೆಡೆ, ಹಿರಣ್ಯಾಕ್ಷ ಎಂಬ ಅರಸನ ಸ್ಪರ್ಶದಿಂದ ಭೂದೇವಿಯು ಗರ್ಭಿಣಿಯಾಗಿ ನರಕಾಸುರನೆಂಬ ಮಗನಿಗೆ ಜನ್ಮ ನೀಡಿದಳು. ಪಾರ್ವತಿಯು ಭೂದೇವಿಗೆ ನೀನು ಹಲವರ ಹೆಂಡತಿಯಾಗು ಎಂದು

ಶಾಪ ನೀಡಿದ ಕಾರಣ ಅವಳು ಹಲವರ ಹೆಂಡತಿಯಾಗಿರುವುದನ್ನು ಪುರಾಣಗಳಲ್ಲಿ ಕಾಣಬಹುದು. ಹೆಣ್ಣಿನ ಜೈವಿಕ ಕ್ರಿಯೆಗಳೊಂದಿಗೆ ಸಾಮ್ಯತೆ ಪಡೆದಿರುವ ಭೂಮಿಯು ಒಂದು ಹೆಣ್ಣಿನಂತೆ ಎಂದು ಈ ಪುರಾಣದ ಕಥೆಗಳಿಂದ ತಿಳಿದುಬರುತ್ತದೆ.

ವೇದಗಳ ಕಾಲದಲ್ಲಿಯೂ ಭೂಮಿಯನ್ನು ಹೆಣ್ಣಿಗೆ ಹೋಲಿಸಲಾಗಿದೆ. ''ಋಗ್ವೇದ ಕಾಲೀನ ಕಲ್ಪನೆಯಲ್ಲಿ ಆಕಾಶ (ದೌ) ವೇ ತಂದೆ, ಭೂಮಿಯೇ ತಾಯಿ. ಇವರಿಬ್ಬರ ಮುಖಾಮುಖಿ ಸಮಾಗಮದಿಂದ ಭೂಮಿಯು ಗರ್ಭಧರಿಸಿ ಬಗೆ ಬಗೆಯ ಸೃಷ್ಟಿಜೀವಿಗಳಿಗೆ ಕಾರಣಳಾದಳು.'' (ಜ್ಯೋತ್ಸ್ನಾ ಕಾಮತ್, ೧೯೯೯, ಪು ೨೩) ಎಂದು ಹೇಳಲಾಗಿದೆ. ಪುರಾಣಗಳಂತೆ ಋಗ್ವೇದದಲ್ಲಿಯೂ ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಕಾಣುವುದರ ಜೊತೆಗೆ ಭೂಮಿಯನ್ನು ಹೆಣ್ಣಿನ ಹಾಗೆ ಸೃಷ್ಟಿಯ ಸಂಕೇತವಾಗಿ ಕಾಣಲಾಗಿದೆ.

ಶಾಸನಗಳಲ್ಲಿಯೂ ಕೂಡ ಭೂಮಿಯನ್ನು ಹೆಣ್ಣಾಗಿ ಕಂಡಿರುವುದನ್ನು ಗಮನಿಸಬಹುದಾಗಿದೆ. ಚಿದಾನಂದ ಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಸಂ. ೧) ಎಂಬ ಕೃತಿಯಲ್ಲಿ ಬರುವ ಶಾಸನವೊಂದರಲ್ಲಿನ ಉಲ್ಲೇಖದಲ್ಲಿ ''ಅನ್ನದಾನ ಸಂಪೂರ್ಣರುಂ ಭೂಮಿಪುತ್ರಕರು ಮಪ್ಪ ಚಂದಗೌಡ.'' ಎಂದು ಅಂದರೆ ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದು ಹೇಳಲಾಗಿದೆ. ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಕಂಡಿರುವುದಕ್ಕೆ ಇದೊಂದು ನಿದರ್ಶನವಾಗಿದೆ.

ಭೂಮಿಯನ್ನು ತಾಯಿಯೆಂದು ಕರೆದು, ಅದರ ಕ್ರಿಯಾಶೀಲತೆ, ಶಾಂತಿ, ಪ್ರೀತಿ, ಸಹನೆಯಿಂದ ತನ್ನ ಕುಡಿಗಳನ್ನು ಕಾಪಾಡುವ ತಾಯಿ ಎನ್ನಲಾಗಿದೆ. ಅವಳು ಪಶು-ಪಕ್ಷಿ, ಮಾನವರಿಗೆ ಜೀವಕೊಟ್ಟು ಇಡೀ ತನ್ನ ದೇಹವನ್ನೇ ಆಹಾರದ ನೆಲೆಯಾಗಿ ಮಾಡಿಕೊಂಡು ಕಾಪಾಡುತ್ತಿರುವ ತಾಯಿಯಾಗಿದ್ದಾಳೆ. ಹೀಗಾಗಿ ಭೂಮಿ ಮತ್ತು ಮನುಷ್ಯರ ಸಂಬಂಧ, ತಾಯಿ ಮತ್ತು ಮಕ್ಕಳ ಸಂಬಂಧದಂತೆ ಎನ್ನಲಾಗಿದೆ. ರಾಬರ್ಟ್ ಬ್ರಿಫಾಲ್ಟನು - ''The mother and the soil are alike is a Principle of Roman Jurisprudence. In ancient india, at the wedding ceremany, the women was called a seed field, & the prest exhorted the bride-groom, saying sow her with your seed.

Thus it is that in many religious man is stated to have been created out of the earth. In vedichymns the earth is the mother of man in persia also. The world homo is a derivitive of humus, & adam was fasioned from the earth. Lucretious declares that animals cannot have fallen from the sky. Nor the inhabitants of earth have issued out of lagoons of salt water, rightly has the earth been called mother for out of the earth all things have been created.'' ( ಕೃಷ್ಣಪ್ಪ. ಜಿ., ೨೦೦೧, ಪು ೨೫೦) ಹೀಗೆ ರೋಮನ್ನರು, ಭಾರತೀಯರು, ಪರ್ಶಿಯನ್ನರು, ಭೂಮಿಯನ್ನು ತಾಯಿಯಾಗಿ ಕಂಡಿರುವರು.

ಜೇಷ್ಠಮಾಸ ಕೊನೆಯಲ್ಲಿ ಅಥವಾ ಆಷಾಡಮಾಸದ ಮೊದಲಲ್ಲಿ ಬರುವ 'ಅಂಬುವಾಚಿ' ದೇವಿಯ ವಾರ್ಷಿಕ ಉತ್ಸವದ ಮೊದಲಲ್ಲಿ ಆಚರಿಸಲ್ಪಡುತ್ತದೆ. ಆದಿಮಾತೆಯು ಕೃಷಿ ಸಂಬಂಧಿತ ಚಟುವಟಿಕೆಗಳನ್ನೆಲ್ಲ ಮೂರು ದಿನಗಳ ಕಾಲ ಸ್ಥಗಿತಗೊಳ್ಳಲು ಕಾರಣಳಾಗುತ್ತಾಳೆ. ಏಕೆಂದರೆ ''ಅಂಬುವಾಚಿ (ಅಂಬು=ಮಳೆ, ವಾಚಿ= ಅರಳುವುದು)ಯ ಅವಧಿಯಲ್ಲಿ ಭೂಮಿಯು ರಜಸ್ವಲೆಯಾಗುತ್ತಾಳೆ ಎಂದು ಆಗ ನೆಲಕ್ಕೆ ನೇಗಿಲು ಹತ್ತ ಕೂಡದು. ಭೂಮಿ ತಾಯಿಯನ್ನು ನೋಯಿಸಕೂಡದು.'' (ಜ್ಯೋತ್ಸ್ನಾ ಕಾಮತ್, ೧೯೯೯, ಪು ೨೧) ಎಂಬ ನಂಬಿಕೆಗಳಿವೆ.

ಹೀಗೆ ಅಸ್ಸಾಮಿನ ಜನರು ಮಹಿಳೆಯಂತೆ ಭೂಮಿಯು ರಜಸ್ವಲೆ ಆಗುವಳು ಎಂದು ನಂಬಿರುವುದರಿಂದ ಭೂಮಿಯನ್ನು ಹೆಣ್ಣಿಗೆ ಹೋಲಿಸಿರುವರು. ಒರಿಸ್ಸಾದಲ್ಲಿಯೂ ''ರಜ ಉತ್ಸವ'' ವು ಹೆಣ್ಣು ಮಕ್ಕಳ ಹಬ್ಬವಾಗಿದೆ. ಕಾಶ್ಮೀರದಲ್ಲಿಯೂ ಸೂರ್ಯ ಪತ್ನಿಯೆಂದು ಭೂದೇವಿಯ ಋತುಸ್ನಾನದ ಪೂಜೆಯನ್ನು ಸ್ತ್ರೀಯರೆ ಮಾಡುತ್ತಾರೆ.'' (ಜ್ಯೋತ್ಸ್ನಾ ಕಾಮತ್, ೧೯೯೯, ಪು ೨೧) ಈ ಎಲ್ಲ ಪೂಜೆಗಳು ಭೂದೇವಿಯನ್ನು ಕುರಿತು ಒಳ್ಳೆಯ ಫಸಲನ್ನು ನೀಡುವಂತೆ ಆರಾಧಿಸುವ ಪೂಜೆಗಳೆ ಆಗಿವೆ.

ಭೂಮಿಯು ಬೇಡಿದ್ದನ್ನು ಕೊಡುವ, ಇಷ್ಟಾರ್ಥಗಳನ್ನು ಈಡೇರಿಸುವ ಶಕ್ತಿ ಅವಳಿಗೆ ಇರುವುದರಿಂದ ಭೂಮಿಯನ್ನು ಕಲ್ಪವೃಕ್ಷಕ್ಕೂ, ಕಾಮದೇನುವಿಗೂ, ಚಿಂತಾಮಣಿಗೂ ಹೋಲಿಸಲಾಗಿದೆ. ಕೃಷಿ ಸಂಬಂಧಿ ಆಚರಣೆಯಾದ ಸೀಗೆ ಹುಣ್ಣಿಮೆಯಲ್ಲಿ ಚರಗ ಚೆಲ್ಲುವ ಮೂಲಕ ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಕಾಣಲಾಗಿದೆ. 'ಸೀಗೆ ಹುಣ್ಣಿಮೆ'ಯ ದಿನ ರೈತನು ಅನೇಕ ಬಗೆಯ ತಿಂಡಿತಿನಿಸುಗಳನ್ನು ಮಾಡಿಕೊಂಡು ಹೊಲಕ್ಕೆ ಹೋಗಿ ಹೊಲದ ಪೂಜೆಯನ್ನು ಮಾಡಿ ತಂದಂಥ ತಿಂಡಿಯನ್ನೆಲ್ಲ ಹೊಲದ ತುಂಬಾ ಚೆಲ್ಲುವನು. ಹೀಗೆ ಫಲನೀಡುವ ಭೂಮಿಗೆ ತಿಂಡಿತಿನಿಸುಗಳನ್ನು ಮಾಡಿ ಹುಣ್ಣಿಮೆಯ ದಿನ ಉಣಬಡಿಸುವರು. ಇದು ಒಂದು ರೀತಿ ಅವಳ ಬಯಕೆಯ ಊಟದ ಸಂಕೇತವಾಗಿದೆ. ಹೆಣ್ಣು ಗರ್ಭಿಣಿಯಿರುವಾಗ ಹೇಗೆ ಬಯಕೆಯ ಊಟವನ್ನು ಮಾಡಿಸುವರು ಹಾಗೆ ಭೂಮಿಗೂ ಕೂಡ ಬೆಳೆ ಬೆಳೆದು ಫಲಕೊಡಲು ಸಿದ್ಧವಾಗಿ ನಿಂತ ಸಂದರ್ಭವನ್ನು ಭೂಮಿಯು ಗರ್ಭವತಿಯಾಗಿರುವಳೆಂದು ಬಗೆ ಬಗೆಯ ಊಟವನ್ನು ಚರಗ ಚೆಲ್ಲುವ ಮೂಲಕ ಮಾಡಿಸುವರು. ಇಲ್ಲಿ ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಮತ್ತು ಬೆಳೆಯನ್ನು ಮಕ್ಕಳ ರೂಪದಲ್ಲಿ ಕಾಣಲಾಗಿದೆ.

ಭೂಮಿಗೂ ಅಧಿಕ ಸಹನೆ ಇರುವಂತೆ ಮಹಿಳೆಯನ್ನೂ 'ಸಹನಾಮಯಿ' ಎಂದು ಕರೆಯಲಾಗಿದೆ. ಭೂಮಾತೆಯ ಮೇಲಿರುವ ಮಾನವ ಜನಾಂಗ ಅವಳಿಗೆ ಎಂಥ ಕಷ್ಟಗಳನ್ನು ಕೊಟ್ಟರೂ ಅದನ್ನೆಲ್ಲ ಸಹಿಸಿಕೊಂಡು ಅವರನ್ನು ಕ್ಷಮಿಸುವಳು. ಹಾಗಾಗಿ ಅವಳನ್ನು 'ಕ್ಷಮಯಾ ಧರಿತ್ರಿ' ಎನ್ನುವರು. ಬಂಜೆತನವನ್ನು ಗುರುತಿಸುವಲ್ಲಿಯೂ ಕೂಡ ಮಹಿಳೆಗೂ ಭೂಮಿಗೂ ಹೋಲಿಸಲಾಗಿದೆ. ಬೆಳೆಬೆಳೆಯದ ಭೂಮಿಯನ್ನು ಬಂಜರು ಭೂಮಿ ಎಂದರೆ , ಮಕ್ಕಳಾಗದ ಹೆಣ್ಣನ್ನು ಬಂಜೆ ಎಂದು ಕರೆಯುತ್ತಾರೆ. ಈ ರೀತಿ ಬಂಜೆತನದಲ್ಲಿಯೂ ಕೂಡ ಹೆಣ್ಣಿಗೂ ಭೂಮಿಗೂ ಹೋಲಿಕೆ ಮಾಡಲಾಗಿದೆ. ತಾಯಿ ತನ್ನ ಮಗುವನ್ನು ಹೇಗೆ ಜೋಪಾನ ಮಾಡುವಳೋ. ಹಾಗೆಯೇ ಭೂಮಿತಾಯಿಯು ಆಹಾರವನ್ನು ಒದಗಿಸುವ ಮೂಲಕ ಜಗದ ಸಕಲಜೀವಿಗಳನ್ನು ಸಲಹುವಳು. ಹೀಗೆ ಹೆಣ್ಣು ಮತ್ತು ಭೂಮಿ ಎರಡು ಫಲ ನೀಡುವ, ಪಾಲಿಸುವ, ಪೋಷಿಸುವ ಗುಣಗಳನ್ನು ಹೊಂದಿರುವಂಥವುಗಳಾಗಿವೆ. ಹೀಗೆ ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಕಾಣುತ್ತಿರುವುದು ಇಂದು ನಿನ್ನೆಯದಲ್ಲ. ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ.

**ಭೂಮಿ ಆಸ್ತಿಯ ಸಂಕೇತ**

ಭೂಮಿಯನ್ನು ಫಲವಂತಿಕೆಯ ಸಂಕೇತವಾಗಿ ಕಾಣುವುದರ ಜೊತೆಗೆ ಆಸ್ತಿಯ ಸಂಕೇತವಾಗಿಯೂ ಕಾಣಲಾಗಿದೆ. ಭೂಮಿ ಒಂದು ಆಸ್ತಿಯ ರೂಪವಾಗಿದೆ. ಆಸ್ತಿಗಳಲ್ಲಿ ಸ್ಥಿರ ಮತ್ತು ಚರ ಆಸ್ತಿ ಎಂದು ಎರಡು ವಿಭಾಗಗಳನ್ನು ಮಾಡಿದರೆ ಭೂಮಿಯು ಸ್ಥಿರಾಸ್ತಿಯಾಗಿದೆ. ಕೃಷಿ ಪ್ರಧಾನವಾದಂತಹ ನಮ್ಮ ದೇಶದಲ್ಲಿ ಭೂಮಿ ಅತೀ ಮಹತ್ವವನ್ನು ಪಡೆದುಕೊಂಡಿದೆ. ಭೂಮಿಯಿಂದಲೇ ಇಡೀ ರೈತಾಪಿ ವರ್ಗದವರ ಆರ್ಥಿಕತೆ, ಬದುಕು ಅವಲಂಬಿತವಾಗಿದೆ. ಕೃಷಿಯೋಗ್ಯ ಭೂಮಿಯು ಹೆಚ್ಚು ಬೆಲೆಯುಳ್ಳ ಆಸ್ತಿಯ ಸ್ವರೂಪವಾಗಿದೆ.

### ೨.೧.೩. ಆಸ್ತಿ ಕುರಿತ ನಿರ್ವಚನ

ಆಸ್ತಿ ಮಾನವನ ಜೀವನಾಧಾರ. ''ಆಸ್ತಿ ಎಂದರೆ ಇದೆ ಎಂದರ್ಥ. ಅಸ್ತಿತ್ವದಲ್ಲಿರುವುದು ಯಾವುದೋ ಅದು ಆಸ್ತಿ.'' (ನಾಯಕ ಹಾ.ಮಾ., ೧೯೭೦, ಪು ೧೨೩) ಆಸ್ತಿಯನ್ನು ಧನ, ದ್ರವ್ಯ, ವಿತ್ತ, ಅರ್ಥ, ರಪಣ, ಶ್ರೀ, ಸಿರಿ, ಸಂಪತ್ತು, ಐಶ್ವರ್ಯ, ಸಂಪದ, ಸರ್ವಾರ್ಥ, ಸಯ್ಪು, ಸೈಪು, ಸೊತ್ತು, ಕಾಣಿ, ಚಪ್ಪೋಡು, ದಾಯ, ಬರ್ದುಕು, ಸ್ವತ್ತು, ಕಸ್ವರ, ಗೆಪ್ಸೆ, ದ್ರವಿಣ ಎಂಬೆಲ್ಲ ಹೆಸರುಗಳಿಂದ ಕರೆಯುವರು.

ಆಸ್ತಿ ಎಂಬ ಪದವನ್ನು ಅನೇಕ ಭಾವನೆಗಳಲ್ಲಿ ಉಪಯೋಗಿಸಬಹುದು, ಆಸ್ತಿ ಎಂಬ ಪದವು ವ್ಯಾಪಕವಾದ ಭಾವನೆಯಲ್ಲಿ ಒಬ್ಬ ವ್ಯಕ್ತಿಗೆ ಸೇರಿದ ಎಲ್ಲಾ ಜೀವಂತ ಅಥವಾ ಜೀವಂತವಲ್ಲದ ಪದಾರ್ಥಗಳನ್ನೊಳಗೊಂಡಿದೆ.

ಗ್ರೀಫ್ಸ್ ಟ್ಯಾಕ್ಸ್‌ರ ಪ್ರಕಾರ-''ಗೋಚರವಾದ ಅಥವಾ ಅಗೋಚರವಾದ ವಸ್ತುಗಳು, ಪೆನ್‌ಷನ್, ಕ್ಯಾಷ್‌ಗ್ರಾಂಟ್, ಪ್ರೀವಿ ಪರ್ಸ್, ಸಾಲಗಳು ಯಾವುದನ್ನು ಸಂಪಾದಿಸಬಹುದೋ ಮತ್ತು ಅನುಭವಿಸಬಹುದೋ ಅಥವಾ ಉಪಯೋಗಿಸಬಹುದೋ ಅವೆಲ್ಲವೂ ಆಸ್ತಿ ಎನಿಸಿಕೊಂಡಿವೆ.'' (ಹೊಯ್ಸಳಶರ್ಮ ಕೆ., ೧೯೮೬, ಪು ೩೪೪)

ಹೆನ್ರಿ ಮೇನನರ ಪ್ರಕಾರ - ''ಅತಿ ಹಿಂದಿನ ಆಸ್ತಿಯ ರೂಪ ಯಾವುದೆಂದರೆ ಗುಂಪುಗಳು ಆಸ್ತಿಯನ್ನು ಹೊಂದಿದ್ದುವು. ಕೆಲವು ಶತಮಾನಗಳು ಆದ ಮೇಲೆ ಸಂಸಾರಗಳು ಬೇರೆಯಾದುವು. ನಂತರ ವ್ಯಕ್ತಿ ಆಸ್ತಿ ಭಾವನೆ ರೂಪಕ್ಕೆ ಬಂದಿತು. ಗುಂಪು ಆಸ್ತಿ ಶಿಥಿಲವಾಗಿ ವೈಯಕ್ತಿಕ ಹಕ್ಕು ಮತ್ತು ಆಸ್ತಿ ಚಾಲ್ತಿಗೆ ಬಂತು. ಹಿಂದಿನ ಕಾಲದಲ್ಲಿ ಆಸ್ತಿಗಳು ಸಂಸಾರದಲ್ಲಿ ಸೇರಿತ್ತು. ಅದು ಶಿಥಿಲವಾಗಿ ಒಂದು ಗುಂಪಿನಲ್ಲಿ ಸೇರಿಕೊಂಡಿತು. ವೈಯಕ್ತಿಕ ಸ್ಥಾನಮಾನಗಳಿರಲಿಲ್ಲ. ಎಲ್ಲವೂ ಸಂಸಾರದಲ್ಲಿ ಕೇಂದ್ರಿಕೃತವಾಗಿತ್ತು ಇದಕ್ಕೆ ಚಾರಿತ್ರಿಕ ಆಧಾರವಿದೆ ಎಂದಿದ್ದಾರೆ.'' (ಹೊಯ್ಸಳಶರ್ಮ ಕೆ., ೧೯೮೬, ಪು ೩೪೬, ೩೪೭,)

ಹೆಗಲ್‌ನ ಪ್ರಕಾರ - ''ಆಸ್ತಿಯೆಂದರೆ ಒಬ್ಬ ವ್ಯಕ್ತಿಯ ಸ್ವೇಚ್ಛಾತನಕ್ಕೆ ಸೇರಿದ ಒಂದು ಕೋರಿಕೆಯ ಭಾವನೆ.''

ಸ್ಪೆನ್‌ಸರ್ ರ ಪ್ರಕಾರ - ''ಆಸ್ತಿಯು ವ್ಯಕ್ತಿಯ ಕಷ್ಟತನದ ದುಡಿತದ ಫಲಿತಾಂಶ.'' (ಹೊಯ್ಸಳಶರ್ಮ ಕೆ., ೧೯೮೬, ಪು ೩೪೭)

ಜನರಲ್ ಕ್ಲಾಜಿಸಸ್ ಶಾಸನ ವಿಧಿನಿಯಮ - ''ಭೂಮಿ, ಭೂಮಿಯಿಂದ ಪಡೆಯುವ ಅನುಕೂಲಗಳು, ಭೂಮಿಗೆ ಖಾಯಂ ಆಗಿ ಅಂಟಿಕೊಂಡಿರುವ ಎಲ್ಲಾ ವಸ್ತುಗಳು, ಆಸ್ತಿ'' ಎಂದು ಪರಿಗಣಿಸಿದೆ.

ಇಂಡಿಯನ್ ರಿಜಿಸ್ಟ್ರೇಷನ್ ಶಾಸನ ವಿಧಿ ನಿಯಮದ ಪ್ರಕಾರ - ''ಕಟ್ಟಡಗಳು, ಭೂಮಿ, ದಾರಿ ಹಕ್ಕುಗಳು, ದೀಪಗಳು, ಭೂಮಿಗೆ, ಅಂಟಿಕೊಂಡಿರುವ ವಸ್ತುಗಳು, ಭೂಮಿಯ ಸಹಾಯದಿಂದ ಉಪಯೋಗಿಸುವ ಎಲ್ಲಾ ವಸ್ತುಗಳು ಆಸ್ತಿಗಳಾಗಿವೆ.'' (ಹೊಯ್ಸಳಶರ್ಮ ಕೆ., ೧೯೮೬, ಪು ೩೫೦)

ಇವರೆಲ್ಲರ ಪ್ರಕಾರ ಆಸ್ತಿಯು ವ್ಯಕ್ತಿಯ ಇಚ್ಛೆಯನ್ನು ನೆರವೇರಿಸುವಂತಹದ್ದಾಗಿದೆ ಮತ್ತು ಆಸ್ತಿಯನ್ನು ಪಡೆಯಲು ಸಾಧನೆ ಮಾಡಬೇಕಾಗುತ್ತದೆ. ಹಾಗೆಯೇ ಇದರ ಮೇಲೆ ಸ್ವಾತಂತ್ರ್ಯ ಉಳ್ಳವನಾಗಿರುತ್ತಾನೆ.

#### ಆಸ್ತಿಯ ಪ್ರಭೇದಗಳು

ಆಸ್ತಿಯಲ್ಲಿಯೂ ಅನೇಕ ಪ್ರಕಾರಗಳಿವೆ. ಅವುಗಳು,

''೧. ಜಡರೂಪದಲ್ಲಿ ಸ್ಥಿರವಾಗಿರುವ ಆಸ್ತಿ. ಅದನ್ನು ಸ್ಥಿರ ಅಥವಾ ಸ್ಥಾವರ ಎನ್ನುತ್ತೇವೆ.

೨. ಜಡರೂಪದಲ್ಲಿದ್ದರೂ ಅಸ್ಥಿರವಾದ ಆಸ್ತಿ. ಸಜೀವ ನಿರ್ಜೀವ ಚರವಸ್ತುಗಳು ಈ ಗುಂಪಿಗೆ ಸೇರುತ್ತವೆ. ಅದನ್ನು ಜಂಗಮ ಅಥವಾ ಚರಾಸ್ತಿ ಎನ್ನುತ್ತೇವೆ.

೩. ಜಡರೂಪದಲ್ಲಿ ಇಲ್ಲದಿದ್ದರೂ ಭೌತ ಪ್ರಪಂಚದಲ್ಲಿ ಶಕ್ತಿ ರೂಪದಲ್ಲಿ ಇರುವ ವಿದ್ಯುಚ್ಛಕ್ತಿಯಂಥ ಆಸ್ತಿ.

೪. ಗ್ರಂಥಕರ್ತನ ಗ್ರಂಥಸ್ವಾಮ್ಯ, ಅಂಗಡಿಕಾರನ ವ್ಯಾಪಾರೋದ್ಯಮ, ಸಂಪಾದಿಸಿರುವ ಸುನಾಮ, ಇನ್ನೊಂದು ಬಗೆಯ ಆಸ್ತಿ.

೫. ಷೇರುಗಳು, ಬಾಂಡುಗಳು, ಪತ್ರಗಳು ಮುಂತಾದ ಹಕ್ಕು ಪತ್ರಗಳಲ್ಲಿರುವ ಹಕ್ಕುಗಳ ಸಮುದಾಯ ಇನ್ನೊಂದು ಬಗೆಯ ಆಸ್ತಿ.

೬. ಕೊನೆಯದಾಗಿ, ವ್ಯಕ್ತಿಗತ ಮಾನವೂ ಒಂದು ಆಸ್ತಿ.'' (ನಾಯಕ ಹಾ.ಮಾ., ೧೯೭೦, ಪು ೧೨೪)

ಹೀಗೆ ಆಸ್ತಿ ಎನ್ನುವುದಕ್ಕೆ ವಿಶಾಲವಾದ ಅರ್ಥದಲ್ಲಿ ಸ್ಥಿರ, ಚರ, ಮೂರ್ತ, ಅಮೂರ್ತವಾದ ಎಲ್ಲಾ ವಸ್ತುಗಳ ಮೇಲಿರುವ ಹಕ್ಕು ಎಂದಾಗುತ್ತದೆ. ಅಲ್ಲದೆ ತನ್ನ ಬುದ್ಧಿಶಕ್ತಿ, ಗೌರವ ಸಹ ಆಸ್ತಿ ಆಗುತ್ತದೆ. ಈ ಆರು ಬಗೆಯ ಆಸ್ತಿಗಳಲ್ಲಿ ಮೊದಲನೆಯ ನಾಲ್ಕು ಬಗೆಯ ಆಸ್ತಿಗಳು ಒಂದು ಗುಂಪಿಗೆ ಸೇರಿದರೆ, ಕೊನೆಯ ಎರಡು ಇನ್ನೊಂದು ಗುಂಪಿಗೆ ಸೇರುತ್ತವೆ. ಮೊದಲನೆಯ ಗುಂಪಿನ ಆಸ್ತಿಗಳಲ್ಲಿ ಅಸ್ತಿತ್ವದಲ್ಲಿರುವ ಸ್ಥಾವರ, ಜಂಗಮ, ಮೂರ್ತ, ಅಮೂರ್ತ ಆಸ್ತಿಗಳು ಇದ್ದರೆ, ಎರಡನೆಯ ಗುಂಪಿನ ಆಸ್ತಿಗಳು ವೈಯಕ್ತಿಕ ಆಸ್ತಿಗಳಾಗುತ್ತವೆ.

**೧. ಚರ ಮತ್ತು ಸ್ಥಿರ ಆಸ್ತಿ:** ಸ್ಥಿರಾಸ್ತಿಯಲ್ಲಿ ಭೂಮಿ, ಮನೆ ಇತ್ಯಾದಿ. ಇದಕ್ಕೆ ವಿರುದ್ಧವಾದದ್ದು ಚರ ಅಥವಾ ಜಂಗಮ ಆಸ್ತಿ. ಚರ ಎಂದರೆ ಚಲಿಸುವಂಥದ್ದು, ಅಶಾಶ್ವತವಾದದ್ದು ಇದರಲ್ಲಿ ಪಶು, ಪಕ್ಷಿ, ಪ್ರಾಣಿ, ಒಡವೆಗಳು, ಪಾತ್ರೆಗಳೆಲ್ಲ ಬರುತ್ತವೆ.

**೨. ವೈಯಕ್ತಿಕ ಆಸ್ತಿ:** ಭೂಮಿಯ ಮೇಲಿರುವ ಎಲ್ಲಾ ಹಕ್ಕುಗಳಿಗೆ ಸಂಬಂಧಿಸಿರುವುದಾಗಿರುತ್ತದೆ. ಮೂರ್ತ, ಚರ ಮತ್ತು ಅಮೂರ್ತ ಆಸ್ತಿಗಳನ್ನೊಳಗೊಂಡಿದೆ.

**ಆಸ್ತಿಯು ಕುಟುಂಬ ಮತ್ತು ಸಮಾಜದ ಮೇಲೆ ಬೀರಿರುವ ಪ್ರಭಾವ**

ಹೆಲಾಬ್ಡ್‌ಲಾಸ್ಕಿ ಪ್ರಕಾರ - ''ಆಸ್ತಿಯು ಸಾಮಾಜಿಕ ಸಂಗತಿಯಾಗಿದೆ. ಇದು ಸಾಮಾಜಿಕ ಸತ್ಯಾಂಶವನ್ನು ಹೊಂದಿರುತ್ತದೆ.'' (ಹೊಯ್ಸಳ ಶರ್ಮ ಕೆ., ೧೯೮೬, ಪು ೩೪೮)

ಮಾವನ ಶಾಸ್ತ್ರಜ್ಞರ ಹೇಳಿಕೆಯಂತೆ - ''ತನಗಾಗಿ, ತನ್ನ ಕುಟುಂಬಕ್ಕಾಗಿ ಹಣ ಗಳಿಸುವುದು. ಆಸ್ತಿ ಸಂಪಾದಿಸುವುದು ವ್ಯಕ್ತಿಯ ಹುಟ್ಟುಗುಣ. ಅಂದರೆ, ಆಸ್ತಿಯನ್ನು ಆರ್ಜಿಸುವುದು ಮಾನವನ ಮೂಲ ಪ್ರವೃತ್ತಿಗಳಲ್ಲಿ ಒಂದಾಗಿದೆ ಎಂದು ಹೇಳಬಹುದು.'' (ನಂಜಮ್ಮಣ್ಣಿ ಎಂ., ೧೯೭೧, ಪು ೧೦೫, ೧೦೬)

ಆಸ್ತಿಯು ಮಾನವನ ಜೀವನಕ್ಕೆ ಆಧಾರವಾಗಿದೆ. ಆಸ್ತಿ ಇಲ್ಲದ ವ್ಯಕ್ತಿ ಸಮಾಜದಲ್ಲಿ, ಕುಟುಂಬದಲ್ಲಿ ಬದುಕಲು ಕಷ್ಟಸಾಧ್ಯ. ಆಸ್ತಿ ಎಂದರೆ ಚಿರ-ಚರ ಮೂಲದ ಆಸ್ತಿಗಳು, ಅಲ್ಲದೆ ''ಗುತ್ತಿಗೆದಾರನ ಹಕ್ಕುಗಳು, ಬಾಡಿಗೆಯ ಹಣ, ಸ್ವಾಧೀನದ ಹಕ್ಕು, ವಾಣಿಜ್ಯ ಅಥವಾ ಕೈಗಾರಿಕೆಗಳಲ್ಲಿ ಹೊಂದಿರುವ ಪಾಲು, ಮುಂತಾದ ಅನೇಕ ಲಾಭದಾಯಕವಾದಗಳು ಆಸ್ತಿ ಎನಿಸಿಕೊಳ್ಳುತ್ತವೆ.'' (ಗೌಡ ವಿ.ಎಚ್., ೨೦೦೪, ಪು ೩೮)

ವ್ಯಕ್ತಿಯು ಹೊಂದಿರುವ ವಸ್ತುವಿನ ನಡುವಿನ ಸಂಬಂಧಕ್ಕೆ ಸಮಾಜವೇ ಆಗಲಿ, ಸರ್ಕಾರವೇ ಆಗಲಿ ತನ್ನ ಅಂಗೀಕಾರದ ಮುದ್ರೆಯನ್ನೊತ್ತಿದರೆ ಆ ವಸ್ತುಗಳು ಆಸ್ತಿಗಳಾಗುತ್ತವೆ. ಆಸ್ತಿಯು ಕುಟುಂಬದ ಬೇಡಿಕೆಗಳನ್ನು ಈಡೇರಿಸುತ್ತದೆ. ವ್ಯಕ್ತಿಯು ಸಮಾಜದಲ್ಲಿ ಯಾವುದೇ ಹುದ್ದೆಗೆ ಸೇರಿದ್ದರೂ ಆಸ್ತಿಯ ಬಗ್ಗೆ ಹಂಬಲ ಇದ್ದೇ ಇರುತ್ತದೆ. ಪ್ರತಿಯೊಬ್ಬ ವ್ಯಕ್ತಿ ಆಸ್ತಿ ಮಾಡಬೇಕು; ಅದನ್ನು ಉಪಭೋಗಿಸಬೇಕೆಂಬ ಮನೋಭಾವವನ್ನು ಹೊಂದಿರುತ್ತಾನೆ. ಅದಲ್ಲದೆ ಎಲ್ಲಾ ಕಾಲಗಳಲ್ಲಿ ವೈಯಕ್ತಿಕ ಆಸ್ತಿಗೆ ಮನ್ನಣೆ ಕೊಡಲಾಗಿದೆ. ವ್ಯಕ್ತಿಯು ತನ್ನ

ಅಸ್ತಿತ್ವವನ್ನು ವ್ಯಕ್ತಪಡಿಸುವುದು ಆಸ್ತಿಯ ಆಧಾರದಿಂದಲೆ. ಆಸ್ತಿ ಇದ್ದರೆ ದುಡಿಯುವ ಆಸಕ್ತಿ ಮೂಡುತ್ತದೆ ಮತ್ತು ಆಸ್ತಿಯಿಂದ ಪ್ರಗತಿಹೊಂದಲು ಸಾಧ್ಯವಾಗುತ್ತದೆ. ಆಸ್ತಿ ಇರುವುದರಿಂದ ತನಗೆ ಇಚ್ಛೆಯಂತೆ ಅದನ್ನು ಉಪಯೋಗಿಸುವ ಸ್ವಾತಂತ್ರ್ಯವನ್ನು ಹೊಂದಬಹುದು. ಇತ್ಯಾದಿ ಮನೋಭಾವನೆಗಳನ್ನು ಹೊಂದಿರುತ್ತದೆ.

ಅರಿಸ್ಟಾಟಲ್ - ''ಆಸ್ತಿಯು ಒಳ್ಳೆಯ ಜೀವನದ ಸಾಧನವಾಗಿದೆ. ಇತರ ಸಾಮಾಜಿಕ ಆಸ್ತಿಗಳಂತೆ ಇದನ್ನು ಕೂಡ ಮಿತಗೊಳಿಸಬೇಕು ಎಂದು ಹೇಳಿದ್ದಾನೆ. ಒಂದು ವೇಳೆ ಆಸ್ತಿಯು ಒಳ್ಳೆಯ ಜೀವನದ ಸಾಧನವಾಗಬೇಕಾದರೆ ಆಸ್ತಿಯು ಹೊಂದುವಲ್ಲಿ ಮಿತಿ ಇರಬೇಕು. ಏಕೆಂದರೆ ಆಸ್ತಿಯನ್ನು ಹೊಂದುವುದಾದರೂ ಏತಕ್ಕೆ? ಸಂತೋಷದಾಯಕ ಜೀವನಕ್ಕಾಗಿ; ಅಂದ ಮೇಲೆ ಅದನ್ನು ಹೊಂದಲು ಕೆಲವೊಂದು ನಿಬಂಧನೆಗಳನ್ನು ಅನುಸರಿಸಬೇಕು. ಆಸ್ತಿಯನ್ನು ಅತೀ ಹೆಚ್ಚಾಗಲೀ, ಅತೀ ಕಡಿಮೆಯಾಗಲಿ ಹೊಂದದೇ ಮಧ್ಯಮ ಪ್ರಮಾಣದಲ್ಲಿ ಹೊಂದಿರಬೇಕೆಂದು ಹೇಳಿದ್ದಾರೆ.'' (ಪಾಟೀಲ ಎನ್.ಬಿ., ೧೯೯೮, ಪು ೪೦)

ಲಾಸ್ಕಿ ಅವರು - ''ವ್ಯಕ್ತಿಗೆ ಆಸ್ತಿಯ ಹಕ್ಕನ್ನು ದಯಪಾಲಿಸಿದರೂ ಅದು ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಗೆ ಅತ್ಯಾವಶ್ಯಕವಾದಷ್ಟು ಮಾತ್ರ ಸೀಮಿತವಾಗಿರಬೇಕು ಎಂದು ಹೇಳಿದ್ದಾರೆ. ಆಸ್ತಿಯ ಹಕ್ಕು ವ್ಯಕ್ತಿಯ ಕಾರ್ಯ ನಿರ್ವಹಣೆ ಮತ್ತು ಸಾಮಾಜಿಕ ಒಳಿತಿಗೆ ಅವನು ನೀಡುವ ಕಾಣಿಕೆಯಿಂದ ಪರಿಮಿತಗೊಳ್ಳುತ್ತದೆ. ಖಾಸಗಿ ಆಸ್ತಿಯ ಹಕ್ಕು ಸಮಾಜದ ಒಳಿತಿಗೆ ಅನುಕೂಲವಾಗಿರಬೇಕೆ ಹೊರತು ಅದನ್ನು ಚ್ಯುತಿಗೊಲಿಸುವಂತಿರಬಾರದು ಎಂದು ಅಭಿಪ್ರಾಯ ಪಟ್ಟಿದ್ದಾರೆ.'' (ಉದ್ಧೃತ: ಮೀನಾ ದೇಶಪಾಂಡೆ, ೨೦೦೦, ಪು ೧೧೪) ಆಸ್ತಿಯನ್ನು ಸಂಪಾದಿಸುವುದೇ ಮುಖ್ಯವಾದ ಗುರಿ ಮತ್ತು ಸಾಧನೆ ಎಂದು ಹೊರಟರೆ ಸಮಾಜವನ್ನು ತ್ಯಜಿಸಬೇಕಾದ ಪ್ರಸಂಗ ಬರಬಹುದು. ಏಕೆಂದರೆ ಇಂತಹ ಆಕಾಂಕ್ಷೆಗಳು ಸ್ವಯಂ ವಿನಾಶದ ಬೀಜವನ್ನು ಹೊತ್ತಿರುತ್ತವೆ. ಖಾಸಗಿ ಸಂಪತ್ತಿಗೆ ಸಮಾಜದಲ್ಲಿ ಆದ್ಯತೆಯಿದೆ. ಪ್ರತಿಯೊಬ್ಬರು ತಾನು ಗಳಿಸಿದ ಆಸ್ತಿಯನ್ನು ಹೊಂದುವ, ಸಂಗ್ರಹಿಸುವ, ಮಾರುವ ಹಾಗೂ ದಾನವಾಗಿ ಕೊಡುವ ಹಕ್ಕನ್ನು ಹೊಂದಿರುವರು. ಏಕೆಂದರೆ ಆಸ್ತಿಯು ಸಮಾಜದಲ್ಲಿ ಹಸಿವಿನಿಂದ ನರಳುತ್ತಿರುವ ಜನರನ್ನು ರಕ್ಷಿಸುತ್ತದೆ. ವ್ಯಕ್ತಿಯ ನೈತಿಕತೆಯನ್ನು ಹೆಚ್ಚಿಸುವುದರ ಜೊತೆಗೆ ಸಮಾಜದಲ್ಲಿ ವ್ಯಕ್ತಿಯ ಪ್ರತಿಷ್ಠೆಯನ್ನು ಹೆಚ್ಚಿಸುತ್ತದೆ. ಆಸ್ತಿಗೆ ಮತ್ತು ಕುಟುಂಬ ಜೀವನಕ್ಕೆ ನಿಕಟವಾದ ಸಂಬಂಧವಿದೆ. ಕಾರಣ ಆಸ್ತಿಯಿಲ್ಲದೇ ಕೌಟುಂಬಿಕ ಜೀವನ ಸುಗಮವಾಗಿ ಸಾಗಲು ಸಾಧ್ಯವಿಲ್ಲ. ಆದುದರಿಂದ ಸ್ವಂತ ಆಸ್ತಿ ಹೊಂದುವುದು ಅತ್ಯಂತ ಅವಶ್ಯಕವಾಗಿದೆ. ಕುಟುಂಬದಲ್ಲಿ ಆಸ್ತಿಯನ್ನು ಗಳಿಸಬೇಕಾದರೆ, ವೈಯಕ್ತಿಕ ಜೀವನದ ಬಗ್ಗೆ ಹೆಚ್ಚು ಆಸಕ್ತಿ ಇದ್ದರೆ ಮಾತ್ರ ಸಾಧ್ಯ. ಕುಟುಂಬವು ಸ್ವಾರ್ಥದ ತವರುಮನೆಯಾಗಿರುವುದರಿಂದ ವ್ಯಕ್ತಿಯು ಕುಟುಂಬ ಜೀವನದಲ್ಲಿ ಸ್ವಾರ್ಥಿಯಾಗಿರುತ್ತಾನೆ. ಅವನಲ್ಲಿ ಸಂಕುಚಿತ ಭಾವನೆ ಬೆಳೆದು ಬರುತ್ತದೆ. ಆಸ್ತಿಯು ಸ್ವಾರ್ಥಕ್ಕೆ ಮೂಲವಾಗಿದ್ದರೆ, ಕುಟುಂಬ ಜೀವನವು ಸ್ವಾರ್ಥವನ್ನು ಉದ್ರೇಕಿಸುತ್ತದೆ.

**೨.೧.೪. ಒಡೆತನ ಕುರಿತ ನಿರ್ವಚನ**

ಪ್ರಾಚೀನ ಕಾಲದಲ್ಲಿ ಮಾತೃಪ್ರಧಾನ ಕುಟುಂಬವು ಅಸ್ತಿತ್ವದಲ್ಲಿತ್ತೆಂದು ಮಾನವಶಾಸ್ತ್ರಜ್ಞರಾದ ಟೇಲರ್ ಹಾಗೂ ಸ್ಪೆನ್ಸರ್, ಮಾರ್ಗನ್‌ರು ಅಭಿಪ್ರಾಯಪಟ್ಟಿದ್ದಾರೆ. ಹಾಗಾಗಿ ಕೃಷಿಯ ಆರಂಭಿಕ ಹಂತದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತೆಂಬುದು ತಿಳಿದು ಬರುತ್ತದೆ. ಮನುಷ್ಯನ ಪ್ರಥಮ ಆರ್ಥಿಕ ಚಟುವಟಿಕೆಯಾದ ಆಹಾರ ಸಂಗ್ರಹಣೆಯ ಸಮಯದಲ್ಲಿ ಮಹಿಳೆಯ ಪಾತ್ರ ಪ್ರಧಾನವಾಗಿತ್ತು. ಎಲ್ಲಾ ಪದ್ಧತಿಗಳು ಮತ್ತು ಸಾಂಸ್ಕೃತಿಕ ಲಕ್ಷಣಗಳು ಹೆಣ್ಣಿನ ಮೂಲಕವೆ ಪ್ರಾರಂಭಗೊಂಡಿವೆ. ಹೆಣ್ಣು ಒಂದು ಜನಾಂಗದ ಸಂಕೇತವಷ್ಟೇ ಅಲ್ಲ ಜೀವೋತ್ಪತ್ತಿಯ ಮೂಲ

ಶಕ್ತಿಯೂ ಆಗಿದ್ದಳು. ಸಮಾಜದ ಬೆಳವಣಿಗೆಯ ಮೊದಲ ಹಂತದಲ್ಲಿ ಮಹಿಳೆ ಕೇಂದ್ರ ಸ್ಥಾನದಲ್ಲಿದ್ದಳು. ಆಹಾರ ಸಂಗ್ರಹಣೆ ಮತ್ತು ಆಹಾರ ಉತ್ಪಾದನೆ ಮಹಿಳೆಯ ಕರ್ತವ್ಯವಾಗಿತ್ತು. ಇದರಿಂದ ಮಹಿಳೆಯ ಸ್ಥಾನಮಾನ ಚೆನ್ನಾಗಿತ್ತು. ಗಂಡು ಮತ್ತು ಹೆಣ್ಣು ಒಂದೇ ಬಣಕ್ಕೆ ಸೇರಿದವರಾಗಿದ್ದರು. ಈ ಬಣದಲ್ಲಿ ಪ್ರತಿ ಹೆಂಗಸು ಪ್ರತಿ ಗಂಡಸಿಗೆ ಸೇರಿದವಳಾಗಿದ್ದಳು. ಹಾಗೆಯೇ ಪ್ರತಿ ಗಂಡಸು ಪ್ರತಿ ಹೆಂಗಸಿಗೆ ಸೇರಿದವನಾಗಿದ್ದನು. ಅಸೂಯೆ ಸ್ವಂತಕ್ಕಾಗಿ ಪಡೆದುಕೊಳ್ಳಬೇಕೆಂಬ ಸ್ವಾರ್ಥ ಸ್ವಭಾವಗಳೇ ಆಗ ಗೊತ್ತಿರಲಿಲ್ಲ. ಸ್ವಂತ ಆಸ್ತಿಯನ್ನು ಗಳಿಸಿಕೊಳ್ಳಬೇಕು ಎನ್ನುವ ಕಲ್ಪನೆಯೇ ಇರಲಿಲ್ಲ. ದುಡಿಮೆಯ ಹಂಚಿಕೆಯೂ ಕೂಡ ಬಹಳ ಸರಳವಾಗಿತ್ತು; ಆಹಾರ ಸಂಪಾದನೆಗೆ ಬಳಸುತ್ತಿದ್ದ ಸಾಧನಗಳಲ್ಲಿ ಖಾಸಗಿ ಆಸ್ತಿ ಎಂಬುದು ಇರಲಿಲ್ಲ. ಸ್ತ್ರೀಯರಾಗಲೀ ಸಾಧನ ಸಾಮಗ್ರಿಗಳಾಗಲೀ ಯಾವುವೂ ಪುರುಷನಿಗೆ ಸೇರಿರಲಿಲ್ಲ. ಕೃಷಿಯ ಆರಂಭದಲ್ಲಿ ಉಳುಮೆ, ಬಿತ್ತನೆಗಳಂತಹ ಕೆಲಸಗಳಿಗೆ ಕನಿಷ್ಟ ತಾಂತ್ರಿಕತೆಯು ಬಳಕೆಯಾಗುತ್ತಿತ್ತು. ಅನೇಕ ಕಾರಣಗಳಿಂದಾಗಿ ಮನೆಯ ಒಳಗಿನ ಮತ್ತು ಹೊರಗಿನ ಕೆಲಸಗಳಲ್ಲಿ ಕ್ರಮವಾಗಿ ಸ್ತ್ರೀ ಪುರುಷರು ತೊಡಗುತ್ತಿದ್ದಿರಬಹುದಾದರೂ ಈ ಶ್ರಮವಿಭಜನೆಯಲ್ಲಿ ಮೇಲು ಕೀಳಿನ ಭಾವನೆಗಳಿರಲಿಲ್ಲ. ಏಕೆಂದರೆ ಪುರುಷನಾದವನು ಮನೆಯ ಹೊರಗಿನ ಉತ್ಪಾದನಾ ಚಟುವಟಿಕೆಯಲ್ಲಿ ತೊಡಗಿದರೆ, ಸ್ತ್ರೀಯು ಮನೆಯ ಆವರಣದಲ್ಲಿ ಉಳಿದರೂ ನಿಸರ್ಗ ಸಹಜ ಸಂತಾನೋತ್ಪತ್ತಿಯ ಶ್ರಮವಷ್ಟೇ ಅಲ್ಲದೆ ಕೈತೋಟ, ಪಶುಪಾಲನೆ, ನೇಯ್ಗೆ, ಕುಂಬಾರಿಕೆಗಳಂತಹ ಉತ್ಪಾದಕ ಚಟುವಟಿಕೆಗಳಲ್ಲೂ ತನ್ನ ಸಾಮರ್ಥ್ಯವನ್ನು ತೋರಿಸುತ್ತಿದ್ದಳು. ಹೀಗಾಗಿ ಆರ್ಥಿಕತೆಯಲ್ಲಿ ಭಾಗಿದಾರಳಾದ ಇವಳು ಪುರುಷನೊಂದಿಗೆ ಸಮಾನ ನೆಲೆಯಲ್ಲಿಯೇ ಬದುಕುತ್ತಿದ್ದಳು. ಆದರೆ ಕ್ರಮೇಣ ನಾಗರಿಕತೆ, ಸಂಸ್ಕೃತಿಗಳು ವಿಕಾಸಗೊಳ್ಳುತ್ತ ಹೋದಂತೆ, ಸಾಧನ ಸಲಕರಣೆಗಳು ಹೆಚ್ಚುಹೆಚ್ಚಾಗಿ ಒದಗುತ್ತಾ ಹೋದಂತೆ ಹೆಚ್ಚಿನ ಉತ್ಪಾದನಾ ಚಟುವಟಿಕೆಗಳು ಪುರುಷನ ಹತೋಟಿಗೆ ಬರತೊಡಗಿದವು.

ಬರಬರುತ್ತ ಜನಸಂಖ್ಯೆ ಹೆಚ್ಚಾದಂತೆ ಭೂಮಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಬೇಸಾಯಕ್ಕೆ ಬಳಸುವ ಅನಿವಾರ್ಯತೆ ಉಂಟಾಯಿತು. ಇದರಿಂದ ಪುರುಷನು ಕೃಷಿಯಲ್ಲಿ ಪಾಲ್ಗೊಳ್ಳಲು ಪ್ರಾರಂಭಿಸಿದನು. ಕಾಡುಗಳನ್ನು ಕಡಿದು ಹೊಲಗಳನ್ನಾಗಿ ಮಾರ್ಪಡಿಸಿಕೊಂಡು ನೇಗಿಲು ಮತ್ತು ಎತ್ತುಗಳನ್ನು ಬಳಸಿ ವ್ಯವಸಾಯ ಮಾಡಲು ಆರಂಭಿಸಿದನು. ಮಹಿಳೆಯಿಂದ ಅರಿತ ಈ ವಿದ್ಯೆಯನ್ನು ಪುರುಷನು ಮುಂದೆ ಬಳಸಿಕೊಂಡು ಬಂದನು. ಮೊದಲು ಕಲ್ಲಿನ ಉಪಕರಣಗಳನ್ನು ಬಳಸಿ ಚಿಕ್ಕ ಪ್ರಮಾಣದಲ್ಲಿ ಮಹಿಳೆಯು ಕೃಷಿಯನ್ನು ಮಾಡುತ್ತಿದ್ದಳು ಆದರೆ ಎತ್ತು ಹಾಗೂ ನೇಗಿಲುಗಳನ್ನು ಬಳಸಿ ವ್ಯವಸಾಯ ಮಾಡುವ ಸ್ಥಿತಿಯನ್ನು ಪುರುಷನು ಯಾವಾಗ ತಲುಪಿದನೋ, ಆಗ ವ್ಯವಸಾಯದ ಕೆಲಸ ಸ್ತ್ರೀಯ ಪರಿಮಿತಿಯಿಂದ ದೂರವಾಯಿತು. ಹೀಗಾಗಿ ಕೃಷಿಯು ಸ್ತ್ರೀಯಿಂದ ಪುರುಷನಿಗೆ ಹಸ್ತಾಂತರಗೊಂಡಿತು. ಉತ್ಪಾದನಾ ಉಪಕರಣಗಳ ಸುಧಾರಣೆಯಿಂದ ಸಮಾಜದಲ್ಲಿ ಹೊಸ ರೀತಿಯ ತಿರುವುಗಳುಂಟಾದವು. ಹೊಸ ಸಾಮಾಜಿಕ ಸಂಬಂಧಗಳು ನಿರ್ಮಾಣಗೊಂಡವು. ಆಗ ಸ್ತ್ರೀಗೆ ವಿನಿಮಯದ ಮೌಲ್ಯ ಬರತೊಡಗಿತು. ಹೊಸ ಸಾಮಾಜಿಕ ವರ್ಗಗಳು ಹುಟ್ಟಿಕೊಂಡವು. ಹೊಸ ತೆರನಾದ ದುಡಿಮೆಯ ಹಂಚಿಕೆ ಜಾರಿಗೆ ಬರುತ್ತಲೆ ಸ್ತ್ರೀ ಮತ್ತು ಪುರುಷನ ನಡುವೆ ಲಿಂಗ ತಾರತಮ್ಯ ಉಂಟಾಗತೊಡಗಿತು. ಮಹಿಳೆಯು ಕಳೆ ಕೀಳುವುದು, ನಾಟಿಮಾಡುವುದು ಮಾಡಿದರೆ, ಪುರುಷನಾದವನು ರಾಶಿಮಾಡುವುದು ಬಂದ ಬೆಳೆಯನ್ನು ಮಾರುಕಟ್ಟೆಗೆ ಸಾಗಿಸುವ ಜವಾಬ್ದಾರಿಯನ್ನು ಹೊತ್ತುಕೊಂಡನು. ಆ ಮೂಲಕ ಸ್ತ್ರೀಯಿಂದ ಕೃಷಿ ಕೆಲಸ ಪುರುಷನಿಗೆ ವರ್ಗಾವಣೆಯಾಗಿ ಮಹಿಳೆಯಿಂದ ಅವಿಷ್ಕಾರಗೊಂಡರೂ ಮುಂದೆ ಅದು ಅವಳದೆ ಆಗಿ ಉಳಿಯಲಿಲ್ಲ. ''ಎತ್ತು ಹಾಗೂ ನೇಗಿಲುಗಳನ್ನು ಬಳಸಿ ವ್ಯವಸಾಯ ಮಾಡುವ ಸ್ಥಿತಿಯನ್ನು ಮನುಷ್ಯ ಯಾವಾಗ ತಲುಪಿದನೋ ಆಗ ವ್ಯವಸಾಯದ

ಕೆಲಸ ಸ್ತ್ರೀಯರ ಪರಿಮಿತಿಯಿಂದ ದೂರವಾಯಿತು. ಅದು ಸ್ತ್ರೀಯರಿಂದ ಪುರುಷರ ಕೈಗೆ ಬಂತು. ವ್ಯವಸಾಯ ಸ್ತ್ರೀಯರಿಂದ ಆವಿಷ್ಕಾರಗೊಂಡಿದ್ದರೂ ಮುಂದೆ ಅದು ಅವರದೇ ಆಗಿ ಉಳಿಯಲಿಲ್ಲ.'' (ದೇವಿಪ್ರಸಾದ ಚಟ್ಟೋಪಾಧ್ಯಾಯ, ೧೯೯೭, ಪು ೨೪)

ಪುರುಷನಿಗೆ ಆಹಾರ ತರುವುದು ಸಹ ಸಂಪಾದನೆಯಾಯಿತು. ಸಹಜವಾಗಿ ಸಂಪಾದನೆಯನ್ನು ಯಾರು ಮಾಡುವರು ಅವರು ಉಳಿದವರ ಮೇಲೆ ನಿಯಂತ್ರಣವನ್ನು ಹೇರಲು ಪ್ರಾರಂಭಿಸಿದರು. ಆಹಾರ ತರುವುದು ಪುರುಷನ ಕೆಲಸವಾದರೆ, ಅದರ ಎಲ್ಲಾ ಮುಂದಿನ ಕೆಲಸಗಳು ಮಹಿಳೆಯದಾಗಿತ್ತು. ಆದರೆ ಈ ಎಲ್ಲ ಕೆಲಸಗಳು ಪುರುಷನ ಕಣ್ಣಿಗೆ ಕಾಣದಾಯಿತು. ಆತನ ಪ್ರಕಾರ ಅವು ಸಂಪಾದನೆಯ ಕೆಲಸಗಳಾಗಿರಲಿಲ್ಲ. ಯಾರ ಸಂಪಾದನೆಯು ಕಣ್ಣಿಗೆ ಕಾಣುವುದು ಅವರು ಯಜಮಾನರಾಗತೊಡಗಿದರು. ಯಾರ ಸಂಪಾದನೆಯ ಶ್ರಮ ಕಣ್ಣಿಗೆ ಕಾಣುವುದಿಲ್ಲವೋ ಅವರು ಸೇವಕರಾಗತೊಡಗಿದರು. ಇಲ್ಲಿ ಸಬಲ ವ್ಯಕ್ತಿಗಳಿಗೆ ದುರ್ಬಲರು ಕೇವಲ ವಸ್ತುಗಳೆನಿಸತೊಡಗಿದರು. ಖಾಸಗಿ ಆಸ್ತಿಯ ಕಲ್ಪನೆಯೊಂದಿಗೆ ಯಜಮಾನತ್ವದ ಕಲ್ಪನೆ ತೀರಾ ಸಹಜವಾದುದು. ಹೆಣ್ಣು ಗಂಡಿನ 'ಆಸ್ತಿ'ಯಾಗಿರುವುದು ಈ ಪ್ರಕ್ರಿಯೆಯಲ್ಲಿಯೇ. ಇದು ಸ್ತ್ರೀ-ಪುರುಷರ ಜೀವನದಲ್ಲಿ ಆದಂಥ ಮುಖ್ಯವಾದ ಬದಲಾವಣೆ. ಪುರುಷನು ತನ್ನ ಎಲ್ಲ ಶ್ರಮವನ್ನು ಸಂಪಾದನೆಯನ್ನಾಗಿ ಇಟ್ಟುಕೊಂಡು ಮಹಿಳೆಯ ಎಲ್ಲ ಶ್ರಮವನ್ನು ಸೇವೆಯಾಗಿ ಅಂಗೀಕರಿಸಿದ. ಸ್ತ್ರೀಯು ಮನೆಕೆಲಸದ ಜೊತೆಗೆ ಮಕ್ಕಳನ್ನು ಸಾಕುವ ಭಾವನಾ ಜಗತ್ತಿನ ಬಂಧನಗಳಿಗೆ ಸಿಲುಕಿದಳು. ಈ ರೀತಿಯಾಗಿ ಮಹಿಳೆಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುವುದು ಸುಲಭವೆಂದು ಅರಿತುಕೊಂಡನು. ಯಾರು ಶ್ರೇಷ್ಠರು? ಯಾರು ಕನಿಷ್ಟರು? ಎಂದು ಅವರ ಪ್ರಾಬಲ್ಯದ ಮೇಲೆ ಲಿಂಗ ತಾರತಮ್ಯದಲ್ಲಿ ಘರ್ಷಣೆಗಳಾಗಲು ಪ್ರಾರಂಭಿಸಿದವು. ಸ್ತ್ರೀಯು ಭಾವನಾಲೋಕದ ನಿಯಂತ್ರಣದಲ್ಲಿ ಸಿಲುಕಿಕೊಂಡು ಕ್ರಮೇಣವಾಗಿ ದುರ್ಬಲಳಾದಳು. ಪುರುಷನು ಆಕೆಯನ್ನು ಸಂಪೂರ್ಣವಾಗಿ ತನ್ನ ಹತೋಟಿಯಲ್ಲಿ ಇಟ್ಟು ವಿವಾಹ ಸಂಸ್ಥೆಯ ಮೂಲಕ ಸಂತಾನೋತ್ಪತ್ತಿಯ ಮೂಲವಾದ ಲೈಂಗಿಕತೆಯ ಮೇಲೆ ನಿಯಂತ್ರಣವನ್ನು ಸಾಧಿಸಲು ಪ್ರಾರಂಭಿಸಿದ. ಇದನ್ನು ಕುಟುಂಬ ಎನ್ನುವ ನೆಲೆಯಲ್ಲಿ ಸ್ಥಿರಗೊಳಿಸಿದ. ಮುಂದೆ ಪುರುಷನು ಮಹಿಳೆಯ ಮೇಲೆ ಮತ್ತು ತನ್ನ ಸಂತಾನದ ಮೇಲೆ ಅಧಿಕಾರವನ್ನು ಚಲಾಯಿಸಲು ಕುಟುಂಬವನ್ನು ಸ್ಥಾಪಿಸಿದನು.

ಕುಟುಂಬದ ಸ್ಥಾಪನೆಯ ಮೂಲಕ ಸಮಾಜದಲ್ಲಿ ಒಬ್ಬ ಪುರುಷನಿಗೆ ಒಬ್ಬಳೆ ಹೆಣ್ಣು ಎಂದು ನಿರ್ಧರಿಸಲಾಯಿತು. ಆ ಮೂಲಕ ಹೆಣ್ಣು ಹೆಚ್ಚು ಕಟ್ಟುನಿಟ್ಟಾಗಿ ಪಾತಿವ್ರತ್ಯವನ್ನು ಅನುಸರಿಸುವ ಸಂದರ್ಭ ಆರಂಭವಾಯಿತು. ಆದರೆ ''ಪತಿ-ಪತ್ನಿಯರಲ್ಲಿ ಯಾರು ಬೇಕಾದರೂ ಸುಲಭವಾಗಿ ವಿವಾಹ ಸಂಬಂಧ ಕಳೆದುಕೊಳ್ಳಬಹುದಿತ್ತು.'' (ಶರ್ಮಾ ಕೆ.ಎಸ್., ೧೯೭೮, ಪು ೪) ಆದರೆ ಅವರಿಗೆ ಹುಟ್ಟಿದ ಮಕ್ಕಳ ಮೇಲೆ ತಾಯಿಯ ಹಕ್ಕು ಪದ್ಧತಿಯೇ ಜಾರಿಯಲ್ಲಿತ್ತು, ಈ ಹಂತದಲ್ಲಿ ಮಾತ್ರ ಯಜಮಾನ ಪದ್ಧತಿಯು ರೂಡಿಯಲ್ಲಿತ್ತು. ಸಂತತಿಯನ್ನು ತಾಯಿಯ ಮೂಲಕ ಗಣನೆಗೆ ತೆಗೆದುಕೊಳ್ಳಲಾಗುತ್ತಿತ್ತು. ಆದರೆ ಈ ಸಂತತಿಗೆ ಕಾರಣರು ಯಾರೆಂಬುದನ್ನು ಖಚಿತವಾಗಿ ಗುರುತಿಸಲು ಸಾಧ್ಯವಾಗದಿದ್ದುದರಿಂದ ಹೆತ್ತತಾಯಿಯ ಬಗ್ಗೆ ವಿಶೇಷ ಗೌರವವಿತ್ತು. ಆದರೆ ಉತ್ಪಾದನಾ ಉಪಕರಣಗಳ ಸುಧಾರಣೆ ಹಾಗೂ ಅಮಿತ ಉತ್ಪಾದನಾ ಕಾರಣಗಳಿಂದ ಕುಟುಂಬದಲ್ಲಿ ಸ್ತ್ರೀ ಪುರುಷರ ನಡುವಣ ಸಂಬಂಧ ಬದಲಾಗತೊಡಗಿತು. ಈ ಸಂಬಂಧದ ಬಗೆಗೆ ಎಂಗೆಲ್ಸ್ ''ಯುದ್ಧ, ಬೇಟೆ, ಮೀನು ಹಿಡಿಯುವುದು, ಆಹಾರಕ್ಕೆ ಬೇಕಾದ ಕಚ್ಚಾವಸ್ತುಗಳನ್ನು ಒದಗಿಸುವುದು ಮೊದಲಾದ ಕಾರ್ಯಗಳನ್ನು ಮಾಡಲು ಬೇಕಾದ ಉಪಕರಣಗಳನ್ನು ತಯಾರು ಮಾಡುವುದು ಗಂಡು. ಸ್ತ್ರೀ ಮನೆಯನ್ನು ನೋಡಿಕೊಳ್ಳುವುದು, ನೇಯ್ಗೆ ಮಾಡುವುದು, ಹೊಲಿಗೆ ಮಾಡುವುದು, ತಮ್ಮ ತಮ್ಮ

ಕ್ಷೇತ್ರಗಳಲ್ಲಿ ಅವರವರು ಯಜಮಾನರಾಗಿದ್ದರು. ಯಾರು ಯಾವ ಉಪಕರಣಗಳನ್ನು ಬಳಸುತ್ತಿದ್ದರೋ ಅವುಗಳಿಗೆ ಅವರೇ ಒಡೆಯರಾಗಿದ್ದರು.'' (ಉದ್ಧೃತ: ಶರ್ಮಾ ಕೆ.ಎಸ್., ೧೯೭೮, ಪು ೪) ಎಂದು ವಿವರಿಸಿದ್ದಾರೆ. ಇದನ್ನು ಗಮನಿಸಿದಾಗ ಮಹಿಳೆಯು ಬೇಸಾಯದ ಪ್ರಾಥಮಿಕ ಹಂತದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದಳು. ಆದರೆ ವಿಸ್ತೃತ ಬೇಸಾಯದಿಂದ ಉತ್ಪಾದನೆಯಲ್ಲಿ ಪ್ರಮುಖ ಪಾತ್ರ ಪುರುಷನ ಪಾಲಿಗೆ ಹೋಯಿತು. ಮೊದಲು ಆಸ್ತಿಯು ಸಮಷ್ಟಿಯಾಗಿ ಇಡೀ ಬಣಕ್ಕೆ ಸೇರಿತ್ತು. ಈ ಸಮಷ್ಟಿಯ ಆಸ್ತಿಯು ಕುಟುಂಬಗಳ ಯಜಮಾನರ ಖಾಸಗಿ ಆಸ್ತಿಯಾಗಿ ಪರಿವರ್ತಿತಗೊಂಡವು; ಆಗ ಕುಟುಂಬದಲ್ಲಿ ಹೊಸ ಕ್ರಾಂತಿಯೇ ಉಂಟಾಯಿತು. ಆಹಾರ ಒದಗಿಸುವ ಕೆಲಸ ಪುರುಷನದಾಯಿತು. ಆಗ ಪುರುಷನು ತನ್ನ ಸ್ವಂತಿಕೆಯಲ್ಲಿದ್ದ ಉಪಕರಣಗಳ ಬಳಕೆಯಿಂದ ಉತ್ಪಾದಿಸಿದ ಅಧಿಕ ಉತ್ಪಾದನೆಯನ್ನು ಮಹಿಳೆ ತಿನ್ನಬೇಕಾಯಿತು. ಆದರೆ ಆ ಉಪಕರಣಗಳ ಮೇಲೆ ಮಹಿಳೆಯು ತನ್ನ ಸ್ವಂತಿಕೆಯ ಹಕ್ಕನ್ನು ಚಲಾಯಿಸಲು ಸಾಧ್ಯವಾಗಲಿಲ್ಲ. ಆಕೆಯ ಪಾಲಿಗೆ ಮನೆಯಲ್ಲಿರುವ ಸಾಮಾನುಗಳು ಮಾತ್ರ ಉಳಿದವು. ಸಂಕೀರ್ಣತೆಯಿಂದ ಕೂಡಿದ ಈ ಬೆಳವಣಿಗೆಯ ಬಗ್ಗೆ ಎಂಗೆಲ್ಸ್‌ರು ''ದುಡಿಮೆಯ ಹಂಚಿಕೆಯು ಗಂಡ-ಹೆಂಡಿರ ನಡುವೆ ಆಸ್ತಿಯ ಹಂಚಿಕೆಯನ್ನು ನಿಯಂತ್ರಿಸಿತ್ತು. ಈ ಹಂತದಲ್ಲಿ ಕುಟುಂಬದಲ್ಲಿ ಗಂಡ-ಹೆಂಡತಿ ಇವರ ನಡುವಣ ಸಂಬಂಧವನ್ನು ಬುಡಮೇಲು ಮಾಡಿತು. ಏಕೆಂದರೆ ಸ್ತ್ರೀಯು ಮನೆಕೆಲಸಕ್ಕೆ ಮೀಸಲಾಗಿ ಉಳಿದಳು. ಗಂಡಸಿಗೆ ಉತ್ಪಾದನಾ ಉಪಕರಣಗಳ ಸಂಪೂರ್ಣ ನಿಯಂತ್ರಣ ದೊರೆತಿದ್ದರಿಂದ ಅವನಿಗೆ ಅದು ಉನ್ನತ ಗೌರವ ಒದಗಿಸಿತು. ಸ್ತ್ರೀಯ ಮನೆಕೆಲಸವು ಮಹತ್ವವನ್ನು ಕಳೆದುಕೊಂಡಿತು.'' (ಉದ್ಧೃತ: ಶರ್ಮಾ ಕೆ.ಎಸ್., ೧೯೭೮, ಪು ೫) ಎಂದು ಅಭಿಪ್ರಾಯಪಡುತ್ತಾರೆ.

ಮಹಿಳೆ ಈ ಪರಿಸ್ಥಿತಿಯಲ್ಲಿ ನಲುಗುತ್ತಿದ್ದರೂ ಇನ್ನು ಅವಳು ಪುರುಷನಿಗೆ ಸಂಪೂರ್ಣವಾಗಿ ಗುಲಾಮಳಾಗಿರಲಿಲ್ಲ. ತನ್ನ ಸಂಪೂರ್ಣ ಸ್ವಾತಂತ್ರ್ಯ ಕಳೆದುಕೊಂಡಿರಲಿಲ್ಲ. ಆದರೆ ಭೂಮಿ, ಪ್ರಾಣಿಗಳು, ಉತ್ಪಾದಕ ಉಪಕರಣಗಳು ಸಂಪೂರ್ಣವಾಗಿ ಖಾಸಗಿ ಮಾಲೀಕತ್ವಕ್ಕೆ ಬದಲಾದಾಗ ಮತ್ತು ಏಕಪತ್ನಿ ವಿವಾಹ ಜಾರಿಗೆ ಬಂದಾಗ, ಸ್ತ್ರೀಯ ಸ್ಥಾನಮಾನವು ಹೀನಾಯ ಸ್ಥಿತಿಗಿಳಿಯಿತು. ಪುರುಷನು ಈಗಾಗಲೇ ಉತ್ಪಾದನಾ ಉಪಕರಣಗಳ ಒಡೆತನ ಪಡೆದಿದ್ದ; ಭೂಮಿ, ಪಶುಗಳು ಪುರುಷನ ಖಾಸಗಿ ಆಸ್ತಿಯಾಗಿದ್ದವು. ''ಕೃಷಿಯ ಪರಿಕಲ್ಪನೆ ಬರುವುದಕ್ಕೆ ಮುಂಚಿನ ಸಮಾಜಗಳಲ್ಲಿ ಸ್ತ್ರೀ ಪುರುಷರ ನಡುವೆ ಮೂಲಭೂತ ಸಮಾನತೆ ಇತ್ತು'' ಎಂಬುದನ್ನು ಒತ್ತಿ ಹೇಳುತ್ತಾರೆ ಎಂಗೆಲ್ಸ್. ಉತ್ಪಾದನ ಸಾಧನಗಳ ಒಡೆತನ ಪಡೆದ ವರ್ಗ ಹಾಗೂ ಅಂಥ ಒಡೆತನದಿಂದ ವಂಚಿತವಾದ ವರ್ಗ ಎಂದು ಎರಡು ವರ್ಗಗಳು ಹುಟ್ಟಿಕೊಂಡವು. ಪುರುಷರ ದಬ್ಬಾಳಿಕೆ, ಆರ್ಥಿಕ ಶೋಷಣೆಯ ಫಲ ಹಾಗೂ ಆರ್ಥಿಕ ಶೋಷಣೆಗೆ ವರ್ಗ ವಿಭಜನೆ ಅಸ್ತಿತ್ವಕ್ಕೆ ಬಂದ ಕಾರಣ, ಖಾಸಗಿ ಆಸ್ತಿಯ ಮೇಲೆ ಹೊಂದಿರುವ ನಿಯಂತ್ರಣವನ್ನನುಸರಿಸಿ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಬೆಳೆದು ಬಂತು ಹೀಗೆ ಖಾಸಗಿ ಆಸ್ತಿಯ ಕಲ್ಪನೆಯೇ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ಮೂಲ ಕಾರಣವಾಯಿತು.

ಪುರುಷನು ಆಸ್ತಿಯ ಮಾಲೀಕನಾಗಿದ್ದರೂ ಅದನ್ನು ತನ್ನ ಸಂತತಿಗೆ ವಾರಸಾಗಿ ಕೊಡಲು ಬರುವಂತಿರಲಿಲ್ಲ. ತನ್ನ ಗಂಡು ಸಂತತಿಗೆ ಆಸ್ತಿಯನ್ನು ಕೊಡಬೇಕಾದರೆ ತಾಯಿಯ ಹಕ್ಕು ಅಡ್ಡ ಬರುತ್ತಿತ್ತು. ಆದ್ದರಿಂದ ಈ ತಾಯಿಯ ಹಕ್ಕನ್ನು ಕಿತ್ತೊಗೆಯಬೇಕೆಂಬ ದುರಾಸೆ ಪುರುಷನಲ್ಲಿ ಮೂಡಿ, ಖಾಸಗಿ ಮಾಲೀಕತ್ವ ಅವನಲ್ಲಿ ಕೇಂದ್ರೀಕೃತವಾಗಿದ್ದರಿಂದ ಅವನು ಬಲಿಷ್ಠನಾದನು. ಆದುದರಿಂದ ಮಹಿಳೆಯ ಅಧೀನದಲ್ಲಿ ಬದುಕುವುದು ಅವನಿಗೆ ಇಷ್ಟವಾಗದೆ ತಾನು ಸ್ವತಂತ್ರವಾಗಿ ಎಲ್ಲ ವಸ್ತುಗಳ ಮತ್ತು ವಾರಸುದಾರರ ಮೇಲೆ ಅಧಿಕಾರವನ್ನು ಸ್ಥಾಪಿಸಲು

ತಾಯಿ ಹಕ್ಕನ್ನು ಉರುಳಿಸಲು ಯೋಚಿಸಿದನು. ಹಾಗೆಯೇ ತಾಯಿ ಹಕ್ಕನ್ನು ಉರುಳಿಸುವುದರಲ್ಲೂ ಯಶಸ್ವಿಯಾದನು. ಈ ರೀತಿ ತಾಯಿಯ ಹಕ್ಕಿನ ಅವನತಿ ಸ್ತ್ರೀ ಕುಲದ ಪರಾಜಯಕ್ಕೆ ಮೂಲ ಕಾರಣವಾಯಿತು. ಇದು ಜಗತ್ತಿನ ಇತಿಹಾಸದ ಮೇಲೆ ಮಹತ್ವವಾದ ಪರಿಣಾಮವನ್ನು ಬೀರುವಂತಹ ಘಟನೆಯಾಯಿತು. ಪುರುಷನಾದವನು ಮನೆಯಲ್ಲಿಯೂ ಸಹ ಅಧಿಕಾರದ ಸೂತ್ರ ವಹಿಸಿಕೊಂಡನು. ಇದರಿಂದ ಹೆಣ್ಣು ಪದಚ್ಯುತಳಾಗಿ, ಪರಾಧೀನಳಾಗಿ, ಗಂಡಸಿನ ಕಾಮಲಾಲಸೆಗೆ ಬಲಿಯಾಗಿ, ಅವಳು ಉಪಭೋಗದ ವಸ್ತುವಾಗಿ ಕೇವಲ ಮಕ್ಕಳನ್ನು ಹೆರುವ ಯಂತ್ರವಾಗಿಬಿಟ್ಟಳು. ಸ್ತ್ರೀ ಎಂದರೆ ಗರ್ಭ, ಹೆರಿಗೆ ಎಂಬ ತಿಳುವಳಿಕೆಯಲ್ಲಿ ತಾಯ್ತನವೇ ಸ್ತ್ರೀತನ ಎನ್ನುವಷ್ಟರ ಮಟ್ಟಿಗೆ ವೈಭವೀಕರಣ ಬೆಳೆಯಿತು. ಗಂಡನಾದವನು ಹೆಂಡತಿಯಿಂದ ನಿರೀಕ್ಷಿಸುವುದು ತಾಯ್ತನ ಮಾತ್ರ. ಹೀಗೆ ಹೆಣ್ಣು ಗಂಡಿನ ಆಸ್ತಿಯಾಗಿ ಪರಿವರ್ತನೆಯಾದಳು. ಪುರುಷನ ಗುಲಾಮಗಿರಿಗೆ ಒಳಗಾದಳು.

ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ಮೂಲಕ ಹುಟ್ಟಿದ ಮಗುವಿನ ತಂದೆಯನ್ನು ಗುರುತಿಸಲು ಸಾಧ್ಯವಾಯಿತು. ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ತಂದೆಯೇ ಕುಟುಂಬದ ಯಜಮಾನ. ಪುರುಷನಿಗೆ ತನ್ನಿಂದ ತನ್ನ ಹೆಂಡತಿಗೆ ಹುಟ್ಟಿದ ಮಕ್ಕಳನ್ನು ಆಸ್ತಿಯ ವಾರಸುದಾರರನ್ನಾಗಿ ಮಾಡಬೇಕೆಂಬ ಭಾವನೆ ಪಿತೃ ಪ್ರಧಾನ ಕುಟುಂಬದ ಮೂಲಕ ಉಂಟಾಯಿತು. ಹಾಗೆಯೇ ಆಸ್ತಿಯು ತನ್ನ ಕುಟುಂಬದಲ್ಲೇ ಇರಿಸಿಕೊಳ್ಳಬೇಕೆಂಬ ಗಂಡಸಿನ ಬಯಕೆಯಿಂದ ತನ್ನ ಆಸ್ತಿಯನ್ನು ತನ್ನ ಗಂಡು ಮಕ್ಕಳಿಗೆ ಮಾತ್ರ ಸೇರುವಂತೆ ಮಾಡಿದನು. ಹೆಣ್ಣುಮಕ್ಕಳಿಗೆ ಆಸ್ತಿ ನೀಡಿದರೆ ಅವಳು ಮದುವೆಯಾದ ಮೇಲೆ ಬೇರೆಯವರ ಮನೆ ಸೇರುವಳು, ಅಲ್ಲದೆ ಆಸ್ತಿ ಬೇರೆಯವರ ಪಾಲಾಗುವುದು ಎನ್ನುವ ಕಾರಣದಿಂದ ಅವಳಿಗೆ ಆಸ್ತಿ ನೀಡದೆ, ಗಂಡು ಮಕ್ಕಳಿಗೆ ಆಸ್ತಿ ನೀಡುವ ಮೂಲಕ ಆಸ್ತಿಯನ್ನು ಕುಟುಂಬದಲ್ಲಿಯೇ ಇರಿಸಿಕೊಂಡನು. ಅಲ್ಲದೆ ವಂಶಾಭಿವೃದ್ಧಿಯನ್ನು ಮುಂದುವರೆಸುವ ಹಕ್ಕು ಗಂಡು ಮಕ್ಕಳಿಗೆ ಸೀಮಿತವಾಯಿತು. ಆದುದರಿಂದ ಗಂಡು ಮಗುವನ್ನು ಹೆರಲೇಬೇಕೆಂಬ ಭಾವನೆಯು ಭಾರತೀಯ ನಾರಿಯಲ್ಲಿ ಬೇರೂರುವಂತೆ ಮಾಡಲಾಯಿತು. ಹಾಗೆಯೇ ಮಹಿಳೆಯು ತನ್ನ ಅಧೀನದಲ್ಲೇ ಬದುಕಬೇಕು; ಅವಳಿಗೆ ಆಸ್ತಿಯಲ್ಲಿ ಪಾಲು ಕೊಟ್ಟರೆ ಅವಳ ಮೇಲೆ ತನ್ನ ಸಂಪೂರ್ಣ ಅಧಿಕಾರವನ್ನು ಚಲಾಯಿಸಲು ಸಾಧ್ಯವಾಗುವುದಿಲ್ಲ ಎಂದು ತಿಳಿದು ಅವಳನ್ನು ಮನೆಯ ನಾಲ್ಕು ಗೋಡೆಗಳ ಮಧ್ಯೆ ಬಂದಿಸಲಾಗಿದೆ.

ಹೀಗೆ ಕುಟುಂಬದಲ್ಲಾದ ಪರಿವರ್ತನೆಯಿಂದ ಸ್ತ್ರೀಯರ ಸ್ಥಾನಮಾನ ಮತ್ತಷ್ಟು ಹೀನಾಯ ಸ್ಥಿತಿಗೆ ಇಳಿಯಿತು. ಹೀಗಾಗಿ ಸ್ತ್ರೀಯ ಗುಲಾಮಗಿರಿಗೂ, ಖಾಸಗಿ ಆಸ್ತಿಯ ಬೆಳವಣಿಗೆಗೂ, ಪುರುಷನ ಪ್ರಾಬಲ್ಯಕ್ಕೂ ನಿಕಟವಾದ ಸಂಬಂಧವಿದೆಯೆಂದು ತಿಳಿದು ಬರುತ್ತದೆ. ಪುರುಷನು ಮಹಿಳೆಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಲು ಸಾಮಾಜಿಕ ಉತ್ಪಾದನೆಯಿಂದ ದೂರವಿಟ್ಟನು. ಇದರಿಂದ ಅವಳು ಕೇವಲ ಗೃಹಕೃತ್ಯಕ್ಕೆ ಮೀಸಲಾಗಿಬಿಟ್ಟಳು.

ಒಂದು ವಸ್ತು ಯಾರ ವಶದಲ್ಲಿದೆಯೆಂಬುದನ್ನು ನೋಡಿ ಅದು ಯಾರದೆಂಬುದನ್ನು ಹಿಂದಿನ ಕಾಲದಲ್ಲಿ ನಿರ್ಧರಿಸುತ್ತಿದ್ದರು. ''ಸ್ವಾಮ್ಯಕ್ಕೆ ಎಷ್ಟು ಪ್ರಾಧಾನ್ಯ ಕೊಟ್ಟಿದ್ದರೆಂದರೆ, ಸ್ವಾಧೀನವಿದ್ದರೆ ಸ್ವಾಮ್ಯವೂ ಆತನದೇ ಎಂದು ಭಾವಿಸಲಾಗಿತ್ತು. ಸ್ವಾಧೀನವಿಲ್ಲದ ಸ್ವತ್ತಿನ ಒಡೆಯ ತನ್ನ ಹಕ್ಕನ್ನು ಸ್ಥಿರಪಡಿಸಿ ಆ ಸ್ವತ್ತನ್ನು ಸ್ವಾಧೀನಕ್ಕೆ ಪಡೆಯಬೇಕಾಗುತ್ತಿತ್ತು. ಸ್ವಾಧೀನವೇ ಶಾಸನದಲ್ಲಿ ನೂರಕ್ಕೆ ತೊಂಬತ್ತು ಅಂಶದ ಬಲ ಎನ್ನುತ್ತಾರೆ ಇಂಗ್ಲಿಷ್ ಶಾಸನದಲ್ಲಿ.'' (ನಾಯಕ ಹಾ.ಮಾ., ೧೯೭೦, ಪು ೧೨೬) ಇಂಗ್ಲಿಷ್ ನ್ಯಾಯ ಪದ್ಧತಿಯ ಪ್ರಕಾರ ಸ್ವಾಧೀನಕ್ಕೆ ಬಹಳ ಪ್ರಾಮುಖ್ಯವಿದೆ. ಆದರೆ ಪ್ರಾಚೀನ ಭಾರತದ ನ್ಯಾಯ ವೈಯಕ್ತಿಕ ಆಸ್ತಿಯ ಒಡೆತನಕ್ಕೆ ಪ್ರಾಮುಖ್ಯತೆ ಕೊಡದೆ ಹಿಂದೂ ಅವಿಭಕ್ತ ಕುಟುಂಬದ ಸಾಮೂಹಿಕ ಆಸ್ತಿಯ ಒಡೆತನಕ್ಕೆ ಪ್ರಾಮುಖ್ಯತೆ ಕೊಡುತ್ತಿದ್ದುದರಿಂದ ಭಾರತೀಯ ನ್ಯಾಯದಲ್ಲಿ ಸ್ವಾಧೀನಕ್ಕೆ ಇಂಗ್ಲಿಷ್ ನ್ಯಾಯಾಲಯದಲ್ಲಿದ್ದಷ್ಟು ಪ್ರಾಮುಖ್ಯತೆ ಇರಲಿಲ್ಲ.

ಒಡೆತನವನ್ನು ವಲಿತ, ವಳಿತ, ಅಧೀನ, ಅಂಕೆ, ಅಧಿಕಾರ, ಆಳ್ವಿಕೆ, ವಶ, ವಶವರ್ತಿ, ಸ್ವಾಧೀನ, ವಶಿತ್ವ, ಹತೋಟಿ, ಒಡೆತನಕ್ಕೆ ಒಳಪಟ್ಟುದು, ಸ್ವಾಮ್ಯ, ಅಧಿಕರಣ, ಪ್ರಭುತ್ವ, ಯಜಮಾನ, ವಾರಸು, ಹಕ್ಕು, ಸ್ವಾಮಿತ್ವ, ಹಿಡುವಳಿ, ಯಜಮಾನಿಕೆ, ವಿಭುತ್ವ, ಸ್ವತ್ವ, ತನ್ನತನ, ಹಕ್ಕುದಾರಿಕೆ, ಬಾಧ್ಯತೆ, ಜಿಮ್ಮೆ, ವಸತೆ, ಹೀಗೆ ಅನೇಕ ಹೆಸರುಗಳಿಂದ ಕರೆಯಲಾಗುತ್ತದೆ.

ನಾಗರಿಕತೆಯು ಬೆಳೆದ ಹಾಗೆ ಯಜಮಾನಿಕೆಯ (ಒಡೆತನದ) ಭಾವನೆಯು ಹಂತ ಹಂತವಾಗಿ ಬೆಳೆಯುತ್ತ ಬಂದಿದೆ. ಅಲೆಮಾರಿ ಜೀವನದಲ್ಲಿ ಖಾಯಂ ಆಗಿ ನೆಲೆಸಲು ಮನೆಗಳಿರಲಿಲ್ಲ, ಹೀಗಾಗಿ ಆಗಿನ ಜನರಲ್ಲಿ ಯಜಮಾನಿಕೆಯ (ಒಡೆತನ) ಅರಿವು ಇರಲಿಲ್ಲ. ಯಾವಾಗ ಮನುಷ್ಯನು ಭೂಮಿಯ ಸಾಗುವಳಿಯನ್ನು ಮಾಡಿ ವ್ಯವಸಾಯ ಮಾಡಲು ಪ್ರಾರಂಭಿಸಿದನೊ ಆಗಿನಿಂದ ಒಡೆತನದ ಭಾವನೆಗಳು ಬೆಳೆದು ಬರಲು ಪ್ರಾರಂಭಿಸಿತು. ಆಗ 'ಇದು ನನ್ನದು', 'ಇದು ಅವರದು' ಎನ್ನುವ ಭಾವನೆ ಉಂಟಾಗಿ ವಸ್ತುಗಳ ಮೇಲೆ ಒಡೆತನ ಪ್ರಾರಂಭವಾಯಿತು.

ಒಡೆತನ/ಯಜಮಾನತ್ವ ವ್ಯಾಖ್ಯಾನದ (ನಿರ್ವಚನ) ಬಗ್ಗೆ ತತ್ವಜ್ಞಾನಿಗಳು, ಕಾನೂನು ಪಂಡಿತರು, ಅರ್ಥಶಾಸ್ತ್ರಜ್ಞರು ಮತ್ತು ಸಮಾಜ ಸುಧಾರಕರಲ್ಲಿ ಭಿನ್ನಾಭಿಪ್ರಾಯಗಳಿವೆ. ಒಡೆತನವು ಒಬ್ಬ ವ್ಯಕ್ತಿಯ ಮತ್ತು ಅವನಲ್ಲಿರುವ ಹಕ್ಕಿನ ಸಂಬಂಧವನ್ನು ಸೂಚಿಸುತ್ತದೆ.

ಡ್ಯುಗೆಟ್‌ನ ಪ್ರಕಾರ - ''ಯಜಮಾನತ್ವ ಅಂದರೆ ಒಬ್ಬ ವ್ಯಕ್ತಿಗೂ ಮತ್ತು ಒಂದು ವಸ್ತುವಿಗೂ ಇರುವ ಸಂಬಂಧ. ಆದುದರಿಂದಲೇ ಒಬ್ಬ ಮನುಷ್ಯನು ಅದನ್ನು ಮಾರಬಹುದು, ಉಪಯೋಗಿಸಬಹುದು ಮತ್ತು ಅನುಭವಿಸಬಹುದು. ಏನು ಬೇಕಾದರೂ ಮಾಡಬಹುದು.'' (ಹೊಯ್ಸಳಶರ್ಮ ಕೆ., ೧೯೮೬, ಪು ೨೭೩) ಇವರ ಪ್ರಕಾರ ವ್ಯಕ್ತಿಗೆ ವಸ್ತುವಿನ ಮೇಲೆ ಸಂಪೂರ್ಣವಾದ ಹಕ್ಕಿರುವುದಕ್ಕೆ ಒಡೆತನ ಎನ್ನುವರು.

ಪೇಟನ್‌ನ ಅಭಿಪ್ರಾಯದಂತೆ - ''ಯಜಮಾನನು ವಸ್ತುಗಳ ಮೇಲೆ ಸಂಪೂರ್ಣವಾದ ಹಕ್ಕನ್ನು ಹೊಂದಿರುತ್ತಾನೆ. ಅವುಗಳೆಂದರೆ - ೧. ಯಜಮಾನನು ಆಸ್ತಿಯನ್ನು ಅಥವಾ ವಸ್ತುವನ್ನು ಅನುಭವಿಸಬಹುದು, ೨. ಅವರು ಅದನ್ನು ಯಾವ ರೀತಿಯಲ್ಲಾದರೂ ಉಪಯೋಗಿಸಬಹುದು. ೩. ನಾಶಪಡಿಸಬಹುದು. ೪. ವರ್ಗಾವಣೆ ಮಾಡಬಹುದು. ಗುತ್ತಿಗೆಗೆ ಕೊಡಬಹುದು, ಮಾರಬಹುದು. ೫. ಆಸ್ತಿಯನ್ನು ಸಂಕಲ್ಪರೀತ್ಯಾಮೃತ ಶಾಸನ ಮಾಡಬಹುದು (ವಿಲ್). ಆದರೆ ಯಜಮಾನನು ಎಲ್ಲಾ ಹಕ್ಕುಗಳನ್ನು ಹೊಂದಿಲ್ಲ. ಕಾನೂನಿನ ಪ್ರಕಾರ ಇದನ್ನು ಪ್ರತಿಬಂಧಿಸಬಹುದು ಅಥವಾ ಮೊಟಕು ಮಾಡಬಹುದು.'' (ಹೊಯ್ಸಳ ಶರ್ಮ ಕೆ., ೧೯೮೬, ಪು ೨೭೩) ಇವರ ಪ್ರಕಾರ ವ್ಯಕ್ತಿಯು ವಸ್ತುವಿನ ಮೇಲೆ ಸಂಪೂರ್ಣ ಅಧಿಕಾರ ಅಥವಾ ಒಡೆತನವನ್ನು ಹೊಂದಿದ್ದರೂ ಕೂಡ ಕಾನೂನಿಗೆ ಅದನ್ನು ಮೊಟಕುಗೊಳಿಸುವ ಅಧಿಕಾರವಿದೆ. ಕಾನೂನಿಗೆ ಆಸ್ತಿಯ ಮೇಲೆ ಸಂಪೂರ್ಣ ಅಧಿಕಾರವಿರುತ್ತದೆ.

ಬಕ್‌ಲ್ಯಾಂಡ್ - ''ಯಜಮಾನತ್ವ ಅಂದರೆ ಅಂತಿಮವಾಗಿ ಒಬ್ಬ ವ್ಯಕ್ತಿಯು ವಸ್ತುವಿನ ಮೇಲೆ ಹೊಂದಿರುವ ಹಕ್ಕು ಅಥವಾ ಅಳೆದು ಉಳಿದ ಹಕ್ಕು. ಯಜಮಾನತ್ವವು ಹಕ್ಕುಗಳ ಮತ್ತು ಅಧಿಕಾರಗಳ ಸಮುದಾಯ.'' (ಹೊಯ್ಸಳ ಶರ್ಮ ಕೆ., ೧೯೮೬, ಪು ೨೭೩) ಎಂದು ವ್ಯಾಖ್ಯಾನಿಸಿರುವರು. ಒಡೆತನವು ಹಕ್ಕು ಮತ್ತು ಅಧಿಕಾರದಿಂದ ಕೂಡಿರುತ್ತದೆ ಎಂದಿದ್ದಾರೆ.

''ಒಬ್ಬ ವ್ಯಕ್ತಿಯ ಯಜಮಾನತ್ವವು ಅವನ ಮರಣದ ಜೊತೆಯಲ್ಲಿ ಕೊನೆಗಾಣುವುದಿಲ್ಲ. ಅವನು ಕಾಲವಾದ ಮೇಲೆ ಅವನ ವಾರಸುದಾರರು ಅವನ ಆಸ್ತಿಯನ್ನು ಕಾನೂನು ರಿತ್ಯ ಹೊಂದಲು ಅರ್ಹತೆ ಹೊಂದಿರುತ್ತಾರೆ. ಅವನ ಜೀವಮಾನದಲ್ಲೇ ತನ್ನ ಆಸ್ತಿಯನ್ನು ವಿಲೇವಾರಿ ಮಾಡಬಹುದು, ಮಾರಾಟ ಮಾಡಬಹುದು,

ಹಂಚಬಹುದು. ಇಲ್ಲವೆ ಮನಸ್ಸಿಗೆ ಬಂದಂತೆ ಮಾಡುವ ಸಂಪೂರ್ಣವಾದ ಹಕ್ಕನ್ನು ಹೊಂದಿರುತ್ತಾನೆ.'' (ಹೊಯ್ಸಳ ಶರ್ಮ ಕೆ., ೧೯೮೬, ಪು ೨೭೬) ಒಬ್ಬ ವ್ಯಕ್ತಿ ಮರಣ ಹೊಂದಿದರೆ ಆಸ್ತಿಯ ಒಡೆತನ ಅವನ ಜೊತೆಯಲ್ಲಿಯೇ ಕೊನೆಯಾಗದೆ ಮುಂದಿನ ಪೀಳಿಗೆಗೆ ವರ್ಗಾವಣೆಯಾಗುತ್ತದೆ. ಆಸ್ತಿಯನ್ನು ಸಂಪಾದಿಸಿದ ವ್ಯಕ್ತಿಯ ಹಿಂದೆ ಒಡೆತನ ಕೊನೆಯಾಗುವುದಿಲ್ಲ.

ಕಾರ್ಲ್‌ಮಾರ್ಕ್ಸ್ - ''ಉಳ್ಳವರು ಮತ್ತು ಇಲ್ಲದವರ ನಡುವೆ ಬಿರುಕು ಉಂಟುಮಾಡುವುದು ಆಸ್ತಿಯ ಖಾಸಗಿ ಒಡೆತನ'' ಎಂದಿರುವರು. (ಗೌಡ ವಿ.ಹೆಚ್., ೨೦೦೪, ಪು ೩೯)

ಗಾಂಧೀಜಿಯವರು - ''ಶ್ರೀಮಂತರು ಸಮಾಜದ ಒಳಿತಿಗಾಗಿ, ಐಶ್ವರ್ಯದ ನ್ಯಾಸಧಾರಿಗಳಾಗಿರಬೇಕು. ಆದರೂ ಆಸ್ತಿಯ ಖಾಸಗಿ ಒಡೆತನವನ್ನು ಪ್ರತಿಪಾದಿಸುವವರಿಗೇನೂ ಕಡಿಮೆಯಿಲ್ಲ'' ಎಂದಿರುವರು. (ಗೌಡ ವಿ.ಹೆಚ್., ೨೦೦೪, ಪು ೩೯)

ಒಟ್ಟಿನಲ್ಲಿ ಆಸ್ತಿಯ ಖಾಸಗಿ ಒಡೆತನ ಹೊಂದುವುದು ಅತಿ ಮುಖ್ಯವಾದುದಾಗಿದೆ. ವ್ಯಕ್ತಿಯು ಖಾಸಗಿ ಒಡೆತನ ಹೊಂದುವುದರಿಂದ ಸಮಾಜದಲ್ಲಿ ಅವನ ಸ್ಥಾನಮಾನದಲ್ಲಿ, ಗೌರವದಲ್ಲಿ ಇರುವ ವ್ಯತ್ಯಾಸವು ತಿಳಿಯುತ್ತದೆ.

ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣು ಎಂದಿಗೂ ಸರ್ವಸ್ವತಂತ್ರಳಲ್ಲ. ಅವಳು ತನ್ನ ಎಲ್ಲ ಪ್ರಮುಖ ಘಟ್ಟಗಳಲ್ಲೂ ಪುರುಷನ ಬೇರೆ ಬೇರೆ ರೂಪಗಳಲ್ಲಿ ನಿಯಂತ್ರಿತಗೊಂಡಿದ್ದಾಳೆ. ಮದುವೆಗೆ ಮುಂಚೆ ತಂದೆಯ ಮನೆ, ಮದುವೆಯಾದ ನಂತರ ಗಂಡನ ಮನೆಯಲ್ಲಿ ಕಳೆಯುವುದರಿಂದ ಅವಳಿಗೆ ಆಸ್ತಿಯ ಮೇಲೆ ಹಕ್ಕಿನ ಪ್ರಸ್ತಾವವೇ ಇಲ್ಲ. ಹೆಣ್ಣು ಪುರುಷನ ಆಸ್ತಿ ಆದುದರಿಂದ ಅವಳಿಗ್ಯಾಕೆ ಆಸ್ತಿಯ ಹಕ್ಕು? ಎನ್ನಲಾಗಿದೆ. ಹೆಣ್ಣನ್ನು ಹೊರುವ, ಹೆರುವ ಯಂತ್ರವಾಗಿ ಪರಿಗಣಿಸಿದ್ದೇ ಅವಳ ಶೋಷಣೆಗೆ ಮೂಲ ಕಾರಣವಾಗಿದೆ. ತನಗಿಲ್ಲದ ವಿಶಿಷ್ಟ ಶಕ್ತಿ ಹೆಣ್ಣಿನಲ್ಲಿದ್ದುದರಿಂದ ಅವಳ ಮೇಲೆ ಪುರುಷ ತನ್ನ ನಿಯಂತ್ರಣ ಒಡ್ಡಲಾರಂಭಿಸಿದ. ಅವಳು ತನ್ನ ಮಗುವಿಗೆ ಜನ್ಮ ಕೊಡುವವಳಾದುದರಿಂದ ಅವಳ ಮೇಲೆ ಅವನಿಗೆ ಸಂಪೂರ್ಣ ಹತೋಟಿ ಹಾಗೂ ಒಡೆತನದ ಅರ್ಥದಲ್ಲೇ ಅವನು ಅವಳ ಯಜಮಾನನಾದ, ಭೂಮಿಯ ಮೇಲೆ ಒಡೆತನ ಹೊಂದಿದಂತೆ ತನ್ನ ಹೆಣ್ಣಿನ ಮೇಲೂ ಅವನು ಒಡೆತನ ಹೊಂದತೊಡಗಿದ.

ಎಂಗೆಲ್ಸ್ ತನ್ನ The Caporigin of family, private property and the state (1845) ಎಂಬ ಮಹಾಪ್ರಬಂಧದಲ್ಲಿ ''ಸ್ತ್ರೀ ಶೋಷಣೆ ಎನ್ನುವುದು ಆರಂಭವಾದುದೇ ಖಾಸಗಿ ಸಂಪತ್ತಿನ ಗಳಿಕೆಯಿಂದ ಎಂದು ಪ್ರತಿಪಾದಿಸಿದನು. ಆರಂಭದಲ್ಲಿ ಖಾಸಗಿ ಒಡೆತನದ ಕಲ್ಪನೆಯಿರಲಿಲ್ಲ, ಇಡೀ ಭೂಮಿ ಹಾಗೂ ಅದರ ಉತ್ಪನ್ನಗಳು ಪ್ರಾಕೃತಿಕ ಸಂಪನ್ಮೂಲಗಳು ಮಾನವ ಸಮುದಾಯಕ್ಕೆ ಸೇರಿದವುಗಳು ಎಂಬ ಕಲ್ಪನೆಯಿತ್ತು. ಕ್ರಮೇಣ ಆಸ್ತಿ ಪರಿಕಲ್ಪನೆ ಹುಟ್ಟಿತು. ಭೂಮಿ, ಚರ-ಸ್ಥಿರ ಆಸ್ತಿಗಳ ಕಲ್ಪನೆ ಕಂಡುಬಂದಿತು. ಹೆಣ್ಣು ಕೂಡ ಪುರುಷನ ಖಾಸಗಿ ಆಸ್ತಿಯ ಸ್ವರೂಪವನ್ನು ಪಡೆದುಕೊಂಡಳು'' ಎಂಬ ಹೇಳಿಕೆ ಉಲ್ಲೇಖನೀಯ. (ಉದ್ಧೃತ: ಮಂಗಳಾ ಪ್ರಿಯದರ್ಶಿನಿ ಡಿ., ೨೦೦೭, ಪು ೬೭)

ಎಂಗೆಲ್ಸ್ ಸ್ತ್ರೀ-ಪುರುಷರ ಅಸಮಾನತೆಯನ್ನು ಕುರಿತು ಚರ್ಚಿಸುತ್ತಾ ''ಮಹಿಳೆ ಉತ್ಪಾದನೆ ಹಾಗೂ ಆರ್ಥಿಕ ಕ್ಷೇತ್ರದಿಂದ ದೂರ ಉಳಿದಿದ್ದೇ ಅವಳ ಸಾಮಾಜಿಕ ಅಧಃಪತನಕ್ಕೆ ಕಾರಣವಾಯಿತು. ಮುಂದುವರೆದು, ಹೆಣ್ಣಿನ ಬದುಕಿನಲ್ಲಿ 'ಕುಟುಂಬ', 'ಉದ್ಯೋಗ', 'ವಿವಾಹ'ಗಳು ಅಂತಹ ಮುಖ್ಯವಾದ ಪಾತ್ರ ವಹಿಸುತ್ತವೆ ಎಂಬುದನ್ನು ಗಂಭೀರವಾಗಿ ಚರ್ಚಿಸುತ್ತಾರೆ. ವಿವಾಹಕ್ಕೂ ಹೆಣ್ಣಿನ ಶೋಷಣೆಗೂ ಒಂದು ನಿಕಟವಾದ ಸಂಬಂಧವನ್ನು ಎಂಗೆಲ್ಸ್

ಗುರುತಿಸುವುದಷ್ಟೇ ಅಲ್ಲದೆ, ಏಕಪತ್ನಿತ್ವ ಪದ್ಧತಿಯು ಹೆಣ್ಣು ಪುರುಷನ ಖಾಸಗಿ ಸ್ವತ್ತು, ಆಸ್ತಿಯಾಗುವಂತಾಗಿ ಆಕೆಯ ಶೋಷಣೆಯ ಪ್ರಮುಖ ಸಾಧನವಾಯಿತು'' ಎನ್ನುತ್ತಾರೆ. (ಉದ್ಧೃತ: ಮಂಗಳಾ ಪ್ರಿಯದರ್ಶಿನಿ ಡಿ., ೨೦೦೭, ಪು ೬೮) ಪುರುಷನು ಹೊಲ, ಗದ್ದೆ, ಜಮೀನು, ಚರ-ಸ್ಥಿರ, ಆಸ್ತಿಗಳಿಗೆ ಯಜಮಾನನೋ ಹಾಗೆಯೇ ಹೆಣ್ಣಿಗೂ ಕೂಡ ಯಜಮಾನನಾದನು. ಹೆಣ್ಣನ್ನು 'ದೇಹ' ಸಂಬಂಧಿ ನೆಲೆಯಲ್ಲಿ ಗುರುತಿಸಲಾಯಿತು. ಆದರೆ ಪುರುಷನನ್ನು ಬೌದ್ಧಿಕ ನೆಲೆಯಲ್ಲಿ ಗುರುತಿಸಲಾಯಿತು. ದೇಹವಾಗಲಿ, ಪ್ರಕೃತಿಯಾಗಲಿ ಪುರುಷನಾಕ್ರಮಣಕ್ಕೆ ಒಳಗಾಗಬಹುದಾದ ವಿಚಾರ. ಆದ್ದರಿಂದಲೇ ಅವಳ ಮೇಲೆ ಹತೋಟಿ ಸಾಧಿಸಲು, ಅವಳ ವೈಚಾರಿಕತೆ, ಅಭಿಪ್ರಾಯ ನಿರ್ಮಾಣದ ಮೇಲೆ ಅವನು ಸದಾ ಪ್ರಭುತ್ವ ಸಾಧಿಸುತ್ತಾ ನಿಯಂತ್ರಣಕ್ಕೊಳಪಡಿಸುತ್ತಾ ಬಂದಿದ್ದಾನೆ.

ಆದಿವಾಸಿಯರಲ್ಲೂ ಕೂಡ ''ಕೆಲವು ಪಂಗಡದವರು ಸ್ತ್ರೀಯರ ಅಂತಸ್ತು ಕೀಳೆಂದು ಭಾವಿಸಿ, ಅವರನ್ನು ಚರಸ್ವತ್ತಿಗೆ ಹೋಲಿಸುತ್ತಾರೆ.'' (ನಂಜಮ್ಮಣ್ಣಿ ಎಂ., ೧೯೭೧, ಪು ೧೮೯)

''ಸ್ತ್ರೀಯರನ್ನು ಆಸ್ತಿಯ ಒಂದು ಭಾಗವೆಂದು ಪರಿಗಣಿಸಿದ್ದುದರಿಂದ ಅವರಿಗೆ ಆಸ್ತಿಯ ಮತ್ತು ದತ್ತು ಸ್ವೀಕಾರದ ಹಕ್ಕು ಇಲ್ಲದಂತಾಯಿತು. ಸ್ತ್ರೀಯನ್ನು ಭೂಮಿ, ದನಕರುಗಳು ಮತ್ತು ಇತರ ಸಂಪತ್ತುಗಳಂತೆ ಸಂಪತ್ತಿನ ಒಂದು ಭಾಗವೆಂದು ಗೌತಮನು ಸಾರಿದನು. ವಸಿಷ್ಠ ಮತ್ತು ಬೌದ್ಧಾಯನರ ಪ್ರಕಾರ-ಸ್ತ್ರೀಯರಿಗೆ ಆಸ್ತಿಯಲ್ಲಿ ಹಕ್ಕಿರಲಿಲ್ಲ. ಸ್ತ್ರೀಯನ್ನು ಆಸ್ತಿಯ ಒಂದು ಭಾಗವೆಂದು ಪರಿಗಣಿಸಿದ್ದುದರಿಂದ ವ್ಯಾಪಾರ ಮೂಲಕದ ವಿವಾಹ ಪದ್ಧತಿ ಆಚರಣೆಗೆ ಬಂದಿತು.'' (ವೆಂಕಟರಾಯಪ್ಪ ಕೆ.ಎನ್., ೧೯೭೧, ಪು ೩೫) ಸ್ಮೃತಿಗಳ ಸಮಯದಲ್ಲಿ ಸಮಾಜವು ಸ್ತ್ರೀಯರಿಗೆ ಆಸ್ತಿ ಪಡೆಯುವ ಸ್ವಾತಂತ್ರ್ಯ ಕೊಟ್ಟಿರಲಿಲ್ಲ. ಕಾರಣ ಸ್ತ್ರೀಯರೇ ಪುರುಷರಿಗೆ ಸೇರಿದವಳು ಎಂಬ ಭಾವನೆ ಸಮಾಜದಲ್ಲಿ ಬೇರೂರಿತ್ತು. ಪುರುಷನು ಸ್ತ್ರೀಯನ್ನು ಕಾಣಿಕೆಯಾಗಿ, ದಾನವಾಗಿ ಸಹ ಕೊಡಬಹುದಿತ್ತು. ಒಟ್ಟಿನಲ್ಲಿ ಸಮಾಜದ ವ್ಯವಸ್ಥೆಯು ಅವಳನ್ನು ಮನುಷ್ಯ ಜಾತಿಗೆ ಸೇರಿಸಲು ನಿರಾಕರಿಸಿದುದರಿಂದ ಆಸ್ತಿಯ ರೂಪ ಪಡೆದುಕೊಳ್ಳುವಂತಾಯಿತು. ವೈದಿಕ ಯುಗದಲ್ಲಿ ಮಹಿಳೆ ಕುಟುಂಬದ ಆಸ್ತಿಯ ಭಾಗವಾಗಿರುವುದರಿಂದ ಅವಳನ್ನು ಕುಟುಂಬದ ಯಜಮಾನ ಮಾರುವ, ಕೊಳ್ಳುವ ಹಾಗೂ ಒತ್ತೆ ಇಡುವ ಹಕ್ಕುಗಳನ್ನೆಲ್ಲ ಧರ್ಮಸಮ್ಮತವಾಗಿಯೇ ಪಡೆದುಕೊಂಡಿದ್ದ. ವೇದಗಳ ಅಂತ್ಯದ ಕಾಲದಲ್ಲಿ ಮಹಿಳೆಯರನ್ನು ಅಮಾನವೀಯವಾಗಿ ನಡೆಸಿಕೊಳ್ಳಲಾಗಿತ್ತು. ಮಹಿಳೆಯ ಪತಿಯು ಮಡಿದಾಗ ಅವಳನ್ನು ಅವಳ ಪತಿಯ ತಮ್ಮ ಅಥವಾ ಇನ್ನೊಬ್ಬ ಪುರುಷನ ವಶಕ್ಕೆ ಕೊಡಲಾಗುತ್ತಿತ್ತು. ಹೀಗಾಗಿ ಅವಳನ್ನು ಒಂದು ಆಸ್ತಿ ಆಗಿ ಪರಿಗಣಿಸಲಾಗಿದೆ. ಯಾರೆ ಆಗಲಿ ಬೇಕೆಂದಾಗ ಅವಳ ಒಡೆಯನಾಗಬಹುದಾಗಿತ್ತು.

**ಮಹಿಳೆಯರ ಆಸ್ತಿ ಒಡೆತನ**

ಮಹಿಳೆಯರ ಆಸ್ತಿ ಒಡೆತನ ಹೊಂದಿರುವುದನ್ನು ಅರಿಯಬೇಕಾದರೆ, ಹಿಂದೂ ಮಹಿಳೆಯರ ಆಸ್ತಿಯು ಎರಡು ವರ್ಗಗಳಿಗೆ ಸೇರುತ್ತದೆ. ಒಂದು ಆಕೆಯ 'ಸ್ತ್ರೀಧನ', ಎರಡನೆಯದು 'ಮಹಿಳೆಯ ಆಸ್ತಿ' ಎಂದು

**ಸ್ತ್ರೀಧನ:** ಹೆಣ್ಣು ಮಕ್ಕಳಿಗಾಗಿಯೇ ಮೀಸಲಿಟ್ಟ ಪ್ರತ್ಯೇಕ ಆಸ್ತಿ 'ಸ್ತ್ರೀಧನ' ಹೆಸರೇ ಸೂಚಿಸುವಂತೆ ಸ್ತ್ರೀಧನವೆಂದರೆ ಸ್ತ್ರೀಯರೆ ಸಂಪೂರ್ಣ ಒಡೆತನ ಹೊಂದಿದ ಸ್ವತ್ತು. ಪುರುಷ ಪ್ರಧಾನ ಭಾರತೀಯ ಸಮಾಜದಲ್ಲಿ ಸ್ವತ್ತಿನ ಒಡೆತನದ ಹಕ್ಕು ಮತ್ತು ಅದರ ಉತ್ತರಾಧಿಕಾರವು ಪುರುಷರಿಗೆ ಲಭ್ಯವಾಗಿದೆ. ಎಲ್ಲ ಸ್ವತ್ತಿನ ಒಡೆತನವನ್ನು ಪುರುಷರಿಗೆ ನೀಡಿದರೆ ಮಹಿಳೆಯರಿಗಾಗುವ ಅನ್ಯಾಯವನ್ನು ಅರಿತು ಕೆಲವು ಸ್ಮೃತಿಕಾರರು ಸ್ತ್ರೀಧನಕ್ಕೆ ಮಹತ್ವ ನೀಡಿದರು. ಮಹಿಳೆಯರು ಮದುವೆಗೆ ಮೊದಲು ಮತ್ತು ನಂತರ ಹೊಂದಿರುತ್ತಿದ್ದ ಚರಾಚರ ಆಸ್ತಿಗಳೆಲ್ಲವೂ ಸ್ತ್ರೀಧನದಲ್ಲಿ

ಸೇರ್ಪಡೆಯಾಗುತ್ತಿತ್ತು. ಸ್ತ್ರೀಧನ ಎಂದರೇನು ಎಂಬ ವಿಚಾರವಾಗಿ ಅನೇಕ ಹೇಳಿಕೆಗಳಿವೆ. ಸ್ಮೃತಿಗಳ ಹೇಳಿಕೆಯಂತೆ ಮನು ಕೊಟ್ಟಿರುವ ಅಭಿಪ್ರಾಯ ಹೀಗಿದೆ.

''೧. ವಿವಾಹದ ಸಮಯದಲ್ಲಿ ಹೋಮಕುಂಡದ ಎದುರು ಆಕೆಗೆ ಕೊಡುವ ಬಳುವಳಿ.

೨. ಪತಿಯ ಗೃಹಕ್ಕೆ ತೆರಳುವಾಗ ಕೊಡುವ ಬಳುವಳಿ.

೩. ಪ್ರೀತಿಧನ ಅಥವಾ ಪಾದವಂದನಿಕಾ ಎಂದರೆ ಅತ್ತೆ ಮಾವಂದಿರು ಆಕೆಗೆ ಪ್ರೀತಿಯಿಂದ ಕೊಡುವ ವಸ್ತು ಅಥವಾ ಹಣ. ಹಾಗೆಯೇ ಇತರ ಹಿರಿಯರಿಗೆ ನಮಸ್ಕರಿಸಿದಾಗ ಅವರು ಕೊಡುವ ಬಳುವಳಿ.

೪. ತಂದೆಯಿಂದ, ತಾಯಿಯಿಂದ, ಸೋದರನಿಂದ ಬರುವ ಬಳುವಳಿ.'' (ಪದ್ಮಾವತಮ್ಮ ಕೆ., ೨೦೦೨, ಪು ೧೧) ಮನುವಿನ ಪ್ರಕಾರ ವಸ್ತುಗಳು, ಆಭರಣಗಳು ಮತ್ತು ಹಣ ಮಾತ್ರ ಸ್ತ್ರೀಧನದ ರೂಪದಲ್ಲಿ ಮಹಿಳೆಯರಿಗೆ ಕೊಡುವ ಆಸ್ತಿ ಎಂದು ಹೇಳಿದರೆ, ಯಾಜ್ಞವಲ್ಕ್ಯರು ಸ್ತ್ರೀಧನದ ವ್ಯಾಪ್ತಿಯನ್ನು ಇನ್ನಷ್ಟು ವಿಶಾಲಗೊಳಿಸಿದ್ದಾರೆ.

ಯಾಜ್ಞವಲ್ಕ್ಯರ ಪ್ರಕಾರ - ''ಮಧುವಿಗೆ ಮದುವೆಯ ಸಮಯದಲ್ಲಿ ತಂದೆ, ತಾಯಿ, ಸಹೋದರರಷ್ಟೇ ಅಲ್ಲ ಯಾರೇ ಕೊಡುವ ಉಡುಗೊರೆ ಕಾಣಿಕೆ, ಸ್ವತ್ತು ಮತ್ತು ಮದುವೆಯ ನಂತರ ಕೊಡಲ್ಪಡುವ ಉಡುಗೊರೆ, ಕಾಣಿಕೆಗಳು ಹಾಗೂ ಗಂಡ ಇನ್ನೊಂದು ಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ ಕೊಡುವ ಆಸ್ತಿ-ಪಾಸ್ತಿ ಎಲ್ಲವೂ ಸ್ತ್ರೀಧನವಾಗುತ್ತದೆ.'' (ಶ್ರೀನಿವಾಸ ಸಿರನೂರಕರ್, ೨೦೦೫, ಪು ೬೧)

ವಿಜ್ಞಾನೇಶ್ವರನ ಪ್ರಕಾರ - ''ಸ್ತ್ರೀಗೆ ತಾಯಿ, ತಂದೆ, ಪತಿ, ಸೋದರ ಮತ್ತು ಸಂಬಂಧಿಗಳು ಕೊಡುವ ವಸ್ತುಗಳೆಲ್ಲವೂ ಹಕ್ಕಿನ ಪ್ರಕಾರ ಬರುವ ಆಸ್ತಿಯೂ ಸ್ತ್ರೀಧನ ಎಂದಿದ್ದಾರೆ.'' (ಪದ್ಮಾವತಮ್ಮ ಕೆ., ೨೦೦೨, ಪು ೧೨) ಮನು ಸ್ತ್ರೀಧನವನ್ನು ಚರಾಸ್ತಿಗೆ ಮಾತ್ರ ಸೀಮಿತಗೊಳಿಸಿದರೆ ಯಾಜ್ಞವಲ್ಕ್ಯ ಮತ್ತು ವಿಜ್ಞಾನೇಶ್ವರ ಸ್ಥಿರ ಆಸ್ತಿಯನ್ನು ಸ್ತ್ರೀಧನದಲ್ಲಿ ಸೇರಿಸಿರುವರು.

''ಹಿಂದೂ ಸ್ತ್ರೀ ಆರ್ಜಿಸಿದ ಅಥವಾ ಸ್ವಾಧೀನತೆ ಹೊಂದಿರುವ ಎಲ್ಲಾ ಆಸ್ತಿಯನ್ನು 'ಸ್ತ್ರೀಧನ'ವೆಂದು ಪರಿಗಣಿಸಲಾಗುತ್ತದೆ. ಮದುವೆಯಲ್ಲಿ ನೀಡಲಾದ ವರದಕ್ಷಿಣೆಯನ್ನು ಅವಳಿಗೆ ಸೇರಿದ ಸ್ತ್ರೀಧನವೆಂದು ಪರಿಗಣಿಸಲಾಗುತ್ತಿದೆ.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೩೫) ಕಾನೂನಿನ ಪ್ರಕಾರ ಚರಾಸ್ತಿ-ಸ್ಥಿರಾಸ್ತಿ, ಅಲ್ಲದೆ ಮದುವೆಯ ಸಂದರ್ಭದಲ್ಲಿ ಕೊಡುವ ವರದಕ್ಷಿಣೆಯು ಸ್ತ್ರೀಧನವಾಗುತ್ತದೆ.

ಸ್ತ್ರೀಧನದಲ್ಲಿಯೂ ಪ್ರಕಾರಗಳಿವೆ ಎನ್ನುವುದಕ್ಕೆ ಕಾತ್ಯಾಯನ ಸ್ಮೃತಿಯೇ ಆಧಾರ. ಕಾತ್ಯಾಯನ ಸ್ಮೃತಿಯಲ್ಲಿ ೨೭ ವಿವಿಧ ಸ್ವತ್ತುಗಳನ್ನು, ವಸ್ತುಗಳನ್ನು ಸ್ತ್ರೀಧನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು - ''ಮದುವೆ ಸಮಯದಲ್ಲಿ ಅಗ್ನಿ ಸಮಕ್ಷಮದಲ್ಲಿ ಕೊಡಲ್ಪಡುವ ಕಾಣಿಕೆಗಳು, ಉಡುಗೊರೆಗಳು, ವಧು-ವರನನ್ನು ಹಿಂಬಾಲಿಸಿ ಅವರ ಮನೆಗೆ ಹೋಗುವಾಗ ಕೊಟ್ಟಿದ್ದು 'ಅದ್ಯಾವಹನಿಕ ಸ್ತ್ರೀಧನ' ಎಂದು ಕರೆಯಲ್ಪಟ್ಟಿದೆ. ಅತ್ತೆ-ಮಾವ ವಾತ್ಸಲ್ಯಪೂರ್ವಕವಾಗಿ ಕೊಟ್ಟಿದ್ದು ಮತ್ತು ವಧು ನಮಸ್ಕಾರ ಮಾಡುವಾಗ ಹಿರಿಯರು ಕೊಟ್ಟಿದ್ದು, 'ಪ್ರೀತಿದತ್ತ ಸ್ತ್ರೀಧನ' ಎನಿಸುತ್ತದೆ. ಪಾತ್ರೆ-ಪಗಡೆ, ಹೈನುದನ, ಆಭರಣ, ವಸ್ತ್ರ, ಮತ್ತು ಸಂಬಂಧಿಕರು ಕೊಡುವ ಹಣ 'ಕನ್ಯಾ ಶುಲ್ಕ ಸ್ತ್ರೀಧನ.' ಮದುವೆಯ ನಂತರ ಗಂಡಿನ ಕಡೆಯವರು ಅಥವಾ ತಂದೆಯ ಕಡೆಯವರು ಕೊಟ್ಟಿದ್ದು 'ಅನ್ವಾದೇಯ ಸ್ತ್ರೀಧನ' ವಿವಾಹಿತ ಸ್ತ್ರೀ ತನ್ನ ಗಂಡನ ಮನೆಯಲ್ಲಿ ಅಥವಾ ಅವಿವಾಹಿತ ಕನ್ಯೆ ಮತ್ತು ತಂದೆಯ ಮನೆಯಲ್ಲಿ ತನ್ನ ಅಣ್ಣ-ತಮ್ಮಂದಿರಿಂದಾದ, ತಂದೆ-ತಾಯಿಗಳಿಂದ ಪಡೆಯುವ ಸ್ವತ್ತನ್ನು 'ಸೌದಾಯಿಕ ಸ್ತ್ರೀಧನ' ಎಂದು ಕರೆಯಲಾಗಿದೆ.'' (ಶ್ರೀನಿವಾಸ ಸಿರನೂರಕರ್, ೨೦೦೫, ಪು ೬೧, ೬೨) ಒಟ್ಟಿನಲ್ಲಿ ಮಹಿಳೆಗೆ ವಿವಿಧ ಪ್ರಕಾರದ ಚರಾಸ್ತಿಯನ್ನು ಸ್ತ್ರೀಧನ ಮೂಲಕ ನೀಡಲಾಗಿದೆ.

ಇನ್ನು ಸ್ತ್ರೀಧನದ ಉತ್ತರಾಧಿಕಾರವನ್ನು ಗಮನಿಸಿದರೆ, ಸ್ತ್ರೀಧನಕ್ಕೆ ಸ್ತ್ರೀಯರೆ ಉತ್ತರಾಧಿಕಾರಿಗಳು. ಸ್ತ್ರೀಧನದ ಉತ್ತರಾಧಿಕಾರದ ಕ್ರಮವನ್ನು ಧರ್ಮ ಶಾಸ್ತ್ರಕಾರರು ವಿವಿಧ ರೀತಿಯಲ್ಲಿ ವಿವರಿಸಿದ್ದರೂ ಅವರೆಲ್ಲರೂ ಸ್ತ್ರೀಧನಕ್ಕೆ ಸ್ತ್ರೀಯರೆ ಉತ್ತರಾಧಿಕಾರಿಗಳು ಎಂದಿದ್ದಾರೆ.

ಯಾಜ್ಞವಲ್ಕ್ಯರ ಪ್ರಕಾರ - ''ಸ್ತ್ರೀಧನದ ಉತ್ತರಾಧಿಕಾರದಲ್ಲಿ ಮೊದಲ ಪ್ರಾಶಸ್ತ್ಯ ಹೆಣ್ಣು ಮಕ್ಕಳಿಗೆ. ಹೆಣ್ಣು ಸಂತಾನವಿಲ್ಲದಿದ್ದರೆ, ಗಂಡು ಮಕ್ಕಳಿಗೆ ಸೇರಬೇಕು. ಯಾವ ಸಂತಾನವು ಇಲ್ಲದಿದ್ದಾಗ ಗಂಡನಿಗೆ ಮತ್ತು ಅವಳ ತಂದೆ-ತಾಯಿಗಳಿಗೆ ಸೇರಬೇಕು.'' (ಶ್ರೀನಿವಾಸ ಸೀರನೂರಕರ್, ೨೦೦೫, ಪು ೬೩) ಅಂದರೆ ಹೆಣ್ಣು ಮಕ್ಕಳಿಲ್ಲದಿದ್ದಾಗ ಮಾತ್ರ ಗಂಡು ಮಕ್ಕಳಿಗೆ ಮತ್ತು ಪತಿಗೆ ಸ್ತ್ರೀಧನ ಸೇರುತ್ತಿತ್ತು. ಆದರೆ ಸಂವಿಧಾನದ ಪ್ರಕಾರ ಸ್ತ್ರೀಧನದ ವಾರಸುದಾರಿಕೆಗೆ ಸಂಬಂಧಿಸಿದಂತೆ ''ಸ್ತ್ರೀಧನದ ಪಾಲನ್ನು ಪಡೆಯಲು ಮಗನಿಗೂ ಹಕ್ಕು ನೀಡಲಾಗಿದೆ. ಮಗಳು ಪಡೆಯುವ ಪಾಲಿನ ಅರ್ಧವನ್ನು ಮಗನು ಪಡೆಯುತ್ತಾನೆ.'' ( ಬಾಬಾ ಸಾಹೇಬ್ ಅಂಬೇಡ್ಕರ್, ೨೦೦೧, ಪು ೭) ಮೊದಲು ಹೆಣ್ಣು ಸಂತಾನವಿರದಿದ್ದಾಗ ಮಾತ್ರ ಗಂಡು ಸಂತಾನವು ಸ್ತ್ರೀಧನವನ್ನು ಹೊಂದಬಹುದಾಗಿತ್ತು. ಆದರೆ ಈಗ ಸಂವಿಧಾನದಲ್ಲಿ ತಿದ್ದುಪಡಿಯ ಮೂಲಕ ಹೆಣ್ಣು ಸಂತಾನವಿದ್ದರೂ ಗಂಡು ಸಂತಾನಕ್ಕೂ ಉತ್ತರಾಧಿಕಾರದ ಹಕ್ಕನ್ನು ನೀಡಿದೆ.

**ಮಹಿಳೆಯ ಆಸ್ತಿ:** ಪ್ರಾಚೀನ ಕಾಲದ ಮಹಿಳೆಯರ ಸ್ಥಿತಿ-ಗತಿ ಮತ್ತು ಆಸ್ತಿ ಹಕ್ಕಿನ ಒಡೆತನವನ್ನು ಅರಿಯಲು ಅಂದಿನ ಗ್ರಂಥಗಳೇ ಆಧಾರವಾಗಿದ್ದವು. ಮಹಿಳೆಯರ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ವೇದಗಳ ಯುಗವನ್ನು ಸುವರ್ಣಯುಗವೆಂದು ಗುರುತಿಸಲಾಗಿದೆ. ಋಗ್ವೇದ ಕಾಲದಲ್ಲಿ ಲಿಂಗ ವ್ಯವಸ್ಥೆಯಲ್ಲಿ ಸಂಪೂರ್ಣವಾಗಿ ಸಮಾನತೆ ಇರದಿದ್ದರೂ, ಲಿಂಗ ತಾರತಮ್ಯ ಎದ್ದು ಕಾಣುತ್ತಿರಲಿಲ್ಲ. ಈ ಕಾಲದಲ್ಲಿ ''ಕುಟುಂಬದ ಆಸ್ತಿಯ ಹಂಚಿಕೆಯ ಬಗ್ಗೆ ಯಾವುದೇ ಸ್ಪಷ್ಟ ಮಾಹಿತಿ ದೊರೆಯದಿದ್ದರೂ ಋಗ್ವೇದದ ಹಲವು ಶ್ಲೋಕಗಳು ಸ್ತ್ರೀಯರಿಗೆ ಆಸ್ತಿಯಲ್ಲಿ ಪಾಲು ಇತ್ತು ಎಂಬುದನ್ನು ಸೂಚಿಸುತ್ತದೆ.'' (ಇಂದಿರಾ ಆರ್., ೧೯೯೯, ಪು ೨೨) ಮಹಿಳೆಯು ವೇದಗಳ ಕಾಲದಲ್ಲಿ ಆಸ್ತಿ ಹಕ್ಕನ್ನು ಹೊಂದುವುದರಿಂದ ಪುರುಷರಿಗೆ ಸರಿಸಮಾನಳಾಗಿದ್ದಳು ಎಂದು ತಿಳಿದುಬರುತ್ತದೆ. ಅಲ್ಲದೆ ವೇದಮಂತ್ರ ಒಂದರಲ್ಲಿ ಕೂಡ ''ನನ್ನ ಮಗಳಿಗೆ ಸಲ್ಲಬೇಕಾದ ಅಂತಸ್ತು, ಆಸ್ತಿ ಸಂಪಾದಿಸಲು ಅವಳಿಗಿರುವ ಅರ್ಹತೆಗೆ ಮತ್ತು ಅವಳು ಮಾಡುವ ಧರ್ಮಕಾರ್ಯಗಳಿಗೆ ಅಡ್ಡಿಮಾಡಬಾರದು ಎಂದಿದೆ.'' (ಪದ್ಮಾವತಮ್ಮ ಕೆ., ೨೦೦೨, ಪು ೬) ತಂದೆಯ ಆಸ್ತಿಯಲ್ಲಿ ಮಗಳು ಹಕ್ಕು ಹೊಂದಿರುತ್ತಿದ್ದಳು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ''ವೇದ ಉಪನಿಷತ್ತುಗಳ ಕಾಲದ ಭಾರತದ ಮಹಿಳೆಗೆ ಉತ್ತಮವಾದ ಸ್ಥಾನವಿತ್ತು. ಪುತ್ರನಿಲ್ಲದ ವಂಶದಲ್ಲಿ ಪುತ್ರಿಗೆ ಆಸ್ತಿಯ ಹಕ್ಕಿತ್ತು. ತಂದೆ-ತಾಯಿಯರ ಅಂತ್ಯಕ್ರಿಯೆಗಳನ್ನು ಮಾಡಲು ಅವಳಿಗೆ ಹಕ್ಕಿತ್ತು.'' (ಮಂಗಳಾ ಟಿ.ನ., ೧೯೯೦, ಪು ೭) ವೇದಗಳ ಕಾಲದಲ್ಲಿ ತಂದೆ - ತಾಯಿಯರ ಆಸ್ತಿ ಮಹಿಳೆಯು ಹೊಂದುವುದರ ಜೊತೆಗೆ ತಂದೆ - ತಾಯಿಯರ ಅಂತ್ಯಕ್ರಿಯೆಯಲ್ಲಿ ಪುರುಷರಲ್ಲದೆ ಮಹಿಳೆಯರೂ ಪಾಲ್ಗೊಳ್ಳುತ್ತಿದ್ದರು. ಒಟ್ಟಿನಲ್ಲಿ ವೇದ, ಉಪನಿಷತ್ತುಗಳ ಕಾಲದಲ್ಲಿ ಮಹಿಳೆಯು ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಸ್ವತಂತ್ರವಾಗಿ ಜೀವಿಸಲು ಮತ್ತು ಆಸ್ತಿಹಕ್ಕು ಹೊಂದಲು ಅವಕಾಶವಿತ್ತು.

ಸ್ಮೃತಿಗಳ ಕಾಲದಲ್ಲಿ ಧರ್ಮಸೂತ್ರಗಳು ಪ್ರಚಲಿತವಾಗುವ ಕಾಲದಿಂದೀಚೆಗೆ ಭಾರತದಲ್ಲಿ ಮಹಿಳೆಯರ ಸ್ಥಿತಿ ದಿನದಿಂದ ದಿನಕ್ಕೆ ಹೀನವಾಗುತ್ತ ಬಂದಿತು. ಧರ್ಮಶಾಸ್ತ್ರಜ್ಞರ ಸಂಕುಚಿತ ಮನೋಭಾವದಿಂದಾಗಿ ಮಹಿಳೆಯು ಗೃಹಬಂಧನಕ್ಕೊಳಗಾದಳು. ಅಜ್ಞಾನದ ಕೂಪದಲ್ಲಿ ಬಿದ್ದು ಮಂಡೂಕದಂತಾದಳು. ಆಸ್ತಿ ಒಡೆತನ ಹೊಂದುವುದರಿಂದ

ದೂರವೇ ಉಳಿದಳು. ಯಾವಾಗಲೂ ಪುರುಷನ ಅಧೀನಳಾಗುವಂತಾದಳು. ಆ ಮೂಲಕ ಅನೇಕ ರೀತಿಯ ಶೋಷಣೆಗೆ ಒಳಗಾಗತೊಡಗಿದಳು; ಆಕೆಯೇ ಸ್ವತಃ ಒಂದು ಆಸ್ತಿಯಾಗಿ ಪರಿವರ್ತನೆಯಾಗತೊಡಗಿದಳು. ಆ ಮೂಲಕ ಪುರುಷನು ಆಸ್ತಿ ಹಕ್ಕು ಹೊಂದುವುದರ ಜೊತೆಗೆ ಆಕೆಯ ಮೇಲೂ ಒಡೆತನದ ಹಕ್ಕನ್ನು ಸ್ಥಾಪಿಸಲು ಸಹಾಯವಾಯಿತು.

ಕಾತ್ಯಾಯನ ಪ್ರಕಾರ - ''ಪತ್ನಿಯು ಸ್ವತಂತ್ರಳಾಗಿ ಹಣ ಗಳಿಸಬಹುದು, ಆದರೆ ಆಕೆಯ ಸಂಪಾದನೆ ಪತಿಗೇ ಸೇರಬೇಕು ಎಂದು ಹೇಳಿದ್ದಾನೆ.'' (ವೆಂಕಟರಾಯಪ್ಪ. ಕೆ.ಎನ್., ೧೯೭೧, ಪು ೩೫) ಇಲ್ಲಿ ಮಹಿಳೆಯು ಹಣ ಗಳಿಸಿದರೂ ಅದು ಕೂಡ ಪತಿಗೆ ಸೇರಬೇಕು. ಆಕೆ ಸ್ವಂತ ಗಳಿಸಿದ ಹಣದ ಮೇಲೂ ಅವಳಿಗೆ ಅಧಿಕಾರವಿಲ್ಲದಂತಾಗಿದೆ.

ಭೋಧಾಯನನು - ''ಸ್ತ್ರೀಯರಿಗೆ ಅನುವಂಶಿಕ ಹಕ್ಕಿಲ್ಲ. ಅವರು ತಂದೆಯ ಆಸ್ತಿಗೆ ವಾರಸುದಾರರಾಗುವುದಿಲ್ಲ ಎಂದಿದ್ದಾನೆ. ಒಂದು ವೇಳೆ ತಂದೆ ತಾಯಿಗೆ ಒಬ್ಬಳೆ ಮಗಳಿದ್ದರೂ ಅವಳಿಗೆ ಆಸ್ತಿಯ ಹಕ್ಕು ಬರಲಾರದೆಂದಿದ್ದಾನೆ. ಆದರೆ ಅವಳ (ಮಗಳ ಮಗ) ದೌಹಿತ್ರನಾದುದರಿಂದ ತಾತನ ಆಸ್ತಿಯಲ್ಲಿ ಅವನಿಗೆ ಹಕ್ಕಿರುತ್ತದೆ.'' (ನಿರುಪಮಾ, ೧೯೯೬, ಪು ೬೮)

ನಮ್ಮ ಪುರಾಣಗಳು, ಸ್ಮೃತಿಗಳು ಹೆಣ್ಣಿಗೂ ಆಸ್ತಿಗೂ ಯಾವುದೇ ರೀತಿಯ ಸಂಬಂಧವೆ ಇಲ್ಲ ಎನ್ನುವ ಹಾಗೆ ಅವಳನ್ನು ಮಾನಸಿಕವಾಗಿ ಸಿದ್ಧಗೊಳಿಸಿವೆ. ಆದರೆ ಕೆಲವು ಸ್ಮೃತಿಕಾರರು ಮಹಿಳೆಯರಿಗೆ ಆಸ್ತಿ ಹಕ್ಕನ್ನು ನಿರಾಕರಿಸಿದ್ದರೆ, ಕೆಲವರು ಅದನ್ನು ಅರೆಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. ಆದರೆ ಯಾಜ್ಞವಲ್ಕ್ಯ, ಬೃಹಸ್ಪತಿ, ಗೌತಮರಂತಹ ಸ್ಮೃತಿಕಾರರು ಪರಂಪರೆಯನ್ನು ದಿಕ್ಕರಿಸಿ ಮಹಿಳೆಯರಿಗೆ ಆಸ್ತಿಹಕ್ಕಿನ ಅಧಿಕಾರವನ್ನು ನೀಡುವಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟಿದ್ದಾರೆ.

**ಯಾಜ್ಞವಲ್ಕ್ಯ:** ಯಾಜ್ಞವಲ್ಕ್ಯ ಪ್ರಾಚೀನ ಭಾರತದ ಸರ್ವಶ್ರೇಷ್ಠ ತತ್ವಜ್ಞಾನಿ. ಇವರು ರಚಿಸಿದ ನ್ಯಾಯ ಸಂಹಿತೆಯಾದ ಸ್ಮೃತಿಯು ಭಾರತೀಯ ನ್ಯಾಯಶಾಸ್ತ್ರಕ್ಕೆ ಅಡಿಗಲ್ಲು. ಇದರಲ್ಲಿ ಪಿತ್ರಾರ್ಜಿತ ಆಸ್ತಿಯ ಉತ್ತರಾಧಿಕಾರ, ಸ್ತ್ರೀಯರಿಗೆ ಆಸ್ತಿ ಹಕ್ಕುಗಳ ಬಗೆಗೆ ವಿವರಿಸಲಾಗಿದೆ. ಹಿಂದೂ ಸಮಾಜದಲ್ಲಿ ಮಹಿಳೆಯು ಉನ್ನತವಾದ ಸ್ಥಾನವನ್ನು ಹೊಂದಿದ್ದರೂ ಪಿತ್ರಾರ್ಜಿತ ಆಸ್ತಿಯಲ್ಲಿ ಉತ್ತರಾಧಿಕಾರದ ಹಕ್ಕು ಇರಲಿಲ್ಲ. ಆದರೆ ಯಾಜ್ಞವಲ್ಕ್ಯ ಮಹಿಳೆಯರಿಗೆ ಆಸ್ತಿ ಹಕ್ಕು ದೊರಕಬೇಕೆಂದು ಪ್ರತಿಪಾದಿಸಿದ್ದಾರೆ. ಅವರ ಪ್ರಕಾರ ''ಸಂಬಂಧಿಗಳು ಸ್ತ್ರೀಗೆ ಕೊಡುವ ಯಾವ ಬಳುವಳಿಯೇ ಆಗಲಿ, ಅದು ಅವಳ ಸ್ವತ್ತೆಂದು ಅವರು ಸಾರಿದ್ದಾರೆ. ಪತಿ ಏನಾದರೂ ವಿನಾಕಾರಣ ಪತ್ನಿಯನ್ನು ತ್ಯಜಿಸಿದರೆ, ಅವನ ಆಸ್ತಿಯಲ್ಲಿ ಮೂರನೆ ಒಂದು ಪಾಲು ಆಕೆಗೆ ಸಿಗುತ್ತಿತ್ತು'' ಎಂದಿರುವರು. (ವೆಂಕಟರಾಯಪ್ಪ. ಕೆ.ಎನ್., ೧೯೭೧, ಪು ೩೭) ಹೀಗೆ ಪತ್ನಿಗೆ ಪತಿಯ ಆಸ್ತಿಯಲ್ಲಿ ಪಾಲನ್ನು ಪಡೆಯುವಂತೆ ಮಾಡಲಾಗಿದೆ.

**ವಿಜ್ಞಾನೇಶ್ವರ:** ಇವರು ರಚಿಸಿದ ಅಮರ ಕೃತಿ ಮಿತಾಕ್ಷರ. ಕೃತಿಯಲ್ಲಿ ವಿಜ್ಞಾನೇಶ್ವರನು ಮಹಿಳೆಯರ ಆಸ್ತಿ ಹಕ್ಕು, ಉತ್ತರಾಧಿಕಾರದ ಅಗತ್ಯವನ್ನು ಅರಿತು ಮಹಿಳೆಯರಿಗೆ ಆಸ್ತಿಹಕ್ಕಿನ ಒಡೆತನಕ್ಕೆ ಯೋಗ್ಯರನ್ನಾಗಿ ಕಾಣುವಂತೆ ಮಾಡಲಾಗಿದೆ.

ಇನ್ನು ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ''ಗಂಡು ಸಂತಾನ ಅಂದರೆ, ಮಗ-ಮೊಮ್ಮಗ-ಮರಿಮೊಮ್ಮಗನೂ ಇಲ್ಲದೆ ಮೃತನಾದವನನ್ನು 'ಅಪುತ್ರಸ್ಯ' ಎಂದು.'' (ಶ್ರೀನಿವಾಸ ಸಿರನೂಕರ್, ೨೦೦೫, ಪು ೫೫) ಈ ಆಸ್ತಿಗೆ ಉತ್ತರಾಧಿಕಾರಿಗಳು ಯಾರೆಂದರೆ, ಮೊದಲು ಗಂಡು ಸಂತಾನವಿಲ್ಲದಿದ್ದರೆ ಆಸ್ತಿಯೆಲ್ಲವು ಆತನ ಅಣ್ಣ ತಮ್ಮಂದಿರಿಗೋ, ತಂದೆ-ತಾಯಿಗಳಿಗೋ ಸೇರುತ್ತಿತ್ತು. ಆದರೆ ಯಾಜ್ಞವಲ್ಕ್ಯರು ''ಈ ನಿರ್ದಿಷ್ಟ ಉತ್ತರಾಧಿಕಾರಕ್ಕೆ ವಿಧ್ಯುಕ್ತ ಹೆಂಡತಿಯೇ ಬಾಧ್ಯಳು ಎಂದು ತೀರ್ಮಾನಿಸಿ ವಿಧವೆಗೆ ಗಂಡನ ಆಸ್ತಿಯ ಉತ್ತರಾಧಿಕಾರದ ಮೊದಲ

ಪ್ರಾಶಸ್ತ್ಯ ನೀಡಿದ್ದಾರೆ.'' (ಶ್ರೀನಿವಾಸ ಸಿರನೂರಕರ್, ೨೦೦೫, ಪು ೫೫) ಆದರೆ ಮೃತ ವ್ಯಕ್ತಿಯ ಹೆಂಡತಿ ಇಲ್ಲದಿದ್ದಾಗ ಮಾತ್ರ, ಹೆಣ್ಣು ಮಕ್ಕಳು, ಹೆಣ್ಣು ಮಕ್ಕಳ ಮೊಮ್ಮಕ್ಕಳು, ತಂದೆ-ತಾಯಿ ಅಣ್ಣ-ತಮ್ಮಂದಿರು ಮತ್ತು ಗಂಡು ಮೊಮ್ಮಕ್ಕಳು, ಗೋತ್ರಜರು, ಬಂಧುಗಳು, ಶಿಷ್ಯರಿಗೆ ಕ್ರಮವಾಗಿ ಒಬ್ಬರಿಲ್ಲದಿದ್ದಾಗ ಮತ್ತೊಬ್ಬರಿಗೆ ಆಸ್ತಿ ದೊರೆಯುತ್ತದೆ. (ಇದರ ಹೆಚ್ಚಿನ ಮಾಹಿತಿ ಅಧ್ಯಾಯ ೩ರಲ್ಲಿದೆ.)

**ಆದಿವಾಸಿಯರಲ್ಲಿ ಮಹಿಳೆಯರ ಆಸ್ತಿ ಹಕ್ಕು**

ಕೆಲವು ಆದಿವಾಸಿ ಪಂಗಡದ ಮಹಿಳೆಯರಿಗೆ ಆಸ್ತಿಹಕ್ಕು ಇದೆ. ''ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿರುವ ಖಾಸೀ ಜನಾಂಗದಲ್ಲಿ ಸ್ತ್ರೀಗೆ ಉತ್ತಮ ಸ್ಥಾನಮಾನಗಳಿವೆ. ಆಸ್ತಿಯ ಉತ್ತರಾಧಿಕಾರ ಸ್ತ್ರೀಯರಿಗೇ ಇರುವುದರಿಂದ ಆರ್ಥಿಕವಾಗಿ ಸಹ ಅವರ ಅಂತಸ್ತು ಉನ್ನತವಾಗಿರುತ್ತದೆ.'' (ನಂಜಮ್ಮಣ್ಣಿ. ಎಂ., ೧೯೭೧, ಪು ೧೯೧)

ಗ್ಯಾರೊ ಜನಾಂಗದಲ್ಲಿಯೂ ಕೂಡ ಮಾತೃ ಪ್ರಧಾನ ಸಮಾಜ ಕಾಣುತ್ತೇವೆ. ಇವರಲ್ಲಿಯೂ ಗಂಡು ಮಕ್ಕಳಿಗೆ ಆಸ್ತಿಯಲ್ಲಿ ಹಕ್ಕಿಲ್ಲ. ಇಲ್ಲಿ ಎಲ್ಲ ಸ್ತ್ರೀಯರದೆ ಪ್ರಧಾನ ಪಾತ್ರ. ಇಲ್ಲಿ ''ಪತಿಯು ತನ್ನ ಪತ್ನಿಯು ಜೀವಂತಳಾಗಿರುವ ತನಕ ಆಕೆಯ ಆಸ್ತಿಯನ್ನು ಅನುಭವಿಸಲು ಅರ್ಹನೇ ಹೊರತು, ಆಕೆ ಮೃತಪಟ್ಟಲ್ಲಿ ಅದನ್ನು ಹೊಂದಲು ಅರ್ಹನಲ್ಲ. ಸ್ತ್ರೀಯ ಮುಖಾಂತರ ಆಸ್ತಿಯು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ವರ್ಗಾಯಿಸಲ್ಪಡುತ್ತದೆ.'' (ನಂಜಮ್ಮಣಿ. ಎಂ., ೧೯೭೧, ಪು ೧೯೨) ಈ ರೀತಿಯಲ್ಲಿ ಸ್ತ್ರೀಗೆ ತನ್ನ ಆಸ್ತಿಯನ್ನು ಜೋಪಾನವಾಗಿ ಕಾಪಾಡುವ ಹಾಗೂ ಮುಂದಿನ ಪೀಳಿಗೆಗೆ ಅದನ್ನು ವಹಿಸಿಕೊಡುವ ಜವಾಬ್ದಾರಿ ಇದೆ. ಖಾಸೀ ಹಾಗೂ ಗ್ಯಾರೋ ಜನಾಂಗದ ಮಹಿಳೆಯರಿಗೆ ಆಸ್ತಿಯ ಹಕ್ಕು ಹೊಂದಿರುವುದರಿಂದ ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಮಹಿಳೆಗೆ ಉತ್ತಮ ಸ್ಥಾನಮಾನಗಳಿವೆ.

ಆದಿವಾಸಿಯರಲ್ಲಿಯೂ ಪಿತೃಪ್ರಧಾನ ಕುಟುಂಬಗಳಿವೆ. ಆ ಸಮಾಜದಲ್ಲಿ ಸ್ತ್ರೀಯರ ಮೇಲೆ ಅನೇಕ ರೀತಿಯ ನಿರ್ಬಂಧಗಳನ್ನು ಹೇರಲಾಗಿದೆ. ಉದಾ - ''ಅವರಲ್ಲಿ ಸ್ತ್ರೀಯು ಒಂದು ಅಶುದ್ಧವಾದ ಹಾಗೂ ಅಪವಿತ್ರವಾದ ವಸ್ತು ಎಂದು ಭಾವಿಸಲ್ಪಡುವುದರಿಂದ ಅವಳು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಎಮ್ಮೆಯ ಹಾಲು ಪವಿತ್ರ ವಸ್ತುವಾದ್ದರಿಂದ ಸ್ತ್ರೀಯರು ಅದನ್ನು ಮುಟ್ಟಕೂಡದು; ಪವಿತ್ರ ವಸ್ತುಗಳನ್ನು ಅಪವಿತ್ರ ವಸ್ತುಗಳಿಂದ ದೂರವಿರಿಸಬೇಕು.'' (ನಂಜಮ್ಮಣಿ. ಎಂ., ೧೯೭೧, ಪು ೧೯೫) ಈ ರೀತಿಯ ನಂಬಿಕೆಗಳು ಆದಿವಾಸಿ ಪಿತೃಪ್ರಧಾನ ಸಮಾಜದಲ್ಲಿ ಕಾಣುತ್ತೇವೆ. ಕೆಲವು ಜನಾಂಗಗಳಲ್ಲಿ ಪಿತೃಪ್ರಧಾನ ಮೌಲ್ಯವಿರುವುದರಿಂದ ಅಲ್ಲಿ ಸ್ತ್ರೀಯ ಒಡೆಯ ಪುರುಷನೆ ಆಗಿರುವುದರಿಂದ ಪುರುಷನಿಗೆ ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಉತ್ತಮವಾದ ಸ್ಥಾನಮಾನಗಳಿವೆ. ಭಾರತದ ಆದಿವಾಸಿಯ ಸ್ತ್ರೀಯರ ಆಸ್ತಿಹಕ್ಕು ಈ ರೀತಿ ಇದ್ದರೆ ವಿಶ್ವದ ಇತರ ಭಾಗಗಳಲ್ಲಿ ಅದರಲ್ಲೂ ಆದಿವಾಸಿಯರಲ್ಲಿ ಸ್ತ್ರೀಯರ ಆಸ್ತಿಹಕ್ಕು ಪರಿಶೀಲಿಸಿದಾಗ ''ಬ್ರಿಟಿಷ್ ಕೊಲಂಬಿಯಾದಲ್ಲಿ ಸ್ತ್ರೀಯು ಸ್ಥಿರ ಆಸ್ತಿ ಹೊಂದುವ ಹಕ್ಕು ಪಡೆದಿದ್ದಾಳೆ. ಆಕೆಯ ಆಸ್ತಿ, ಬೆಲೆಬಾಳುವ ಒಡವೆ, ವಸ್ತ್ರಗಳು ಆಕೆಯ ಮಗನಿಗೆ ರವಾನಿಸಲ್ಪಡುತ್ತವೆ. ಇರಾಕೋ ಜನರಲ್ಲಿ ಕೂಡ ಸ್ತ್ರೀಯರು, ಗೃಹ ಹಾಗೂ ಜಮೀನನ್ನು ಹೊಂದುವ ಹಕ್ಕನ್ನು ಪಡೆದಿರುವರು.'' (ನಂಜಮ್ಮಣ್ಣಿ. ಎಂ., ೧೯೭೧, ಪು ೧೯೬) ಕೆಲವು ಆದಿವಾಸಿ ಜನಾಂಗಗಳಲ್ಲಿ ಸ್ತ್ರೀಯು ಆಸ್ತಿಯನ್ನು ಹೊಂದುವಂತಿಲ್ಲ. ಎಸ್ಕಿಮೋ ಜನಾಂಗದ ಸ್ತ್ರೀಯು ಕನ್ಯಾಶುಲ್ಕ ಪಡೆದು ವಿವಾಹವಾಗಿದ್ದರೂ ಕೂಡ ಸ್ತ್ರೀಯು ಆಸ್ತಿಯನ್ನು ಪಡೆದು ತನ್ನಿಷ್ಟ ಬಂದಂತೆ ವಿಲೇವಾರಿ ಮಾಡುವ ಹಕ್ಕನ್ನು ಪಡೆದಿರುವುದಿಲ್ಲ. ಒಟ್ಟಿನಲ್ಲಿ ಮಹಿಳೆಯು ಆಸ್ತಿಹಕ್ಕಿನ ಒಡೆತನ ಹೊಂದಿದರೂ ಅದನ್ನು ತನ್ನಷ್ಟ ಬಂದಂತೆ ವಿಲೇವಾರಿ ಮಾಡುವ ಹಾಗಿರಲಿಲ್ಲ.

ಆದಿವಾಸಿಯಲ್ಲಿ ಮಾತೃ ಪ್ರಧಾನ ಕುಟುಂಬಗಳಲ್ಲಿ ಮಾತ್ರ ಮಹಿಳೆ ಆಸ್ತಿ ಹೊಂದಬಹುದಿತ್ತು ಹೊರತಾಗಿ ಪಿತೃಪ್ರಧಾನ ಕುಟುಂಬದ ಆದಿವಾಸಿ ಮಹಿಳೆಯರು ಆಸ್ತಿಹಕ್ಕನ್ನು ಹೊಂದುವಂತಿರಲಿಲ್ಲ.

**೨.೨. ಮಹಿಳೆ ಮತ್ತು ಭೂ ಒಡೆತನದ ನಡುವಿನ ಸಂಬಂಧ**

ಕೃಷಿಯು ಮಾನವನ ಪುರಾತನ ವೃತ್ತಿಗಳಲ್ಲೊಂದು. ''ಭೂಮಿಯ ಒಡೆತನ ಸಮಾಜದಲ್ಲಿ ಪ್ರತಿಷ್ಠೆಯನ್ನು ನಿರ್ಧರಿಸುವ ಸಾಧನ. ಉತ್ಪಾದನಾಂಗಗಳ ಯಜಮಾನಿಕೆ, ಎಲ್ಲಾ ಸಂದರ್ಭಗಳನ್ನು ನಿರ್ಧರಿಸುತ್ತದೆ ಎಂದು ಕಾರ್ಲ್‌ಮಾರ್ಕ್ಸ್ ಹೇಳಿರುವರು.'' (ಉದ್ಧೃತ: ಮಾಲಿಮುದ್ದಣ, ೨೦೦೦, ಪು ೨೫೯) ಭೂಮಿಯ ಒಡೆತನ, ಭೂ ಗೇಣಿ ವ್ಯವಸ್ಥೆಗಳು ಒಂದು ದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನವನ್ನು ನಿರ್ಧರಿಸುತ್ತದೆ. ಭಾರತದಲ್ಲಿ ಭೂ ಒಡೆತನ ಪದ್ಧತಿಯ ಇತಿಹಾಸವು ಜಟಿಲತೆಯಿಂದ ಕೂಡಿದ್ದು, ಹಲವಾರು ಭಿನ್ನಾಭಿಪ್ರಾಯಗಳಿಗೆ ಎಡೆಮಾಡಿಕೊಡುತ್ತವೆ. ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗಿನ ಭೂ ಹಿಡುವಳಿ ಇತಿಹಾಸದಲ್ಲಿ ಭೂ ಮಾಲೀಕತ್ವಕ್ಕೆ ಸಂಬಂಧಪಟ್ಟಂತೆ ವಿವಿಧ ರೀತಿಯ ಕಾಯ್ದೆ ಕಾನೂನುಗಳು ಮತ್ತು ಪದ್ಧತಿಗಳು ಅಸ್ತಿತ್ವದಲ್ಲಿದ್ದುದು ಕಂಡು ಬರುತ್ತದೆ. ಭಾರತದಲ್ಲಿ ಪ್ರಾಚೀನ ಕಾಲದಿಂದ ೧೯೪೭ರ ವರೆಗೆ ಭೂ ಹಿಡುವಳಿ ಪದ್ಧತಿಯು ಏಕರೂಪದಲ್ಲಿ ಅಸ್ತಿತ್ವದಲ್ಲಿ ಇಲ್ಲದಿರುವುದು ಕಂಡು ಬರುತ್ತದೆ.

ಭೂ ಮಾಲೀಕತ್ವ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿರುವುದನ್ನು ಕಾಣಬಹುದು. ವಿನ್ಸಂಟ್‌ಸ್ಮಿತ್ ಮೊದಲಾದ ಬ್ರಿಟೀಷ್ ಚರಿತ್ರೆಕಾರರು ರಾಜನೇ ನೆಲದ ಒಡೆಯ ಏಕೈಕ ಮಾಲೀಕ ಎಂದು ಭಾವಿಸುತ್ತಾರೆ. ಇದಕ್ಕೆ ಎದುರಾಗಿ ಕೆ.ಪಿ. ಜಯಸ್ವಾಲ್, ಯು.ಎನ್. ಘೋಷಾಲ್ ಮೊದಲಾದ ಭಾರತೀಯ ವಿದ್ವಾಂಸರು ಖಾಸಗಿ ಒಡೆತನದ ಪರವಾಗಿ ವಾದ ಮಾಡುತ್ತಾರೆ. ಪ್ರಾಚೀನ ಕಾಲದಲ್ಲಿ ಭೂ ಒಡೆತನದ ಸ್ಥಿತಿ ಹೇಗಿತ್ತು ಎನ್ನುವುದನ್ನು ಗ್ರೋಷಿಯಸ್‌ರು ''ಎಲ್ಲಾ ಪದಾರ್ಥಗಳೂ ಮೂಲದಲ್ಲಿ ಒಡೆಯನು ಇಲ್ಲದೆ ಇದ್ದುವು ಯಾರು ಯಾರು ಮೊದಲಿಗೆ ಭೂಮಿಯನ್ನು ವಶಪಡಿಸಿಕೊಂಡರೋ ಅಥವಾ ಆಕ್ರಮಿಸಿಕೊಂಡರೋ ಅವರೇ ಅದರ ಒಡೆಯರಾದರು. ಮೊದಲಿಗೆ ಎಲ್ಲಾ ವಸ್ತುಗಳೂ ಒಟ್ಟಿಗೆ ಜನಗಳಿಗೆ ಸೇರಿದ್ದುವು. ಆವಾಗ ವ್ಯಕ್ತಿಯ ಒಡೆತನವಿರಲಿಲ್ಲ. ಇಬ್ಬರ ಕರಾರಿನಿಂದ ಖಾಸಗಿ ಒಡೆತನವು ಸ್ಥಾಪಿತವಾಯಿತು.'' (ಹೊಯ್ಸಳ ಶರ್ಮ ಕೆ., ೧೯೬೬, ಪು ೩೪೬) ಎಂದು ತಮ್ಮ ಅಭಿಪ್ರಾಯ ಸೂಚಿಸಿರುವರು. ಆರ್ಯ ಪೂರ್ವ ಭಾರತದ ಭೂ ಒಡೆತನದ ಸ್ವರೂಪವನ್ನು ಹಾವೆಲ್ ಅವರು - ''ದ್ರಾವಿಡರು ಹೊಂದಿದ್ದ ಕೃಷಿ ಭೂಮಿಯು ಸಮುದಾಯದ ಆಸ್ತಿ ಆಗಿತ್ತು. ನಿರ್ದಿಷ್ಟವಾದ ಭೂಮಿಯನ್ನು ಹೊಂದುವುದು ಹಾಗೂ ಭೂಮಿಯ ಖಾಸಗಿ ಒಡೆತನವನ್ನು ಬೆಳೆಸುವುದು ಈ ವಿಚಾರಗಳಲ್ಲಿ ಪರ್ಯಾಯ ಅಥವಾ ಪಾಳಿ ಕೃಷಿ ಪದ್ಧತಿಯನ್ನು ಅವರು ಹೊಂದಿದ್ದರು. ಭೂ ಹಿಡುವಳಿಗಳಲ್ಲಿ ಭಿನ್ನ ಭಿನ್ನ ಸಮುದಾಯಗಳು ಒಂದು ನಿರ್ದಿಷ್ಟ ಕಾಲಾವಧಿಯವರೆಗೆ ಒಡೆತನವನ್ನು ಹೊಂದಿ ನಂತರ ಅದನ್ನು ಮತ್ತೊಂದು ಸಮುದಾಯಕ್ಕೆ ವರ್ಗಾಯಿಸುವಂತಹ ಪದ್ಧತಿಯನ್ನು ಅವರು ಇಟ್ಟುಕೊಂಡಿದ್ದರು. ಖಾಸಗಿ ಒಡೆತನವು ಕೇವಲ ದನಕರು ಮೊದಲಾದ ಚರಾಸ್ತಿಗಳಲ್ಲಿ ಕಂಡುಬರುತ್ತಿತ್ತು.'' (ಲಿಂಗಣ್ಣ ಸತ್ಯಂಪೇಟೆ, ೧೯೮೭, ಪು ೧೩) ಎಂದು ಹೇಳಿದ್ದಾರೆ.

ವೇದಗಳ ಕಾಲದಲ್ಲಿ ಭೂಮಿಯ ಹಕ್ಕು ವಾರಸುದಾರಿಕೆ ಯಾವ ರೀತಿಯಲ್ಲಿತ್ತೆಂಬುದು ಸ್ಪಷ್ಟವಿಲ್ಲ. ಧರ್ಮಶಾಸ್ತ್ರಗಳು ಸ್ವತ್ತನ್ನು ವಿಭಾಗಿಸುವ ಬಗ್ಗೆ ಹೇಳಿದರೂ ಅವರಲ್ಲಿ ಭೂಮಿಯ ಒಡೆತನದ ಕುರಿತು ಹೇಳಿಲ್ಲ. ಗೌತಮನ ಧರ್ಮಸೂತ್ರದಲ್ಲಿ - ''ಜೀವನದ ಯೋಗಕ್ಷೇಮ ನಿರ್ವಹಿಸುವಂತಹ ಆಸ್ತಿಯನ್ನು ವಿಭಾಗ ಮಾಡಲಾಗದು ಎಂದಿದೆ.'' (ಶರ್ಮ. ಆರ್. ಎಸ್., ೨೦೦೪, ಪು ೫೨) ಜೀವನದ ಯೋಗಕ್ಷೇಮ ನಿರ್ವಹಿಸುವಂಥ ಆಸ್ತಿ

ಎಂದರೆ ಭೂಮಿ. ಭೂಮಿಯು ಎಲ್ಲರಿಗೂ ಸೇರಿರುವಂಥದ್ದು ಭೂಮಿಯ ಮೇಲೆ ಸಾಮುದಾಯಿಕ ಆಸ್ತಿ ಹೊಂದಲಾಗಿತ್ತು ಎಂಬುದಾಗಿ ಅರ್ಥೈಸಬಹುದಾಗಿದೆ.

ಮನು ತನ್ನ ಸ್ಮೃತಿಯಲ್ಲಿ ಭೂ ಒಡೆತನದ ಹಕ್ಕು ಪುರುಷನದೆ ಎನ್ನುವುದಕ್ಕೆ ಹೀಗೆ ಹೇಳಿದ್ದಾನೆ - ''ಯಾರು ಭೂಮಿಯಲ್ಲಿದ್ದ ಗಿಡಗಂಟೆಗಳನ್ನು ಕಡಿದು ಸ್ವಚ್ಛಮಾಡಿ ಆ ಭೂಮಿಯಲ್ಲಿ ಸಾಗುವಳಿ ಮಾಡುತ್ತಾನೋ ಅವನೇ ಆ ಭೂಮಿಯ ಒಡೆಯ.'' (ಉದ್ಧೃತ: ಬಡಿಗೇರ್ ಜಿ.ಎಲ್., ೧೯೯೮, ಪು ೪೯) ಮನುವಿನ ಪ್ರಕಾರ ವೈಯಕ್ತಿಕ ಭೂ ಒಡೆತನವು ಹೊಂದಬಹುದಾಗಿತ್ತು. ಆದರೆ ವೈಯಕ್ತಿಕ ಭೂ ಒಡೆತನ ಹೊಂದುವುದು ಕೂಡ ಪುರುಷನೆ ಹೊಂದಿದ್ದು, ಮಹಿಳೆಗೆ ವೈಯಕ್ತಿಕ ಭೂ ಒಡೆತನ ಹೊಂದುವ ಹಕ್ಕಿರಲಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ.

ನಾರದ ಎಂಬ ಋಷಿಯು - ''ಭೂಮಿ ಮತ್ತು ಮನೆ ಇವೆರಡರ ಹೊರತು ಉಳಿದ ಆಸ್ತಿಯು ಆಕೆಗೆ ಪತಿಯಿಂದ ಬಂದಲ್ಲಿ ಪತಿಯ ಮರಣಾ ನಂತರ ಆಕೆ ತನಗೆ ಇಷ್ಟ ಬಂದಂತೆ ಅದನ್ನು ಅನುಭವಿಸಿ ಇಷ್ಟ ಬಂದವರಿಗೆ ಕೊಡಬಹುದು ಎಂದು ಹೇಳಿದ್ದಾನೆ.'' (ಉದ್ಧೃತ: ಪದ್ಮಾವತಮ್ಮ ಕೆ., ೨೦೦೨, ಪು ೧೨) ಅಂದರೆ ಪುರುಷನು ವೈಯಕ್ತಿಕ ಆಸ್ತಿ ಹೊಂದಿದ್ದು ಆತನು ತೀರಿದಾಗ ಆ ಆಸ್ತಿಯನ್ನು ಅಂದರೆ ಭೂಮಿಯಿಂದ ಬರುವ ಆದಾಯವನ್ನು ಮಾತ್ರ ಜೀವಿತಾವಧಿಯವರೆಗೆ ಅನುಭವಿಸುವ ಹಕ್ಕನ್ನು ಮಾತ್ರ ಆತನ ಪತ್ನಿ ಹೊಂದಿದ್ದಳು. ಆದರೆ ಅವಳಿಗೆ ಭೂಮಿಯ ಒಡೆತನದ ಹಕ್ಕು ಇರಲಿಲ್ಲ ಎನ್ನುವುದು ಇಲ್ಲಿ ಸ್ಪಷ್ಟವಾಗುತ್ತದೆ.

ಪ್ರಾಚೀನ ಕಾಲದಲ್ಲಿ ವೈಯಕ್ತಿಕ ಭೂ ಒಡೆತನದ ಜೊತೆಗೆ ಅರಸೊತ್ತಿಗೆಯ ಮತ್ತು ಸಾಮುದಾಯಿಕ ಭೂ ಒಡೆತನ ಪದ್ಧತಿಯು ಇತ್ತೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ- ''ರಾಜನಾದವನು ಸಮಸ್ತ ಭೂಮಿಯ ಒಡೆಯ ಎಂದು ಹೇಳಿದ್ದಾನೆ. ಸಾಗುವಳಿದಾರನು ಭೂಮಿಯ ಸಾಗುವಳಿ ಮಾಡದಿದ್ದಾಗ ಅರಸನು ಆ ಭೂಮಿಯನ್ನು ಅವನಿಂದ ಕಿತ್ತುಕೊಂಡು ಬೇರೆ ಸಾಗುವಳಿದಾರನಿಗೆ ಸಾಗುವಳಿ ಮಾಡಲು ಕೊಡುತ್ತಿದ್ದನು.'' (ಬಡಿಗೇರ್ ಜಿ.ಎಲ್., ೧೯೯೮, ಪು ೫೨) ಎಂದು ವಿವರಿಸಲಾಗಿದೆ.

ಪ್ರಾಚೀನ ಕಾಲದ ಭೂ ಒಡೆತನ ಪದ್ಧತಿಯ ಅಧ್ಯಯನವನ್ನು ಮಾಡಿದಾಗ ವಿವಿಧ ರೀತಿಯ ಭೂ ಒಡೆತನ ಪದ್ಧತಿಗಳು ಇದ್ದವು. ಆದರೆ ಈ ಎಲ್ಲಾ ರೀತಿಯ ಭೂ ಒಡೆತನ ಪುರುಷರಿಗೆ ಮಾತ್ರ ಮೀಸಲಾಗಿತ್ತು. ಪ್ರಾಚೀನ ಕಾಲದಿಂದಲೇ ಪಿತೃ ಪ್ರಧಾನ ವ್ಯವಸ್ಥೆ ರೂಪುಗೊಂಡಿದ್ದರಿಂದ ಮಹಿಳೆಯು ಭೂಮಿಯಂಥ ಸ್ಥಿರ ಆಸ್ತಿಯ ಮೇಲೆ ಒಡೆತನ ಹೊಂದುವಲ್ಲಿ ಯಶಸ್ವಿಯಾಗಲಿಲ್ಲ.

ಮಧ್ಯಯುಗದ ಭೂ ಒಡೆತನ ಸ್ಥಿತಿಯನ್ನು ಗಮನಿಸಿದರೆ, ಪ್ರಾಚೀನ ಕಾಲದ ಭೂ ಒಡೆತನದ ಪದ್ಧತಿಗಿಂತ ಇದು ಸಾಕಷ್ಟು ಬದಲಾವಣೆ ಹೊಂದಿತ್ತು. ಪ್ರಾಚೀನ ಕಾಲದಲ್ಲಿ ವಿವಿಧ ರೀತಿಯ ಭೂ ಒಡೆತನ ಪದ್ಧತಿಯು ಜಾರಿಯಲ್ಲಿದ್ದರೆ, ಮಧ್ಯಯುಗದಲ್ಲಿ ಕೇವಲ ಅರಸೊತ್ತಿಗೆಯ ಭೂ ಒಡೆತನ ಪದ್ಧತಿ ಜಾರಿಗೆ ಬಂದಿತ್ತು. ಇದರಿಂದ ಆಡಳಿತಕ್ಕೆ ಅನುಕೂಲವಾಗುವಂತೆ ಭೂ ಒಡೆತನ ಪದ್ಧತಿಯಲ್ಲಿ ವಿವಿಧ ರೀತಿಯ ಮಧ್ಯವರ್ತಿ ಕಲ್ಪನೆಗಳು ಮತ್ತು ಕಂದಾಯ ವಸೂಲಿ ಪದ್ಧತಿಗಳು ಜಾರಿಗೆ ಬಂದವು. ಇದರಿಂದ ಜಮೀನ್ದಾರಿ, ಇನಾಂದಾರಿ, ಜಾಗೀರದಾರ ಹೀಗೆ ಮುಂತಾದ ಮಧ್ಯವರ್ತಿಗಳ ಪದ್ಧತಿ ಜಾರಿಗೆ ಬಂದವು. ಈ ಮಧ್ಯವರ್ತಿಗಳು ಪುರುಷರೆ ಆಗಿದ್ದರು ಮತ್ತು ರಾಜನು ಪುರುಷನೆ ಆಗಿದ್ದನು. ಮಧ್ಯಯುಗದಲ್ಲಿಯೂ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯೇ ಜಾರಿಯಲ್ಲಿತ್ತು. ಇಲ್ಲಿ ಮಹಿಳೆಯರು ಕೇವಲ ಭೂಮಿಯ ಕೆಲಸದಲ್ಲಿ ಮಾತ್ರ ಭಾಗವಹಿಸಬೇಕಾಗಿತ್ತು. ನೀರಾ ದೇಸಾಯಿಯವರ ಪ್ರಕಾರ - ''೧೧ನೆಯ ಶತಮಾನದ ನಂತರ ಮುಸ್ಲಿಂ ಸಂಸ್ಕೃತಿಯೊಡನೆ ನಿರಂತರ ಸಂಪರ್ಕ ಭಾರತೀಯ ಸಮಾಜಕ್ಕೆ

ಒದಗಿ ಬಂದಿತು. ಪಿತೃ ಪ್ರಧಾನತೆ, ಬಹುಪತ್ನಿತ್ವ, ಪರದಾ ಪದ್ಧತಿ, ಆಸ್ತಿಯ ನಿರಾಕರಣೆ, ಇವೆಲ್ಲವೂ ಮಹಿಳೆಯರ ಮುಕ್ತವಾದ ಸ್ವತಂತ್ರ ಬೆಳವಣಿಗೆಗೆ ಅಡ್ಡಿಮಾಡಿದವು. ಇವುಗಳನ್ನು ಮಹಿಳೆಯರ ಮೇಲೆ ಒತ್ತಾಯದಿಂದ ಹೇರಲಾಯಿತು. ಆಕೆಗೆ ಸ್ವಂತ ವ್ಯಕ್ತಿತ್ವವೇ ಇಲ್ಲದಾಯಿತು. ಸಾಮಾಜಿಕವಾಗಿ ಆಕೆ ನಿರ್ಲಕ್ಷ್ಯಕ್ಕೆ ಒಳಗಾಗಬೇಕಾಯಿತು.'' (ಸಮತಾ ಬಿ. ದೇಶಮಾನೆ., ೨೦೦೩, ಪು ೨೭, ೨೮)

ಈ ರೀತಿಯಾಗಿ ಭಾರತೀಯ ಮಹಿಳೆಯರು ಮುಸ್ಲಿಂ ದಾಳಿಕೋರರ ಬಲಿಪಶುಗಳಾಗುವುದರಿಂದ ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಉಳಿಯುವಂತಾಯಿತು. ಹೀಗಾಗಿ ಆಸ್ತಿಯ ಮತ್ತು ಭೂಮಿಯ ಅಧಿಕಾರ ಕೇಂದ್ರಗಳು ಪುರುಷ ಪ್ರಧಾನವಾದವು. ಈ ಮೂಲಕ ಮಹಿಳೆಗೆ ಭೂ ಒಡೆತನ ನೀಡದೆ ಅವಳನ್ನು ಪರಾಧೀನಗೊಳಿಸಲಾಯಿತು.

ಇನ್ನು ಬ್ರಿಟೀಷರ ಕಾಲದ ಭೂ ಒಡೆತನ ಪದ್ಧತಿಯನ್ನು ಗಮನಿಸಿದರೆ, ಬ್ರಿಟೀಷರು ಭಾರತಕ್ಕೆ ಬಂದಾಗ ಭಾರತೀಯ ಸ್ತ್ರೀಯರ ಸ್ಥಾನಮಾನ ಮಧ್ಯಯುಗದಲ್ಲಿದ್ದಂತೆಯೇ ಮುಂದುವರೆದಿತ್ತು. ಬ್ರಿಟೀಷ್ ಸರ್ಕಾರವೇ ಸರ್ವೋಚ್ಚ ಭೂ ಒಡೆಯ ಎಂದು ಜಾಹೀರುಪಡಿಸಿತು ಮತ್ತು ಭೂ ಹಿಡುವಳಿ ಪದ್ಧತಿಯಲ್ಲಿ ದೇಶದ ಎಲ್ಲಾ ಭೂಮಿಗೂ ತಾನೇ ಒಡೆಯ ಎಂದು ಘೋಷಿಸಿಕೊಂಡಿತು. ಜಮೀನ್ದಾರಿ, ಮಹಲ ಗುಜರ ಮತ್ತು ರೈತವಾರಿ ಈ ಮೂರು ಪದ್ಧತಿಗಳನ್ನು ಬ್ರಿಟೀಷರು ಜಾರಿಗೆ ತಂದರು. ಈ ಪದ್ಧತಿಯಲ್ಲಿಯೂ ಪುರುಷರೆ ಇದ್ದರು. ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿಯೂ ಮಹಿಳೆಯರಿಗೆ ಭೂ ಒಡೆತನದ ಹಕ್ಕು ದೊರೆಯಲಿಲ್ಲ. ವಿಧವೆಯರಿಗೆ ಆಸ್ತಿಹಕ್ಕು ಕಾಯ್ದೆಯನ್ನು ಜಾರಿಗೆ ತಂದರೂ ಸಹ ಅವಳು ಸ್ತ್ರೀಧನದ ಮೇಲೆ ತನ್ನ ಸಂಪೂರ್ಣ ಒಡೆತನ ಹೊಂದಬಹುದಾಗಿತ್ತು ಹೊರತಾಗಿ, ಸ್ಥಿರ ಆಸ್ತಿಯಾದ ಭೂಮಿಯನ್ನು ಜೀವಿತಾವಧಿಯವರೆಗೆ ಮಾತ್ರ ಅನುಭವಿಸಬೇಕಿತ್ತು. ಆದರೆ ಅದರ ಮೇಲೆ ಹಕ್ಕು ಮತ್ತು ನಿಯಂತ್ರಣ ಹೊಂದುವಂತಿರಲಿಲ್ಲ.

ಸ್ವತಂತ್ರ ಭಾರತದಲ್ಲಿ ಭೂ ಒಡೆತನ ಪದ್ಧತಿಯನ್ನು ನೋಡಿದಾಗ, ಬ್ರಿಟೀಷರು ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟರು, ಅದರ ಜೊತೆಗೆ ನಮ್ಮ ದೇಶಕ್ಕೆ ಹೊರಲಾರದಷ್ಟು ಭಾರವಾದ ಕೃಷಿ ಸಮಸ್ಯೆಯನ್ನು ಬಿಟ್ಟುಹೋದರು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಸರಕಾರ ಕೈಗೊಂಡ ಮೊಟ್ಟಮೊದಲನೆ ಕ್ರಮವೆಂದರೆ 'ನೆಲದ ಹಕ್ಕಿನ ಸುಧಾರಣೆ'. ಮೊದಲು ಜಮೀನ್ದಾರಿ ಹಾಗೂ ಇನಾಂದಾರಿ ಪದ್ಧತಿಯನ್ನು ರದ್ದುಗೊಳಿಸಿತು. 'ಉಳುವವನೆ ಹೊಲದೊಡೆಯ' ದೇವರಾಜ ಅರಸರ ಕಾಲದಲ್ಲಿ ಕೇಂದ್ರದ ಕಾಂಗ್ರೆಸ್ ಆಡಳಿತದಲ್ಲಿ ಬಂದಂಥ ಕಾನೂನು. ಈ ಕಾನೂನಿನ ಪ್ರಕಾರ ಉಳುವವನೆ ಭೂಮಿಯ ಒಡೆಯನಾದನು. ಉಳುಮೆ ಮಾಡುವ ಕೆಲಸವನ್ನು ಮಾಡುವವನು ಪುರುಷನೆ ಆಗಿರುವುದರಿಂದ ಈ ಕಾನೂನಿನ ಪ್ರಕಾರ ಕೂಡ ಪುರುಷನೆ ಭೂಮಿಯ ಒಡೆಯನಾದನು. ಮಹಿಳೆಯರಿಗೆ ಭಾರತದ ಸಂವಿಧಾನದ ಆಸ್ತಿಹಕ್ಕನ್ನು ಮತ್ತು ಕೃಷಿಭೂಮಿಯ ಒಡೆತನವನ್ನು ಹೊಂದುವಂಥ ಕಾನೂನುಗಳನ್ನು ಜಾರಿಗೆ ತಂದಿರುವುದು ಒಂದು ಮೈಲಿಗಲ್ಲು ಎಂದು ಹೇಳಬೇಕು. (ಇದರ ಹೆಚ್ಚಿನ ಮಾಹಿತಿ ಅಧ್ಯಾಯ ೩ರಲ್ಲಿದೆ)

ಪುರಾತನ ಕಾಲದಿಂದಲೂ ಮಹಿಳೆಯನ್ನು ಭೂಮಿಗೆ ಹೋಲಿಸಲಾಗಿದೆ. ಮಹಿಳೆಯನ್ನು ಆಸ್ತಿ ಎಂದು ಪರಿಗಣಿಸುವ ಮೂಲಕ ಅವಳ ಮೇಲೆ ಪುರುಷನು ಒಡೆತನವನ್ನು ಹೊಂದುತ್ತಲೇ ಬಂದಿರುವುದು ಕಂಡು ಬರುತ್ತದೆ. ಮಹಿಳೆಯೇ ಭೂಮಿಯ ರೀತಿಯಲ್ಲಿ ಒಂದು ಆಸ್ತಿಯೆಂದು ಪರಿಗಣಿಸಿ ತನ್ನ ಹಕ್ಕನ್ನು ಸ್ಥಾಪಿಸುತ್ತಾ ಬಂದಿರುವುದಕ್ಕೆ ಸಮಾಜ ವ್ಯವಸ್ಥೆಯಲ್ಲಿ ಅನೇಕ ಸಾಕ್ಷ್ಯಾಧಾರಗಳು ದೊರಕಿರುವುದನ್ನು ಗಮನಿಸಬೇಕು. ಯಾವಾಗ ಹಕ್ಕುಗಳೆಲ್ಲಾ ಪುರುಷರಿಗೆ ಸೀಮಿತಗೊಳಿಸಲಾಯಿತೋ ಅಂದಿನಿಂದ ಗಂಡು ಸಂತಾನಕ್ಕೆ ಸಮಾಜ ವ್ಯವಸ್ಥೆಯಡಿಯಲ್ಲಿ ಹೆಚ್ಚಿನ ಆದ್ಯತೆ ದೊರೆಯಿತು ಎಂದು ಹೇಳಬಹುದು.

ಭೂಮಿಯನ್ನು ಆಸ್ತಿಯೆಂದು ಪರಿಭಾವಿಸಿದ ಸಮಾಜ ವ್ಯವಸ್ಥೆ ಮಹಿಳೆಯನ್ನು ಭೂಮಿಗೆ ಹೋಲಿಸಿತು. ಆ ಮೂಲಕ ಮಹಿಳೆಯನ್ನು ಆಸ್ತಿಯ ಚೌಕಟ್ಟಿಗೆ ಒಳಗು ಮಾಡಿಕೊಂಡಿತು. ಭೂಮಿಯನ್ನು ಆಸ್ತಿಯೆಂದು ಮಾಡಿಕೊಂಡ ವ್ಯವಸ್ಥೆಯಲ್ಲಿ ಅದಕ್ಕೆ ಅತ್ಯಂತ ಮಹತ್ವ ಬಹುಬೇಗನೆ ಒದಗಿ ಬಂತು. ಆ ಮೂಲಕ ಭೂಮಿ ಎಂಬ ಸ್ಥಿರಾಸ್ತಿಯ ಒಡೆತನಕ್ಕೆ ಹೆಚ್ಚಿನ ಒತ್ತು ಕೊಡಲಾಯಿತು. ಜೊತೆಗೆ ಆಸ್ತಿಯೆಂದು ಪರಿಗಣಿಸಲ್ಪಟ್ಟ ಸ್ತ್ರೀಯ ಮೇಲೆ ನಿರಾಯಾಸವಾಗಿ ಒಡೆತನ ಹೊಂದುವಲ್ಲಿ ಪುರುಷ ಪ್ರಧಾನ ಸಮಾಜ ಯಶಸ್ವಿಯಾಯಿತು. ಅಧ್ಯಾಯದಲ್ಲಿ ಪ್ರಸ್ತಾಪಿಸಲ್ಪಟ್ಟ ನಿರ್ವಚನಗಳಲ್ಲಿ ಇದು ದೃಡಪಟ್ಟಿರುವುದನ್ನು ಕಾಣಬಹುದು.

**ಉಲ್ಲೇಖಗಳು**


೧. ಪೋತೆ ಎಚ್.ಟಿ., **ಅವೈದಿಕ ಚಿಂತನೆ**, ೨೦೦೫, ತಿಪ್ಪನಂಬು ಪ್ರಕಾಶನ, ಗುಲಬರ್ಗಾ.

೨. ಮನು ಮಹರ್ಷಿ, **ಮನುಸ್ಮೃತಿ**, ಶೇಷ ನವರತ್ನ. (ಅನು), ೧೯೯೮, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

೩. ಮಂಗಳಾ ಚಿ.ನ., **ಎಚ್ಚೆತ್ತ ಹಾದಿಯಲ್ಲಿ ಮಹಿಳೆ**, ೧೯೯೦, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪. ಪ್ರಭಾಮಣಿ, **ಮಹಿಳೆ ಮತ್ತು ಧರ್ಮ**, ೨೦೦೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಶೈಲಜಾ ಉಡಚಣ, **ವಚನಕಾರರ ದೃಷ್ಟಿಯಲ್ಲಿ ಸ್ತ್ರೀ**, ೧೯೯೧, ಗ್ರಿನೋಬಲ್ಸ್ ಪ್ರಕಾಶನ, ಕಲಬುರ್ಗಿ.

೬. ಸಿದ್ದಲಿಂಗಯ್ಯ (ಲೇ), ಗ್ರಾಮದೇವತೆಯ ಪರಿಕಲ್ಪನೆ, **ದಲಿತ ಚಿಂತನೆ**, ಮೊಗಳ್ಳಿ ಗಣೇಶ್. (ಸಂ), ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಜ್ಯೋತ್ಸ್ನಾ ಕಾಮತ್, **ಮಹಿಳೆ ಒಂದು ಅಧ್ಯಯನ**, ೧೯೯೯, ನವಕರ್ನಾಟಕ ಪ್ರಕಾಶನ, ಬೆಂಗಳೂರು

೮. ಕೃಷ್ಣಪ್ಪ ಜಿ, **ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ**, ೨೦೦೧, ಶ್ರೀರಂಗ ಪ್ರಕಾಶನ, ಮೈಸೂರು.

೯. ನಾಯಕ ಹಾ.ಮಾ (ಪ್ರ.ಸಂ.), **ಕನ್ನಡ ವಿಶ್ವಕೋಶ**, ಸಂಪುಟ-೨, ೧೯೭೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೦. ಹೊಯ್ಸಳ ಶರ್ಮ.ಕೆ., **ನ್ಯಾಯಶಾಸ್ತ್ರದರ್ಪಣ**, ೧೯೮೬, ಶಾಸನವಾಣಿ ಪ್ರಕಾಶನ, ಬೆಂಗಳೂರು.

೧೧. ನಂಜಮ್ಮಣ್ಣಿ ಎಂ., **ಸಾಮಾಜಿಕ ಮಾನವಶಾಸ್ತ್ರ**, ೧೯೭೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೨. ಗೌಡ ವಿ.ಹೆಚ್., **ಮಹಿಳೆ ಮತ್ತು ಕಾನೂನು**, ೨೦೦೪, ಶ್ರೀಮತಿ ಯಶೋದಾರಾಗೌ ಟ್ರಸ್ಟ್, ಮೈಸೂರು.

೧೩. ಪಾಟೀಲ ಎನ್.ಬಿ. ಮತ್ತು ಇತರರು, **ರಾಜಕೀಯ ಚಿಂತನೆ**, ೧೯೯೮, ಅರುಣ ಪ್ರಕಾಶನ, ಬಾಗಲಕೋಟೆ.

೧೪. ಮೀನಾ ದೇಶಪಾಂಡೆ ಬಿ.ಕೆ., **ರಾಜಕೀಯ ಸಿದ್ಧಾಂತ ಸಮಕಾಲೀನ ಚಿಂತನೆ**, ೨೦೦೦, ಭಾರತೀಯ ವಿದ್ಯಾಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು.

೧೫. ದೇವಿಪ್ರಸಾದ ಚಟ್ಟೋಪಾಧ್ಯಾಯ, ಮಾತೆಯರು ಮಾನ್ಯರಾಗಿದ್ದಾಗ, ಕುಮಾರಪ್ಪ ಜಿ., ಅನು, ೧೯೯೭, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೬. ಶರ್ಮಾ ಕೆ.ಎಸ್., ಸಮಾಜವಾದೀ ಮಹಿಳೆ (ರಷ್ಯಾದಲ್ಲಿ ಮಹಿಳೆ ಒಂದು ಅಧ್ಯಯನ), ೧೯೭೮, ಪುರೋಗಾಮಿ ಸಾಹಿತ್ಯ ಪ್ರಕಾಶನ, ಧಾರವಾಡ.

೧೭. ಮಂಗಳಾ ಪ್ರಿಯದರ್ಶಿನಿ.ಡಿ., ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ೨೦೦೭, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಪದ್ಮಾವತಮ್ಮ.ಕೆ., ಮಹಿಳೆ ಮತ್ತು ಆಸ್ತಿ ಹಕ್ಕು, ೨೦೦೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೯. ಶ್ರೀನಿವಾಸ ಸಿರನೂರಕರ್, ವಿಜ್ಞಾನೇಶ್ವರ-ಮಿತಾಕ್ಷರ, ೨೦೦೫, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೦. ಗೀತಾ ಕೃಷ್ಣಮೂರ್ತಿ, ಮಹಿಳೆ ಕಾನೂನು ಮತ್ತು ರಾಜಕಾರಣ, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಬಾಬಾಸಾಹೇಬ್ ಅಂಬೇಡ್ಕರ್, ಡಾ.ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಸಂಪುಟ-೧೪, ಭಾಗ ೧ (೬) ವಿಭಾಗ ೧-೩, ರಾಜಶೇಖರಯ್ಯ.ಎ.ಎಂ., (ಸಂ), ೨೦೦೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೨. ಇಂದಿರಾ ಆರ್. (ಲೇ), ಭಾರತದಲ್ಲಿ ಮಹಿಳೆಯರು: ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನ, ಮಹಿಳಾ ಅಧ್ಯಯನ ಸಂಪುಟ ೧, ಸಂಚಿಕೆ ೨, ಶ್ರೀಮತಿ ಎಚ್.ಎಸ್. (ಸಂ), ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ವೆಂಕಟರಾಯಪ್ಪ.ಕೆ.ಎನ್., ಸ್ತ್ರೀ ಮತ್ತು ಸಮಾಜ, ೧೯೭೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೪. ನಿರುಪಮಾ, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ೧೯೯೬, ಆರತಿ ಪಬ್ಲಿಕೇಷನ್ಸ್, ಬೆಂಗಳೂರು.

೨೫. ಮಾಲಿ ಮುದ್ದಣ್ಣ, ಕೃಷಿ ಅರ್ಥಶಾಸ್ತ್ರ, ೨೦೦೦, ಕಲಾ ಪ್ರಕಾಶನ, ಬೆಂಗಳೂರು.

೨೬. ಲಿಂಗಣ್ಣ ಸತ್ಯಂಪೇಟೆ, ಗ್ರಾಮಸಮರ, ೧೯೮೭, ಪ್ರಕೃತಿ ಪ್ರಕಾಶನ, ಶಹಾಪುರ, ಜಿ. ಗುಲಬರ್ಗಾ.

೨೭. ಶರ್ಮ ಆರ್.ಎಸ್., ಪ್ರಾಚೀನ ಭಾರತದಲ್ಲಿ ಶೂದ್ರರು, ಶ್ರೀನಿವಾಸ ಮೂರ್ತಿ. ಜೆ. ಮತ್ತು ಇತರರು (ಅನು), ೨೦೦೪, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೮. ಬಡಿಗೇರ್.ಜಿ.ಎಲ್., ಭಾರತದ ಗ್ರಾಮೀಣ ಅಭಿವೃದ್ಧಿ, ೧೯೯೮, ಸಂಗಮೇಶ್ವರ ಪ್ರಕಾಶನ, ಸಂಕೇಶ್ವರ (ಜಿ.ಬೆಳಗಾವಿ).

೨೯. ಸಮತಾ ಬಿ.ದೇಶಮಾನೆ., ಸಮಾಜಶಾಸ್ತ್ರ ಮತ್ತು ಮಹಿಳೆ, ೨೦೦೩, ಚೇತನ ಬುಕ್‌ಹೌಸ್, ಮೈಸೂರು.

* * *

## ಅಧ್ಯಾಯ - ಮೂರು

# ಮಹಿಳೆ : ಭೂ ಒಡೆತನ ಮತ್ತು ಕಾನೂನು

## ಮಹಿಳೆ : ಭೂ ಒಡೆತನ ಮತ್ತು ಕಾನೂನು

ಭಾರತ ಸಂವಿಧಾನ ಎಲ್ಲಾ ಪ್ರಜೆಗಳಿಗೆ ಸ್ವಾತಂತ್ರ್ಯ ಸಮಾನತೆಯ ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದು ೬೦ ದಶಕಗಳು ಕಳೆದರೂ, ಇನ್ನೂ ಮಹಿಳೆಯರು ಅಧೀನ ಸ್ಥಿತಿ, ಮತ್ತು ಪುರುಷರ ನಿಯಂತ್ರಣದಲ್ಲಿಯೇ ಬದುಕುತ್ತಿದ್ದಾರೆ. ಮಾನವ ಸಮಾಜದ ಅರ್ಧಭಾಗದಷ್ಟು ಸಂಖ್ಯೆಯಲ್ಲಿರುವ ಮಹಿಳೆಯರು ಅಸಮಾನತೆ, ಅಜ್ಞಾನ, ಅನಕ್ಷರತೆಯಿಂದ, ಪುರುಷರ ಶೋಷಣೆ ಹಾಗೂ ಹಿಂಸಾಚಾರದ ಬಲಿಪಶುಗಳಾಗಿಯೇ ಇದ್ದಾರೆ. ಮಹಿಳೆಯರ ಅಭಿವೃದ್ಧಿಗಾಗಿ ಹಕ್ಕುಗಳನ್ನು ನೀಡುವ ಅನೇಕ ಕಾಯ್ದೆ ಕಾನೂನುಗಳು ಇದ್ದರೂ ಮಹಿಳೆಯರಿಗೆ ಸಾಕ್ಷರತೆಯ ಕೊರತೆ, ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ನಾಲ್ಕುಗೋಡೆಗಳ ಮಧ್ಯದಲ್ಲಿಯೇ ಬಂದಿತಳಾಗಿರುವುದರಿಂದ ಮತ್ತು ಸಂಪ್ರದಾಯದ ಕಟ್ಟುಪಾಡುಗಳಿಗೆ ಒಳಗಾಗಿರುವುದರಿಂದ ಹೀಗೆ ಅನೇಕ ಕಾರಣಗಳಿಂದ ಅವಳಿಗೆ ಅರಿವು ಇಲ್ಲದಾಗಿದೆ. ಅದರಲ್ಲೂ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಿಗೆ ಯಾವುದೇ ಕಾನೂನುಗಳ ಅರಿವು ಇರುವುದಿಲ್ಲ. ನಮ್ಮ ಪ್ರಾಚೀನ ನೀತಿ ನಿಯಮಗಳು ರೂಪಿತವಾಗಿದ್ದು ಪುರುಷ ಧರ್ಮ ಶಾಸ್ತ್ರಜ್ಞರಿಂದ ಪ್ರಾಚೀನ ಕಾಲದಿಂದಲೂ ಕುಟುಂಬ, ಸಮಾಜ, ಆರ್ಥಿಕ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಪರಿಸರವು ಪುರುಷ ಪ್ರಧಾನವಾಗಿರುವುದರಿಂದ ಕಾನೂನು, ನಿಯಮಗಳು ಕೂಡ ಪುರುಷ ಚಿಂತನೆಯಲ್ಲಿಯೇ ರೂಪುಗೊಂಡಿರುವುದು ಎಲ್ಲರಿಗೂ ತಿಳಿದ ಸಂಗತಿ. ''ಆಸ್ತಿಹಕ್ಕು, ಪೂರ್ವಜರಿಗೆ ಪಿಂಡ ಪ್ರಧಾನದ ಹಕ್ಕು, ವಂಶೋದ್ಧಾರದ ಅಧಿಕಾರಗಳು ಪುರುಷರ ತಲೆಮಾರಿನಲ್ಲಿ ಮುಂದುವರೆದು ಅವಿಭಕ್ತ ಕುಟುಂಬ ಪದ್ಧತಿ ರೂಪುಗೊಂಡಿದ್ದು, ಈ ನೀತಿಯಿಂದ ಅವಿಭಕ್ತ ಕುಟುಂಬದ ಪುರುಷರು ಮಾತ್ರ ಪ್ರಾಮುಖ್ಯತೆ ಪಡೆದು, ಮಹಿಳಾ ಸಂದಸ್ಯರು ಅವರ ಆಶ್ರೀತರಾದದ್ದು ಈ ವ್ಯವಸ್ಥೆಯ ನೇರ ಫಲಶ್ರುತಿ. ಬಹುಶಃ ಮಹಿಳೆಯರು ನೀತಿ ನಿರೂಪಣೆಯಲ್ಲಿ ಭಾಗವಹಿಸಿದ್ದರೆ ಈ ರೀತಿಯ ಪುರುಷ ಪ್ರಧಾನ ವ್ಯವಸ್ಥೆ ರೂಪುಗೊಳ್ಳುತ್ತಲೇ ಇರಲಿಲ್ಲ.'' (ಹೇಮಲತಾ ಮಹಿಷಿ, ೨೦೦೧, ಪು ೯೧).

ಪ್ರಸ್ತುತ ಅಧ್ಯಾಯದಲ್ಲಿ ಮಹಿಳೆಯರಿಗೆ ನೀಡಿದ ಆಸ್ತಿಹಕ್ಕು ಕಾಯ್ದೆ - ಕಾನೂನುಗಳ ಕುರಿತ ವಿಶ್ಲೇಷಣೆ ಜೊತೆಗೆ ಕೃಷಿ ಭೂಮಿಗೆ ಸಂಬಂಧಿಸಿದ ಕಾಯ್ದೆಗಳನ್ನು ಪ್ರತ್ಯೇಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ವಿವಿಧ ಕಾಲಘಟ್ಟಗಳಲ್ಲಿ ಮಹಿಳೆಯರ ಆಸ್ತಿಹಕ್ಕು ಮತ್ತು ಕೃಷಿ ಭೂಮಿಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳು ಕಂಡ

ಬೆಳವಣಿಗೆಯನ್ನು ಗಮನಿಸುತ್ತ ಅವು ಮಹಿಳೆಯರ ಅಭಿವೃದ್ಧಿಗೆ ಎಷ್ಟರಮಟ್ಟಿಗೆ ಪೂರಕವಾಗಿವೆ ಎಂಬುದನ್ನು ಮತ್ತು ಅವುಗಳಿಂದಾದ ಪರಿಣಾಮಗಳ ಬಗ್ಗೆ ತಿಳಿಯಲು ಪ್ರಯತ್ನಿಸಲಾಗಿದೆ.

**೩.೧. ಆಸ್ತಿಹಕ್ಕಿನ ಕಾನೂನುಗಳು ಮಹಿಳೆಗೆ ನೀಡಿದ ಪ್ರಾತಿನಿಧ್ಯ**

ಬ್ರಿಟೀಷ್ ಸರ್ಕಾರವು ಭಾರತದಲ್ಲಿ ಕಾನೂನು ಪದ್ಧತಿಯನ್ನು ಜಾರಿಗೆ ತರುವ ಮೊದಲು ''ಹನಾಫಿ ಮತ್ತು ಇತ್ನಾ ಆಶಾರಿ ಮುಸ್ಲಿಂ ಕಾನೂನು ಹಾಗೂ 'ದಾಯಭಾಗ' ಮತ್ತು 'ಮಿತಾಕ್ಷರ' ಪದ್ಧತಿಯ ಲಿಖಿತ ಹಿಂದೂ ಸಂಹಿತೆಗಳಿದ್ದವು.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೩) ೧೮ನೇ ಶತಮಾನದಲ್ಲಿ ಬ್ರಿಟೀಷರು ಭಾರತದಲ್ಲಿ ನ್ಯಾಯಾಂಗ ವ್ಯವಸ್ಥೆಯ ಅಧಿಕಾರವನ್ನು ವಹಿಸಿಕೊಂಡ ನಂತರ ಭಾರತೀಯರು ಅವರವರ ಧರ್ಮಗಳಲ್ಲಿ ಪ್ರಚಲಿತವಿರುವ ವೈಯಕ್ತಿಕ ಕಾನೂನುಗಳ ನ್ಯಾಯ ಪರಿಪಾಲನೆ ಮಾಡುವ ನೀತಿಯನ್ನು ಅನುಸರಿಸಿದರು. ಹಿಂದೂ ಮತ್ತು ಮುಸ್ಲಿಂ ಗ್ರಂಥಸ್ಥ ಕಾನೂನನ್ನು ಅನ್ವಯಿಸುವ ಜವಾಬ್ದಾರಿಯನ್ನು ಆಗಿನ ಬ್ರಿಟೀಷ್ ಭಾರತೀಯ ನ್ಯಾಯಾಲಯಗಳು ವಹಿಸಿಕೊಂಡವು. ಈ ಜವಾಬ್ದಾರಿಯನ್ನು ನಿರ್ವಹಿಸುವುದಕ್ಕಾಗಿ, ಹಿಂದೂ ಕಾನೂನನ್ನು ವ್ಯಾಖ್ಯಾನಿಸುವಂಥ ಪಂಡಿತರನ್ನು ನೇಮಿಸಿ ಕಾನೂನು ಗ್ರಂಥವನ್ನು ಭಾಷಾಂತರಿಸುವ ಕಾರ್ಯವನ್ನು ಕೈಗೊಂಡರು. ಭಾಷಾಂತರಗೊಂಡ ಈ ಗ್ರಂಥಗಳೇ ಮುಂದೆ ಬ್ರಿಟೀಷ್ ಭಾರತೀಯ ಕಾನೂನು ವ್ಯವಸ್ಥೆಯ ಆಕರ ಗ್ರಂಥಗಳಾದವು. ಭಾರತೀಯ ಮಹಿಳೆಯರ ಸ್ಥಾನಮಾನವನ್ನು ಸುಧಾರಿಸುವಲ್ಲಿ ಕಾನೂನುಗಳು ಪ್ರಮುಖ ಪಾತ್ರವಹಿಸತೊಡಗಿದವು. ಮಹಿಳೆಯರ ಬಗೆಗಿನ ತಾರತಮ್ಯವನ್ನು ಕಾನೂನುಗಳ ಮೂಲಕ ಪರಿಹರಿಸಲು ಪ್ರಯತ್ನಿಸಲಾಯಿತು. ಆ ಕಾಲದಲ್ಲಿ ಬ್ರಿಟೀಷ್ ಆಡಳಿತಗಾರರು ಹಾಗೂ ಭಾರತೀಯ ರಾಷ್ಟ್ರೀಯತವಾದಿಗಳು ಮಹಿಳೆಯರ ಸ್ಥಾನಮಾನವನ್ನು ಸುಧಾರಿಸುವ ದೃಷ್ಟಿಯಿಂದ ಅನೇಕ ಸುಧಾರಣಾ ಕ್ರಮಗಳನ್ನು ಕೈಗೊಳ್ಳಲು ಪ್ರಯತ್ನಿಸಿದರು.

**೩.೧.೧. ವಸಾಹತು ಕಾಲಘಟ್ಟದಲ್ಲಿ**

ಪ್ರಾಚೀನ ಕಾಲದಿಂದಲೂ ಆಸ್ತಿ ಹಕ್ಕುಗಳು ಪುರುಷ ಕೇಂದ್ರಿತವಾಗಿದ್ದುದರಿಂದ ಮಹಿಳೆಯರು ಸರಿಸಮಾನವಾದ ಹಕ್ಕುಗಳಿಂದ ವಂಚಿತರಾಗುತ್ತಾ ಬಂದಿರುವರು. ಕುಟುಂಬದಲ್ಲಿ ಮಹಿಳೆಯು ಪುರುಷನ ಮೇಲೆ ಅವಲಂಬಿತಳಾಗುವಂತೆ ಮಾಡಲಿಕ್ಕೆ ಇದು ಒಂದು ಕಾರಣವಾಗಿದೆ. ಭಾರತದಲ್ಲಿ ಮಹಿಳಾ ಸಮುದಾಯ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಸಬಲಗೊಳ್ಳಬೇಕಾದರೆ ಆಸ್ತಿಯಲ್ಲಿ ಪಾಲು ಸಿಗಬೇಕಾಗಿರುವುದು ತುಂಬಾ ಅವಶ್ಯಕವಾಗಿದೆ. ಆದುದರಿಂದಲೇ ಭಾರತೀಯ ಮಹಿಳೆಯರ ಸ್ಥಿತಿಗತಿ ಸುಧಾರಿಸಲು ೧೯ನೆಯ ಶತಮಾನದಲ್ಲಿ ಅನೇಕ ಕಾನೂನುಗಳನ್ನು ಜಾರಿಗೆ ತರಲಾಯಿತು. ಬ್ರಿಟೀಷ್ ಸರಕಾರ ಮೊತ್ತಮೊದಲು ಭಾರತದಲ್ಲಿ ಒಂದು ಪೈಶಾಚಿಕ ಪದ್ಧತಿಯಾದ ಸತಿ ಪದ್ಧತಿಯನ್ನು ನಿಷೇಧಿಸುವ ಕಾನೂನನ್ನು ೧೮೨೯ರಲ್ಲಿ ಜಾರಿಗೆ ತರುವುದರ ಮೂಲಕ ಮಹಿಳೆಯರ ಮೇಲಿನ ಶೋಷಣೆಗಳತ್ತ ಗಮನಹರಿಸಿತು. ಈ ಕಾನೂನು ಜಾರಿಗೆ ಬರುವಲ್ಲಿ ಅಂದಿನ ಸಮಾಜ ಸುಧಾರಕರಾದ ರಾಜಾರಾಂ ಮೋಹನರಾಯ ಅವರ ಅವಿರತ ಹೋರಾಟವಿತ್ತು. ಈ ಕಾನೂನಿನ ಜೊತೆ ಜೊತೆಯಾಗಿಯೇ ವಿಧವಾ ಪುನರ್ವಿವಾಹ ಅಧಿನಿಯಮ ೧೮೫೬, ಬಾಲ್ಯವಿವಾಹ ನಿಷೇಧ ಕಾನೂನು ೧೯೩೭ರಲ್ಲಿ ಜಾರಿಗೆ ಬರುವುದರ ಮೂಲಕ ಮಹಿಳೆಯರ ಆಸ್ತಿಹಕ್ಕಿನ ಕುರಿತು ಪ್ರಸ್ತಾಪವಾಯಿತು.

ಭಾರತೀಯ ಕುಟುಂಬ ವ್ಯವಸ್ಥೆಯು ಪಿತೃಪ್ರಧಾನ ಅವಿಭಕ್ತ ಕುಟುಂಬವಾಗಿದ್ದು ಇಲ್ಲಿ ಆಸ್ತಿಯ ಹಕ್ಕು ಕುಟುಂಬದ ಯಜಮಾನನದಾಗಿದೆ. ಈ ಆಸ್ತಿಯ ಹಕ್ಕು ಪುರುಷನಿಂದ ಪುರುಷನಿಗೆ ತಲೆಮಾರುಗಳನ್ನು ಹಾದು

ವರ್ಗಾವಣೆಗೊಳ್ಳುತ್ತಾ ಬಂದಿದೆ. ಇಂಥ ವ್ಯವಸ್ಥೆಯಲ್ಲಿ ಮಹಿಳೆಯು ತಂದೆ - ತಾಯಿಯರ ಆಸ್ತಿಯಿಂದ ವಂಚಿತಳಾಗುವುದರ ಜೊತೆಗೆ ವಿವಾಹದ ನಂತರ ಗಂಡನ ಆಸ್ತಿಯಿಂದಲೂ ವಂಚಿತಳಾಗುತ್ತ ಬಂದಿರುವಳು. ಮಹಿಳೆಯ ಜೀವನದಲ್ಲಿ ವಿವಾಹವು ಅತೀ ಮುಖ್ಯವಾದ ಘಟ್ಟವಾಗಿ ಪರಿಗಣಿತವಾಗಿರುವುದರಿಂದ ಇದು ಆಕೆಯ ಆಸ್ತಿ ಹಕ್ಕಿನ ಮೇಲೆ ಪರಿಣಾಮ ಬೀರುತ್ತಿದೆ ಎಂಬುದನ್ನು ಅರಿತು ೧೯೨೯ರಲ್ಲಿ ಹಿಂದೂ ಉತ್ತರಾಧಿಕಾರ ಕಾಯ್ದೆಯನ್ನು ಜಾರಿಗೆ ತರಲಾಯಿತು.

**ಎ) ೧೯೨೯ರ ಹಿಂದೂ ಉತ್ತರಾಧಿಕಾರ ಕಾಯ್ದೆ**

''೧೯೨೯ರ ಹಿಂದೂ ಉತ್ತರಾಧಿಕಾರ ಕಾಯ್ದೆ ಪ್ರಕಾರ ಮಗನ ಮಗಳು, ಮಗಳ ಮಗಳು, ತಂಗಿ, ತಂಗಿಯ ಮಗ ಇವರುಗಳಿಗೆ ತಂದೆಯ ತಂದೆಯ ಮತ್ತು ತಂದೆಯ ಸಹೋದರ ಇವರ ನಡುವೆ ಉತ್ತರಾಧಿಕಾರ ಸ್ಥಾನ ನೀಡಲಾಯಿತು. ಆದರೆ ಈ ಕಾಯ್ದೆಯಲ್ಲಿರುವ ಎಲ್ಲಾ ಅಂಶಗಳು ಪಿತೃಪ್ರಧಾನತೆಯ ಎಲ್ಲ ಅಗತ್ಯಗಳನ್ನು ಪೂರೈಸುವುದರ ಜೊತೆಗೆ ಕುಟುಂಬದ ಆಸ್ತಿಗೆ ವಾರಸುದಾರರನ್ನಾಗಿಸಿತೇ ಹೊರತಾಗಿ ಮಹಿಳೆಯರಿಗೆ ಆಸ್ತಿ ಹಕ್ಕು ನೀಡುವುದಾಗಿರಲಿಲ್ಲ.'' (ಉಷಾ ಎಂ., ೨೦೦೪, ಪು ೧೦೬) ಈ ಕಾಯ್ದೆಯು ಹೊರನೋಟಕ್ಕೆ ಮಹಿಳೆಯರಿಗೆ ಆಸ್ತಿ ಹಕ್ಕು ನೀಡಿರುವಂತೆ ಕಂಡರೂ ಸೂಕ್ಷ್ಮವಾಗಿ ಗಮನಿಸಿದಾಗ ಪುರುಷ ಪ್ರಧಾನ ವ್ಯವಸ್ಥೆಗೆ ತಕ್ಕಂತೆ ಕಾಯ್ದೆ ಜಾರಿಗೆ ಬಂದಿರುವುದನ್ನು ನೋಡಬಹುದು. ''೧೯೩೨ರ ಸುಮಾರಿಗೆ ವಿಧವೆಯರಿಗೆ ಆಸ್ತಿ ಹಕ್ಕನ್ನು ಕಾನೂನು ಬದ್ಧವಾಗಿ ನೀಡುವ ಪ್ರಸ್ತಾಪ ಮೊದಲುಗೊಂಡಿತಾದರೂ ಸಂಪ್ರದಾಯವಾದಿಗಳ ವಿರೋಧದಿಂದಾಗಿ ವಿಫಲವಾಯಿತು. ಆದರೆ ಸುಧಾರಣಾವಾದಿಗಳ ಎಡಬಿಡದ ಪ್ರಯತ್ನದಿಂದಾಗಿ ೧೯೩೭ರ ಹೊತ್ತಿಗೆ ಹಿಂದೂ ಸ್ತ್ರೀಯರ ಆಸ್ತಿಹಕ್ಕಿನ ಅಧಿನಿಯಮ (Hindu Women's Right's to Property Act 1937) ರೂಪಗೊಂಡಿತು.'' (ಉಷಾ. ಎಂ., ೨೦೦೪, ಪು ೧೦೭)

**ಬಿ). ೧೯೩೭ರ ಹಿಂದೂ ಸ್ತ್ರೀಯರ ಆಸ್ತಿಹಕ್ಕಿನ ಅಧಿನಿಯಮ**

೧೯೩೭ರ ಹಿಂದೂ ಸ್ತ್ರೀಯರ ಆಸ್ತಿಹಕ್ಕಿನ ಅಧಿನಿಯಮದ ಮೂಲಕ ಮಹಿಳೆಯರಿಗೆ ಪ್ರಥಮ ಬಾರಿಗೆ ಆಸ್ತಿಹಕ್ಕನ್ನು ನೀಡುವ ಕಾನೂನನ್ನು ಮಾಡಲಾಯಿತು. ಆದರೆ ಈ ಕಾನೂನು ವಿಧವೆಯರಿಗೆ ಮಾತ್ರ ಸಂಬಂಧಪಟ್ಟದ್ದಾಗಿದ್ದು ಇದು ಸೀಮಿತವಾದ ಆಸ್ತಿ ಹಕ್ಕನ್ನು ಹೊಂದಿದೆ. ಕಾರಣ ಹಿಂದೂ ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿದ್ದು, ಪುರುಷನು ಕುಟುಂಬದ ಆಸ್ತಿಯ ಮಾಲೀಕನಾಗಿರುವುದರಿಂದ ಅವನು ಆಸ್ತಿಯನ್ನು ನೋಡಿಕೊಳ್ಳುವ ಮತ್ತು ಮಾರುವ ಅಧಿಕಾರವನ್ನು ಹೊಂದಿದ್ದನು. ಕುಟುಂಬದ ಒಟ್ಟು ಆಸ್ತಿಯು ಪಾಲಾಗುವವರೆಗೆ ಕುಟುಂಬದ ಸದಸ್ಯರನ್ನು ನೋಡಿಕೊಳ್ಳುವ ಜವಾಬ್ದಾರಿ ಅವನದಾಗಿತ್ತು. ಈ ಕಾಯ್ದೆಯ ಅನ್ವಯ ಪತಿಯ ಮರಣಾನಂತರ ಒಟ್ಟು ಕುಟುಂಬದ ಆಸ್ತಿಯಲ್ಲಿ ಅವನಿಗೆ ಬರತಕ್ಕ ಆಸ್ತಿಯ ಪಾಲನ್ನು ಅವನ ವಿಧವೆಗೆ ಕೊಡಲಾಯಿತು. ಆದರೆ ಅವಳು ಈ ಆಸ್ತಿಯ ಸಂಪೂರ್ಣ ಹಕ್ಕುದಾರಳಾಗದೆ ತನ್ನ ಜೀವಿತಾವಧಿಯವರೆಗೆ ಮಾತ್ರ ಆ ಆಸ್ತಿಯನ್ನು ಅನುಭವಿಸುವ ಹಕ್ಕು ಹೊಂದಿದ್ದಳು. ಅವಳ ಮರಣಾನಂತರ ಆಸ್ತಿಯು ಮರಳಿ ಪತಿಯ ಸಹೋದರರಿಗೆ ಸೇರುತ್ತಿತ್ತು. ಒಂದು ವೇಳೆ ಆಕೆ ಮರು ವಿವಾಹವಾದರೆ ಆಸ್ತಿಯ ಮೇಲೆ ಹಕ್ಕನ್ನು ಅವಳು ಕಳೆದುಕೊಳ್ಳುತ್ತಿದ್ದಳು. ಇದು ಬ್ರಿಟೀಷರ ಅಧೀನದಲ್ಲಿದ್ದ ಪ್ರದೇಶದಲ್ಲಿ ಆಸ್ತಿ ಹಕ್ಕು ಕುರಿತು ಜಾರಿಗೆ ಬಂದಂತಹ ಮೊಟ್ಟ ಮೊದಲ ಕಾನೂನು.

### ಸಿ). ಮೈಸೂರು ಸಂಸ್ಥಾನದ ಕಾನೂನುಗಳು

ಬ್ರಿಟೀಷ್ ಸರ್ಕಾರ ಮಹಿಳೆಯರಿಗೆ ಆಸ್ತಿ ಹಕ್ಕು ಕೊಡುವ ಕಾನೂನನ್ನು ಜಾರಿಗೆ ತರುವ ಮೊದಲೇ ಮೈಸೂರು ಸಂಸ್ಥಾನವು ಮಹಿಳೆಯರಿಗಾಗಿ ಆಸ್ತಿ ಹಕ್ಕು ಕಾನೂನನ್ನು ಜಾರಿಗೆ ತಂದಿತು. ಈ ಕಾನೂನು ಮೈಸೂರು ಸಂಸ್ಥಾನದವರಿಗೆ ಮಾತ್ರ ಅನ್ವಯವಾಗುತ್ತಿತ್ತು. ''ಮಾದರಿ ಸಂಸ್ಥಾನವೆಂದು ಕರೆಯುವ ಮೈಸೂರು ಸಂಸ್ಥಾನದಲ್ಲಿ ೧೯೨೯ರ ಸುಮಾರಿಗೆ ಚಂದ್ರಶೇಖರ ಅಯ್ಯರ್ ಅಧ್ಯಕ್ಷತೆಯಲ್ಲಿ ಸಮಿತಿಯೊಂದು ರಚನೆಗೊಂಡು ೧೯೩೩ರಲ್ಲಿಯೇ ಮೈಸೂರು ಹಿಂದೂ ಮಹಿಳೆಯರ ಆಸ್ತಿಹಕ್ಕಿನ ಅಧಿನಿಯಮ ಜಾರಿಗೊಂಡಿತು.'' (ಉಷಾ ಎಂ., ೨೦೦೪, ಪು ೧೦೭) ಸಂಸ್ಥಾನದ ಆಡಳಿತವೊಂದು ಮಹಿಳೆಯರಿಗಾಗಿ ಈ ರೀತಿಯ ಆಸ್ತಿ ಹಕ್ಕು ನೀಡಿರುವುದು ಗಮನಾರ್ಹ.

''ಸ್ವಾತಂತ್ರ್ಯ ಪೂರ್ವದಲ್ಲೇ ಮೈಸೂರು ಪ್ರಾಂತ್ಯದವರಿಗೆ ಅನ್ವಯಿಸುವಂತಿದ್ದ ೧೯೩೩ರ ಮಹಿಳಾ ಆಸ್ತಿಯ ಮೈಸೂರು ಕಾಯ್ದೆಯು ಪತಿಯ ಸಾವಿನ ನಂತರ ವಿಧವೆಯರಿಗೆ ಆಸ್ತಿಯಲ್ಲಿ ಹಕ್ಕನ್ನು ಕೊಟ್ಟಿತು.''(ಗಾಯತ್ರಿ ಎನ್, ೧೯೯೬, ಪು ೮೦) ಆದರೆ ಈ ಕಾನೂನಿನಲ್ಲೂ ಸಮರ್ಪಕವಾದ ಫಲಿತಾಂಶಗಳು ದೊರೆಯಲಿಲ್ಲ. ನಂತರ ಕೇಂದ್ರ ಸರ್ಕಾರದ ೧೯೩೭ರ ಹಿಂದೂ ಮಹಿಳೆಯ ಆಸ್ತಿ ಹಕ್ಕಿನ ಕಾಯ್ದೆಯು ಜಾರಿಗೆ ಬಂದಿತು. ಈ ಕಾಯ್ದೆಯ ಅನ್ವಯ ಮಹಿಳೆಯರು ಪತಿಯ ಸಾವಿನ ನಂತರ ಆಸ್ತಿಯನ್ನು ಅನುಭವಿಸುವ ಹಕ್ಕನ್ನು ಹೊಂದಿದರು. ಮೈಸೂರು ಸಂಸ್ಥಾನವು ಸ್ತ್ರೀಧನಕ್ಕೆ ಸಂಪೂರ್ಣ ಹಕ್ಕನ್ನು ಕೊಡುತ್ತಾ ಹಿಂದೂ ಮಹಿಳೆಯರ ಉತ್ತರಾಧಿಕಾರದ ಹಕ್ಕುಗಳನ್ನು ಹೆಚ್ಚಿಸಲು ತಮ್ಮದೇ ಆದಂಥ ಶಾಸನಗಳನ್ನು ಜಾರಿಗೆ ತಂದಿತು.

೧೯ನೆಯ ಶತಮಾನವನ್ನು ಸಮಾಜ ಸುಧಾರಣೆಯ ಕಾಲವೆನ್ನಬಹುದು. ಈ ಕಾಲದಲ್ಲಿ ಸ್ತ್ರೀಯರ ಸಮಸ್ಯೆಗಳನ್ನು ಗುರುತಿಸುವುದರ ಮೂಲಕ ಅವರನ್ನು ಶೋಷಣೆಯ ನೆಲೆಯಿಂದ ಮುಕ್ತಗೊಳಿಸಲು ಮತ್ತು ಸಾಮಾಜಿಕ ಆಚರಣೆಗಳನ್ನು ಕಾನೂನಿನ ಮೂಲಕ ನಿಷೇಧಿಸುವಂಥ ಕಾರ್ಯವನ್ನು ಕೈಗೊಂಡ ಕಾಲವಾಗಿತ್ತು. ಅವರ ಮೇಲೆ ಪಿತೃಪ್ರಧಾನ ಸಮಾಜ ವಿಧಿಸಿರುವ ಕಟ್ಟುಪಾಡುಗಳನ್ನು ನಾಶಮಾಡುವುದು ಹಾಗೂ ಅವುಗಳಿಂದ ಬಿಡುಗಡೆಗೊಳಿಸುವುದು ತುಂಬಾ ಅವಶ್ಯಕವಾಗಿತ್ತು.

ರಾಜಾರಾಮ ಮೋಹನರಾಯರು ಹಿಂದೂ ಮಹಿಳೆಯರಿಗೆ ತಮ್ಮ ತಂದೆಯ ಮತ್ತು ಪತಿಯ ಆಸ್ತಿಯಲ್ಲಿ ಹಕ್ಕುಳ್ಳವರು ಎಂದು ಒಪ್ಪಿಕೊಳ್ಳುವಂತೆ ಮಾಡಲು ಶ್ರಮಿಸಿದರು. ಆದರೆ ವಾಸ್ತವದಲ್ಲಿ ಇದು 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬ ನಾಣ್ಣುಡಿಯಂತೆ ಮದುವೆಯಾದ ತಮ್ಮ ಹೆಣ್ಣು ಮಕ್ಕಳು ಕಷ್ಟದಲ್ಲಿದ್ದರೂ ಕೂಡ ತಂದೆ - ತಾಯಿಯರು ಅವಳ ಸ್ಥಿತಿಯನ್ನು ನೋಡಿ 'ಅದು ಅವಳ ಹಣೆ ಬರಹ' ಎಂದು ಹಾರಿಕೆಯ ಹೇಳಿಕೆಗಳನ್ನು ನೀಡುತ್ತಾ ಬಂದಿದ್ದಾರೆ. ಆದರೆ ಆರ್ಥಿಕ ಸ್ವಾತಂತ್ರ್ಯವು ಬದುಕಿನ ಬಹುಮುಖ್ಯವಾದ ಅಂಶವಾಗಿರುವುದರಿಂದ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ನೀಡುವುದರ ಬಗ್ಗೆ ಮತ್ತು ಆಕೆ ಆರ್ಥಿಕ ಸಂಕಟಕ್ಕೆ ಈಡಾಗದಂತೆ ನೋಡಿಕೊಳ್ಳಲು ಸಮಾಜ ಸುಧಾರಣೆಯ ಮೂಲಕ ಅವರ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸಲಾಯಿತು. ಆದರೆ ಅವರನ್ನು ಲಿಂಗ ಸಂಬಂಧಿ ಶೋಷಣೆಯಿಂದ ಪರಿಣಾಮಕಾರಿಯಾಗಿ ಮುಕ್ತಗೊಳಿಸಲು ಸಾಧ್ಯವಾಗಲಿಲ್ಲ.

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟೀಷರು ಜಾರಿಗೆ ತಂದಂತಹ ಕಾಯ್ದೆಗಳಾಗಲಿ ಮೈಸೂರು ಸಂಸ್ಥಾನದವರು ಜಾರಿಗೆ ತಂದಂತಹ ಕಾಯ್ದೆಗಳಾಗಲಿ ಸುಲಭವಾಗಿ ಜಾರಿಗೆ ಬರಲಿಲ್ಲ. ಕಾರಣ ಹಿಂದೂ ಸಂಪ್ರದಾಯವಾದಿಗಳ ಬಲವಾದ ವಿರೋಧಗಳನ್ನು ಎದುರಿಸಬೇಕಾದುದರಿಂದ ಈ ಕಾನೂನುಗಳು ವಿಫಲವಾದವು. ಆದರೆ ಸ್ವತಂತ್ರ ಪೂರ್ವದಲ್ಲಿ ಮಹಿಳೆಯೂ ಆಸ್ತಿಹಕ್ಕನ್ನು ಅನುಭವಿಸಬಹುದೆಂಬ ಕಾಯ್ದೆಯ ಮೂಲಕ ಆಸ್ತಿ ಹಕ್ಕಿನ ಬೀಜವೊಂದು ಮೊಳಕೆ

ಒಡೆಯಿತು. ಈ ಕಾನೂನುಗಳು ಕೇವಲ ವಿಧವೆಯರಿಗೆ ಮಾತ್ರ ಅನ್ವಯಿಸುತ್ತಿದ್ದವು. ವಿಧವೆಯರು ಕೂಡ ಆಸ್ತಿಯ ಮೇಲೆ ಸ್ವತಂತ್ರವಾದ ಹಕ್ಕನ್ನು ಹೊಂದಿರಲಿಲ್ಲ. ಕೇವಲ ಅನುಭವಿಸುವ ಹಕ್ಕನ್ನು ಮಾತ್ರ ಕೊಡಲಾಗಿತ್ತು. ಈ ಕಾನೂನನ್ನು ಜಾರಿಗೆ ತರಲು ಸಂಪ್ರದಾಯವಾದಿಗಳು ವಿರೋಧವನ್ನು ವ್ಯಕ್ತಪಡಿಸಿದರು. ಸಂಪ್ರದಾಯವಾದಿಗಳು ಮಹಿಳೆಯರಿಗೆ ಆಸ್ತಿಹಕ್ಕನ್ನು ನಿರಾಕರಿಸಲು ಬಹುಮುಖ್ಯವಾದ ಕಾರಣಗಳೆಂದರೆ,

''೧. ಹಿರಿಯರ ಆತ್ಮಕ್ಕೆ ಮೋಕ್ಷವನ್ನು ದೊರಕಿಸಿಕೊಡಲು ನಡೆಸಬೇಕಾದ ಧಾರ್ಮಿಕ ಕ್ರಿಯಾವಿಧಿಗಳು.

೨. ಪೂರ್ವಜರ ಆಸ್ತಿಯನ್ನು ಕಾಪಾಡುವುದು.

೩. ಇಳಿವಯಸ್ಸಿನಲ್ಲಿ ತಂದೆ ತಾಯಿಯರ ರಕ್ಷಣೆ.'' (ಇಂದಿರಾ ಆರ್., ೨೦೦೦, ಪು ೨೭೭)

ಕುಟುಂಬದ ಹಿರಿಯರು ಗತಿಸಿದಾಗ ಪಿಂಡ ಬಿಡುವಂಥ ಕ್ರಿಯಾ ವಿಧಿಗಳನ್ನು ಗಂಡು ಸಂತಾನವೆ ಮಾಡುವ ಸಂಪ್ರದಾಯವಿರುವುದು. ಕಾರಣ ತಂದೆ ತಾಯಿಯರಿಗೆ ಸ್ವರ್ಗಪ್ರಾಪ್ತಿ ಆಗುವುದೆಂಬ ನಂಬಿಕೆಯಿಂದ ಮಹಿಳೆಯರಿಗೆ ನಿಷೇಧ ಹೇರಲಾಗಿತ್ತು. ಮಹಿಳೆ ಪಾಲ್ಗೊಂಡರೆ ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗುವುದಿಲ್ಲ ಎಂಬ ಮೂಢನಂಬಿಕೆ ಜನರಲ್ಲಿ ಮನೆಮಾಡಿತ್ತು.

'ಮಹಿಳೆ ಅಬಲೆ' ಆಕೆಗೆ ಆಸ್ತಿಯನ್ನು ಕಾಪಾಡುವ ಸಾಮರ್ಥ್ಯ ಇಲ್ಲ. ಹಾಗಾಗಿ ಆಸ್ತಿ ಒಡೆತನ ಕೊಟ್ಟರೆ ಅದನ್ನು ಬೆಳೆಸಿ ಉಳಿಸಿಕೊಳ್ಳಲು ಅಸಮರ್ಥಳು ಎಂದು ನಂಬಿದ್ದ ಜನರು ಗಂಡು ಸಂತಾನಕ್ಕೆ ಆದ್ಯತೆ ನೀಡುತ್ತಿದ್ದರು. 'ಸ್ತ್ರೀ' ಮದುವೆಯಾಗಿ ಬೇರೆ ಮನೆಗೆ ಸೇರುವಳು. ಹೇಗಿದ್ದರೂ ಆಕೆ ಪರರ ಸೊತ್ತು. ಆದ್ದರಿಂದ ಇಳಿವಯಸ್ಸಿನ ತಂದೆ - ತಾಯಿಯರನ್ನು ನೋಡಿಕೊಳ್ಳಲು ಸಾಧ್ಯವಿಲ್ಲ. ಗಂಡು ಸಂತಾನವಾದರೆ ಸಾಯುವ ತನಕ ತಮ್ಮ ಜೊತೆಯಲ್ಲಿಯೇ ಇದ್ದು, ತಮ್ಮನ್ನು ನೋಡಿಕೊಳ್ಳುವರು ಎಂಬ ನಂಬಿಕೆ ಪ್ರಬಲವಾಗಿತ್ತು. ಒಟ್ಟು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷ ಶ್ರೇಷ್ಠತೆಯನ್ನೂ, ಸ್ತ್ರೀಯ ದೌರ್ಬಲ್ಯಗಳನ್ನು ಎತ್ತಿ ಹಿಡಿಯಲಾಗಿ ಆಸ್ತಿ ಹಾಗೂ ಧಾರ್ಮಿಕ ಕ್ರಿಯಾ ವಿಧಿಗಳಲ್ಲೂ ಸ್ತ್ರೀಯರು ಯಾವುದೇ ನಿರ್ದಿಷ್ಟವೂ ಪ್ರಮುಖವೂ ಆದ ಸ್ಥಾನವಿಲ್ಲದೇ ನೇಪಥ್ಯಕ್ಕೆ ತಳ್ಳಲ್ಪಟ್ಟರು. ಹೀಗಾಗಿ ಮಹಿಳೆಯರಿಗೆ ತಂದೆಯ ಆಸ್ತಿಯಲ್ಲಿ ಮತ್ತು ಪತಿಯ ಆಸ್ತಿಯಲ್ಲಿ ಹಕ್ಕು ಇದೆ ಎಂಬ ಕಾನೂನು ಜಾರಿಗೆ ಬಂದಿದ್ದರೆ ಸಂಪ್ರದಾಯವಾದಿಗಳು ಈ ಕಾಯ್ದೆಯನ್ನು ಜಾರಿಗೆ ತರುವ ಮುನ್ನವೇ ವಿರೋಧವನ್ನು ವ್ಯಕ್ತಪಡಿಸುತ್ತಿದ್ದರು. ಒಟ್ಟಿನಲ್ಲಿ ಸಂಪ್ರದಾಯವಾದಿಗಳು ಮಹಿಳೆಯರು ಆಸ್ತಿಯನ್ನು ಅನುಭವಿಸುವ ಹಕ್ಕನ್ನು ಸಹ ಕಿತ್ತುಕೊಳ್ಳುವಲ್ಲಿ ಯಶಸ್ವಿಯಾದರು.

**ಡಿ). ರಾವ್ ಸಮಿತಿ**

''೧೯೪೧ರಲ್ಲಿ ಸರ್ಕಾರವು ರಾವ್ (ಹಿಂದೂ ಕಾನೂನು) ಸಮಿತಿಯನ್ನು ಸ್ಥಾಪಿಸಿತು. ಇದರ ಉದ್ದೇಶ ೧೯೩೭ರ ಹಿಂದೂ ಮಹಿಳೆಯರ ಆಸ್ತಿಹಕ್ಕು ಅಧಿನಿಯಮದಲ್ಲಿ ವಿಧವೆಯರಿಗೆ ನೀಡಿರುವ ಹಕ್ಕುಗಳ ಕುರಿತು ಬಹಳಷ್ಟು ಗೊಂದಲಗಳಿದ್ದವು. ಆ ಬಗ್ಗೆ ಸ್ಪಷ್ಟೀಕರಣ ನೀಡಲು ಮತ್ತು ಈ ಅಧಿನಿಯಮದಿಂದ ಹೆಣ್ಣು ಮಕ್ಕಳಿಗೆ ಆಗಿರುವ ಅನ್ಯಾಯವನ್ನು ತೊಡೆದು ಹಾಕಲು ಈ ಸಮಿತಿಯನ್ನು ಸ್ಥಾಪಿಸಲಾಯಿತು. ಈ ಶಾಸನದಲ್ಲಿಯ ನಾನಾರ್ಥ, ವ್ಯಾಖ್ಯಾನಗಳಿಗೆ ತಾಂತ್ರಿಕ ಕೊರತೆಗಳನ್ನು ಹಾಗೂ ಸಂದಿಗ್ಧಾರ್ಥಗಳನ್ನು ಗಮನಿಸಿ, ವಾರಸುದಾರಿಕೆ, ವಿವಾಹ ಮತ್ತಿತರ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ಸಮಗ್ರವಾದ ಹಿಂದೂ ಕಾನೂನನ್ನು ರಚಿಸಬೇಕೆಂದು ಶಿಫಾರಸ್ಸು ಮಾಡಿತು.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೬೭) ಸ್ತ್ರೀ - ಪುರುಷರಿಬ್ಬರಿಗೂ ಸಮಾನ ಹೊಣೆಗಾರಿಕೆ

ಮತ್ತು ಸಮಾನ ಹಕ್ಕುಗಳೊಡನೆ ಸಮಾನ ಸ್ಥಾನಮಾನ ನೀಡಬೇಕೆಂದು ಈ ಸಮಿತಿಯ ಆಶಯವಾಗಿತ್ತು. ದುರದೃಷ್ಟವಶಾತ್ ಈ ಸಮಿತಿಯ ಕಾರ್ಯ ನಿಂತುಹೋಯಿತು. ಕಾರಣ ಕಾಂಗ್ರೆಸ್ ಪಾರ್ಟಿಯು 'ಸವಿನಯ ಕಾನೂನು ಭಂಗ' ಚಳುವಳಿಯನ್ನು ತೀವ್ರಗೊಳಿಸಿ, ಶಾಸನ ಹಾಗೂ ವಿಧಾನ ಸಭೆಗಳನ್ನು ಬಹಿಷ್ಕರಿಸಿದರು. ಜನವರಿ ೧೯೪೪ರಲ್ಲಿ ಸರ್ಕಾರವು ಹಿಂದೂ ಕಾನೂನನ್ನು ರಚಿಸುವುದಕ್ಕಾಗಿ ರಾವ್ ಸಮಿತಿಯನ್ನು ಮತ್ತೆ ರಚಿಸಿತು. ಅಖಿಲ ಭಾರತ ಮಹಿಳೆಯರ ಸಮ್ಮೇಳನವು ದೇಶದಾದ್ಯಂತ ಆಂದೋಲನವನ್ನು ಮಾಡಿ ಈ ಸಮಿತಿಗೆ ಒಂದು ಕರಡು ನಿವೇದನ ಪತ್ರವನ್ನು ನೀಡಿತು. ಅದೇ ವರ್ಷದ ಆಗಸ್ಟ್ ತಿಂಗಳಲ್ಲಿ, ಈ ಸಮಿತಿಯು ಕಾನೂನಿನ ಒಂದು ಕರಡು ಪ್ರತಿಯನ್ನು ತಯಾರಿಸಿತು. ಅದರಲ್ಲಿ ಮುಖ್ಯವಾದ ವ್ಯವಸ್ಥೆಗಳು ಯಾವುವೆಂದರೆ ''ಮಿತಾಕ್ಷರ ಪದ್ಧತಿಯಲ್ಲಿರುವಂತೆ ಪುರುಷರಿಗೆ ಜನನದಿಂದ ಪ್ರಾಪ್ತವಾಗುವ ವಾರಸುದಾರಿಕೆ ಗಂಡು ಮಕ್ಕಳಿಗೆ ಹಾಗೂ ಮೃತನ ಗಂಡು ಮಕ್ಕಳ ವಿಧವೆಯರಿಗೆ ಆಸ್ತಿಯಲ್ಲಿ ಸಮಾನ ಪಾಲು, ಮರಣ ಶಾಸನ ರಹಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಗಂಡು ಮಕ್ಕಳ ಪಾಲಿನಲ್ಲಿ ಅರ್ಧಪಾಲು; ವಿಧವೆಯರಿಗೆ ಆಸ್ತಿಯ ಮೇಲೆ ನಿರುಪಾಧಿಕ ಹಕ್ಕು (ಸೀಮಿತ ಹಕ್ಕಿಗೆ ಬದಲಾಗಿ) ಏಕ ಪತ್ನಿತ್ವದ ಕಡ್ಡಾಯ ಹೇರಿಕೆ ಮತ್ತು ಕೆಲವು ಸಂದರ್ಭದಲ್ಲಿ ವಿವಾಹ ವಿಚ್ಛೇದನೆ ಪಡೆಯುವುದನ್ನು ಕಾನೂನುಬದ್ಧಗೊಳಿಸುವುದು ಇವು ಹಿಂದೂ ಸಂಹಿತೆಯಲ್ಲಿ ಅಳವಡಿಸಿದ ಮುಖ್ಯ ಅಂಶಗಳಾಗಿದ್ದವು.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೬೭) ಈ ಸಂಹಿತೆಗೆ ಅನೇಕ ಪರ - ವಿರೋಧ ಅಭಿಪ್ರಾಯಗಳು ವ್ಯಕ್ತವಾದವು. ಆದರೆ ಆಸ್ತಿ ಮತ್ತು ವಿವಾಹಗಳಿಗೆ ಸಂಬಂಧಿಸಿದಂತೆ ಮಾಡಲಾಗಿದ್ದ ಕೆಲವು ಉಪಬಂಧಗಳು ಮಹಿಳಾ ಪರ ಉಪಬಂಧಗಳಾಗಿವೆ ಎಂಬ ಕಾರಣಕ್ಕೆ ತೀವ್ರ ವಿರೋಧ ವ್ಯಕ್ತವಾಯಿತು. ಆದರೆ ವಾಸ್ತವವಾಗಿ ಮಹಿಳಾ ಪರವಾದವುಗಳಾಗಿರದೆ ಅವಳಿಗೆ ಸಂವಿಧಾನದ ಆಶಯದಂತೆ ನೀಡಬೇಕಾದ ಸಮಾನ ಸ್ಥಾನಮಾನ ಹಾಗೂ ಸಮಾನ ಅವಕಾಶಗಳಿಗಾಗಿ ಕಲ್ಪಿಸಲಾದ ಉಪಬಂಧಗಳಾಗಿದ್ದವು. ಎಲ್ಲಾ ವಿರೋಧಗಳ ಮಧ್ಯೆಯು ರಾವ್ ಸಮಿತಿ ಪರಿಷ್ಕೃತ ಕರಡು ಹಿಂದೂ ಸಂಹಿತೆಯನ್ನು ಸಲ್ಲಿಸಿತು. ಇದನ್ನು ೧೯೪೭ರ ಏಪ್ರಿಲ್‌ನಲ್ಲಿ ಶಾಸನ ಸಭೆಯಲ್ಲಿ ಮಂಡಿಸಲಾಗಿತ್ತು. ಸ್ವಾತಂತ್ರ್ಯ ನಂತರ ೧೯೪೮ರಲ್ಲಿ ಮತ್ತೆ ಇದೇ ರೀತಿ ಮಂಡಿಸಲಾಯಿತು. ಆಗ ಇದು ಗಾಢವಾದ ಚರ್ಚೆಯ ವಿಷಯವಾಯಿತು. ಸ್ವತಂತ್ರ ಭಾರತದ ಬಹುತೇಕ ಕಾಂಗ್ರೆಸ್ ನಾಯಕರು ಈ ವಿಧೇಯಕವನ್ನು ವಿರೋಧಿಸಿದರು. ಗೃಹಸಚಿವರಾಗಿದ್ದ ವಲ್ಲಭಬಾಯಿ ಪಟೇಲರು ಹಾಗೂ ರಾಷ್ಟ್ರಾಧ್ಯಕ್ಷರಾಗಿದ್ದ ರಾಜೇಂದ್ರ ಪ್ರಸಾದ ಅವರು ಸಹ ಈ ವಿಧೇಯಕಕ್ಕೆ ವಿರೋಧ ವ್ಯಕ್ತಪಡಿಸಿದ್ದರು.

ಈ ವಿರೋಧದ ಹಿನ್ನೆಲೆಯಲ್ಲಿ ಮಸೂದೆಯು ಅಂಗೀಕಾರವಾಗದೆ ಹಾಗೆಯೇ ಉಳಿಯಿತು. ಆಗಿನ ಪ್ರಧಾನ ಮಂತ್ರಿ ಆಗಿದ್ದ ಜವಾಹರಲಾಲ ನೆಹರು ಅವರು ಇದನ್ನು ಜಾರಿಗೊಳಿಸಬೇಕೆಂಬ ಇಚ್ಛೆ ಹೊಂದಿದ್ದರು. ಆದರೆ ಅದು ನೆರವೇರಲಿಲ್ಲ. ಅದಕ್ಕಾಗಿ ಅಂದಿನ ಕಾನೂನು ಸಚಿವರಾಗಿದ್ದ ಸಂವಿಧಾನ ಶಿಲ್ಪಿ ಬಿ.ಆರ್. ಅಂಬೇಡ್ಕರವರು ಸಂಸತ್ತಿನ ನಿಲುವನ್ನು ವಿರೋಧಿಸಿ ರಾಜೀನಾಮೆ ನೀಡಿದರು. ಆದರೂ ೧೯೫೧ರ ನಂತರ ಚುನಾವಣೆಯಲ್ಲಿ ವಿಜಯವನ್ನು ಹೊಂದಿದ ಕಾಂಗ್ರೆಸ್ ಬಲದಿಂದ ನೆಹರು ಆ ಮಸೂದೆಯನ್ನು ನಾಲ್ಕು ಪ್ರತ್ಯೇಕ ಶಾಸನಗಳಲ್ಲಿ ರೂಪಿಸಿದರು. ಇವುಗಳಲ್ಲಿ ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮ ಒಂದಾಗಿತ್ತು. ಉಳಿದ ಮೂರು ಶಾಸನಗಳು ಯಾವುವೆಂದರೆ, ಹಿಂದೂ ವಿವಾಹ ಅಧಿನಿಯಮ ೧೯೫೫, ಹಿಂದೂ ದತ್ತಕ ಮತ್ತು ಜೀವನ ನಿರ್ವಹಣಾ ಅಧಿನಿಯಮ ೧೯೫೬ ಮತ್ತು ಹಿಂದೂ ಅಪ್ರಾಪ್ತ ವಯಸ್ಕರು ಮತ್ತು ಪೋಷಕತ್ವ ಅಧಿನಿಯಮ ೧೯೫೬, ಈ ರೀತಿಯ ಹಿನ್ನೆಲೆಯ ಮೂಲಕ ಹಿಂದೂ ಉತ್ತರಾಧಿಕಾರ ಅಧಿನಿಯಮ ಜಾರಿಗೊಂಡಿತು.

ರಾಜಾರಾಮ ಮೋಹನರಾಯ ಅವರ ಹಾಗೆಯೇ ಅಂಬೇಡ್ಕರರು ಮಹಿಳಾ ಸುಧಾರಣಾ ಕಾರ್ಯಕ್ಕೆ ಕಾನೂನಿನ ಸ್ವರೂಪ ನೀಡಿದರು. ಆದರೆ ಇವರಿಬ್ಬರ ಮಾರ್ಗ ಭಿನ್ನವಾಗಿತ್ತು. ರಾಜಾರಾಮ ಮೋಹನರಾಯರು ಸಮಾಜದಲ್ಲಿ ಆಗುತ್ತಿರುವ ಶೋಷಣೆಯ ಕುರಿತು ಬ್ರಿಟೀಷರಿಗೆ ಮನವರಿಕೆ ಮಾಡಬೇಕಿತ್ತು. ಆದರೆ ಅಂಬೇಡ್ಕರರಿಗೆ ತಮ್ಮ ಶೋಷಿತ ನೆಲೆಯೇ ಅವರಿಗೊಂದು ಮುಖ್ಯವಾದ ವಿಚಾರವಾಗಿತ್ತು. ಸಮಾಜದಲ್ಲಿ ರೂಢಿಯಲ್ಲಿರುವ ಆಚರಣೆಗಳು, ಮೌಲ್ಯಗಳನ್ನು ಮುರಿಯಲು ಕಾನೂನಿನ ದಾರಿ ಹಿಡಿಯಬೇಕಾಯಿತು. ಮಹಿಳೆಯ ಸ್ವಾತಂತ್ರ್ಯವನ್ನು ಪ್ರತಿಪಾದಿಸಿದರೂ ಅಧೀನತೆಯನ್ನು ಮಾತ್ರ ತೊಡೆದು ಹಾಕಲಾಗಲಿಲ್ಲ. ಲಿಂಗ ಸಂಬಂಧಿ ಆಚರಣೆಗಳು, ಮೌಲ್ಯ, ಕಟ್ಟುಪಾಡುಗಳು ಅವರನ್ನು ತಾರತಮ್ಯಕ್ಕೆ ಒಳಪಡಿಸಿದವು. ಇದನ್ನು ನಾಶಮಾಡಲು ಸಾಧ್ಯವಾಗಲಿಲ್ಲ. ಬಾಲ್ಯವಿವಾಹವನ್ನು ನಿಷೇಧಿಸಿ ವಿಧವಾ ವಿವಾಹಕ್ಕೆ ಅವಕಾಶ ಕಲ್ಪಿಸಿದರು, ಅದನ್ನು ಮಾನ್ಯಮಾಡುವ ಉದಾರ ಮನೋಭಾವ ತಳೆಯಲಿಲ್ಲ. ಮಹಿಳೆಯರನ್ನು ಕೀಳಾಗಿ ಕಾಣುವ ಮನಸ್ಥಿತಿ ಹಾಗೆಯೇ ಉಳಿಯಿತು. ಮಹಿಳೆಯರಿಗೆ ನೀಡಿದ ಸ್ಥಾನಮಾನಗಳೆಲ್ಲ ಸರಕಾರಿ ಕಛೇರಿಗೆ ಮಾತ್ರ ಸೀಮಿತವಾದವು. ಭಾರತೀಯ ಪರಂಪರಾಗತ ಸಮಾಜದಲ್ಲಿ ಹೆಣ್ಣಿನ ಮೇಲೆ ಹೇರಲಾಗಿದ್ದ ಬಾಲ್ಯವಿವಾಹ, ಸತೀ ಪದ್ಧತಿ, ಬಹುಪತ್ನಿತ್ವ, ಪರದಾ ಪದ್ಧತಿ, ಆಸ್ತಿಯಿಂದ ವಂಚನೆ, ಇದಕ್ಕೆಲ್ಲ ಪುರುಷ ಪ್ರಧಾನವಾದ ಕುಟುಂಬ ವ್ಯವಸ್ಥೆಯೇ ಕಾರಣ ಎಂದು ತಿಳಿಯಲಾಯಿತು. ಇವುಗಳನ್ನು ನಿಷೇಧಿಸಲು ಕಾನೂನುಗಳನ್ನು ಜಾರಿಗೆ ತರುವ ಪ್ರಯತ್ನ ಮಾಡಲಾಯಿತು.

**೩.೧.೨. ವಸಾಹತೋತ್ತರ ಕಾಲಘಟ್ಟದಲ್ಲಿ**

ಸ್ವಾತಂತ್ರ್ಯ ನಂತರದ ಕಾಲಘಟ್ಟದಲ್ಲಿ ಭಾರತೀಯ ಸ್ತ್ರೀಯರಿಗೆ ವಿಮೋಚನಾ ಚಳುವಳಿಯ ಪ್ರಮುಖ ಘಟ್ಟವೆಂದು ಹೇಳಬಹುದು. ಸ್ವಾತಂತ್ರ್ಯ ದೊರೆತ ನಂತರ ಸಹಜವಾಗಿಯೇ ಏಕರೂಪದ ಸಿವಿಲ್ (Uniform Civil Code) ಸಂಹಿತೆ ಜಾರಿಗೆ ಬರಬೇಕಾಗಿತ್ತು. ಆದರೆ ದೇಶದ ರಾಜಕೀಯ ನಾಯಕರು ವೈಯಕ್ತಿಕ ವಿಷಯಗಳಿಗೆ ಸಂಬಂಧಿಸಿದಂತೆ ಮತೀಯ ಕಾನೂನುಗಳನ್ನೇ (Personal laws)ಮುಂದುವರೆಸಲು ನಿರ್ಧರಿಸಿದರು. ಸ್ವಾತಂತ್ರ್ಯ ನಂತರ ಹಿಂದೂ ಮಹಿಳೆಗೆ ಸಂಬಂಧಿಸಿದಂತೆ ಹಲವಾರು ಕಾನೂನಿನ ತಿದ್ದುಪಡಿಗಳಾದರೂ ಉಳಿದ ಮತೀಯ ಕಾನೂನುಗಳಲ್ಲಿ ಏನು ಬದಲಾವಣೆ ಆಗಲಿಲ್ಲ.

**ಎ). ಸಂವಿಧಾನದಲ್ಲಿ**

೧೯೫೬ರಲ್ಲಿ ಹಿಂದೂ ಉತ್ತರಾಧಿಕಾರ ಅಧಿನಿಯಮವನ್ನು ಜಾರಿಗೊಳಿಸುವ ಮೂಲಕ ಸ್ತ್ರೀಯರ ವಾರಸುದಾರಿಕೆ ಹಾಗೂ ಆಸ್ತಿಹಕ್ಕುಗಳಲ್ಲಿ ಕೆಲವು ಪ್ರಗತಿಪರ ಬದಲಾವಣೆಗಳನ್ನು ತರಲಾಯಿತು.

೧. ಸ್ವತಂತ್ರ ಪೂರ್ವ ಕಾಲದಲ್ಲಿ ಪಿತ್ರಾರ್ಜಿತ ಆಸ್ತಿಗೆ ಸಂಬಂಧಿಸಿದಂತೆ ಹಿಂದೂಗಳು ಎರಡು ಬೇರೆ ಬೇರೆ ಕಾನೂನುಗಳನ್ನು ಅನುಸರಿಸುತ್ತಿದ್ದರು. ಅವೆಂದರೆ 'ಮಿತಾಕ್ಷರ' ಮತ್ತು 'ದಾಯಭಾಗ'. ಈ ಎರಡು ಪದ್ಧತಿಗಳ ನಡುವೆ ಒಂದು ಮೂಲಭೂತ ವ್ಯತ್ಯಾಸವಿದೆ. ''ಮಿತಾಕ್ಷರ'ದ ಪ್ರಕಾರ - ಒಬ್ಬ ಹಿಂದೂವಿನ ಆಸ್ತಿ ಅವನ ವ್ಯಕ್ತಿಗತ ಆಸ್ತಿಯಲ್ಲ. ಅದು 'ಕೂಡು ಆಸ್ತಿ', ಅದರಲ್ಲಿ ತಂದೆ, ಮಗ, ಮೊಮ್ಮಗ ಮತ್ತು ಮರಿಮಗ ಇವರೆಲ್ಲರ ಸಹಭಾಗಿತ್ವವಿದೆ. ಈ ಎಲ್ಲರಿಗೂ ಆ ಆಸ್ತಿಯಲ್ಲಿ ಆಜನ್ಮಸಿದ್ಧ ಹಕ್ಕಿದೆ. ಈ ಸಹಭಾಗಿತ್ವದ ಯಾವನೇ ಒಬ್ಬ ಸದಸ್ಯನು ಮೃತಪಟ್ಟರೆ ಅವನ ಭಾಗದ ಆಸ್ತಿಯು ಉಳಿದ ಭಾಗೀದಾರರಿಗೆ ಸೇರುತ್ತದೆಯೇ ಹೊರತಾಗಿ ಮೃತನ ವಾರಸುದಾರರಿಗಲ್ಲ. ಪ್ರಸ್ತುತ ಮಸೂದೆಯಲ್ಲಿರುವ ಹಿಂದೂ ಮಸೂದೆಯು 'ದಾಯಭಾಗ' ಪದ್ಧತಿಯನ್ನು ಅಳವಡಿಸಿಕೊಳ್ಳುತ್ತದೆ. 'ದಾಯಭಾಗದ' ಪ್ರಕಾರ- ಮೃತ ಭಾಗಿದಾರನ ವಾರಸುದಾರನು ಆ ಆಸ್ತಿಯನ್ನು ತನ್ನ

ಸ್ವಂತದ ಆಸ್ತಿಯನ್ನಾಗಿ ಪಡೆಯುತ್ತಾನೆ; ತನ್ನ ಅಪೇಕ್ಷೆಗೆ ತಕ್ಕಂತೆ ಅದನ್ನು ಉಡುಗೊರೆಯಾಗಿ ನೀಡಿಯೋ, ಉಯಿಲು ಬರೆದೋ, ಅಥವಾ ಬೇರೆಯಾವುದೇ ರೀತಿಯಲ್ಲಿ ವಿಲೇವಾರಿ ಮಾಡಲು ಸಂಪೂರ್ಣ ಹಕ್ಕನ್ನು ಪಡೆಯುತ್ತಾನೆ.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೪, ೫)

ಅಂಬೇಡ್ಕರವರು ಸಂವಿಧಾನದಲ್ಲಿ ಈ ಎರಡು ಪದ್ಧತಿಗಳ ಕುರಿತು ಪ್ರಸ್ತಾಪಿಸಿ ಮಿತಾಕ್ಷರ ಪದ್ಧತಿಯನ್ನು ಅನುಸರಿಸುವ ಕ್ಷೇತ್ರಕ್ಕೆ ದಾಯಭಾಗ ಪದ್ಧತಿಯ ನಿಯಮವನ್ನು ವಿಸ್ತರಿಸಿ ಪಿತ್ರಾರ್ಜಿತ ಕಾನೂನನ್ನು ಸಾರ್ವತ್ರೀಕರಿಸಬೇಕೆಂದು ಪ್ರಸ್ತುತ ಮಸೂದೆಯಲ್ಲಿ ಬದಲಾವಣೆಯನ್ನು ತಂದರು.

೨. ಆಸ್ತಿಯ ಉತ್ತರಾಧಿಕಾರಿಗಳ ಅನುಕ್ರಮ ಕುರಿತು ನೋಡಿದರೆ ಇಲ್ಲಿಯೂ ಕೂಡ 'ಮಿತಾಕ್ಷರ' ಪದ್ಧತಿಗೂ ಮತ್ತು 'ದಾಯಭಾಗ' ಪದ್ಧತಿಗೂ ವ್ಯತ್ಯಾಸವಿದೆ. ''ಮಿತಾಕ್ಷರ ಪದ್ಧತಿಯ ಪ್ರಕಾರ - ಪಿತೃವಂಶಜರಿಗೆ (ಜ್ಞಾತಿಗಳಿಗೆ) ಮೃತನ ರಕ್ತಸಂಬಂಧಿಗಳಿಗಿಂತ ಹೆಚ್ಚಿನ ಪ್ರಾಮುಖ್ಯವಿದೆ; 'ದಾಯಭಾಗ'ದಲ್ಲಿ ವಾರಸುದಾರಿಕೆಯ ಆಧಾರವು ಮೃತನ ರಕ್ತ ಸಂಬಂಧಿಗಳಿರಬೇಕೆಂಬುದೇ ಹೊರತು ಪಿತೃವಂಶಜರು ಅಥವಾ ಜ್ಞಾತಿಗಳು ಎಂಬ ಭೇದ ಅಲ್ಲಿ ಬರುವುದಿಲ್ಲ.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೫) ಈ ಉತ್ತರಾಧಿಕಾರ ಪದ್ಧತಿಯಲ್ಲಿ ಮಿತಾಕ್ಷರ ಪದ್ಧತಿಯ ಬದಲು ದಾಯಭಾಗ ಪದ್ಧತಿಯ ನಿಯಮವನ್ನು ಅನುಸರಿಸಬೇಕೆಂದು ನಿಯಮವನ್ನು ರೂಪಿಸಲಾಗಿದೆ. ಸ್ವತಂತ್ರ ಪೂರ್ವದ ಕಾನೂನುಗಳಲ್ಲಿ ಪತಿಯು ಮೃತನಾದರೆ ಆ ಆಸ್ತಿಯ ಉತ್ತರಾಧಿಕಾರಿಗಳು ಪತಿಯ ಅಣ್ಣ ತಮ್ಮಂದಿರಾಗುತ್ತಿದ್ದರು. ಮೃತನ ವಿಧವೆ ಕೇವಲ ಆ ಆಸ್ತಿಯನ್ನು ಅನುಭವಿಸಬಹುದಾಗಿತ್ತು ಹೊರತಾಗಿ ಉತ್ತರಾಧಿಕಾರ ಹೊಂದುವಂತಿರಲಿಲ್ಲ. ಸಂವಿಧಾನದ ಮೂಲಕ ಈ ಬದಲಾವಣೆಯನ್ನು ಮಾಡಿರುವುದರಿಂದ ಮಹಿಳೆಯು ಆಸ್ತಿಯಲ್ಲಿ ಹಕ್ಕುದಾರಳಾದಳು.

೩. ಮೃತ ಹಿಂದೂವಿನ ಆಸ್ತಿಗೆ ವಾರಸುದಾರಿಕೆಯ ಅನುಕ್ರಮದಲ್ಲಿ ಸಾಮಾನ್ಯ ವ್ಯತ್ಯಾಸವನ್ನು ಮಾಡುವುದರ ಜೊತೆಗೆ ಮಸೂದೆಯಲ್ಲಿ ನಾಲ್ಕು ಬದಲಾವಣೆಯನ್ನು ತರಲು ಬಯಸಿದರು. ಅವು ಇಂತಿವೆ,

''೧. ವಿಧವೆ ಪತ್ನಿ, ಮಗಳು, ಮೊದಲೇ ಮೃತಪಟ್ಟಿದ್ದ ಮಗನ ವಿಧವೆ ಇವರೆಲ್ಲರಿಗೂ ಪಿತ್ರಾರ್ಜಿತದ ವಿಷಯದಲ್ಲಿ ಸಮಾನ ಮಟ್ಟವನ್ನು ಕಲ್ಪಿಸಲಾಗಿದೆ. ಅದರ ಜೊತೆಗೆ ಮಗಳಿಗೆ ಕೂಡ ತಂದೆಯ ಆಸ್ತಿಯಲ್ಲಿ ಒಂದು ಪಾಲನ್ನು ಕೊಡಲಾಗಿದೆ; ಆಕೆಯ ಪಾಲು ಮಗನ ಪಾಲಿನ ಅರ್ಧ ಎಂದು ವಿಧಿಸಲಾಗಿದೆ. ಮತ್ತೆ ಇಲ್ಲಿ ಪ್ರಸ್ತುತ ಮಸೂದೆಯು ಹೆಣ್ಣು ವಾರಸುದಾರರಿಗೆ ಸಂಬಂಧಿಸಿದಂತೆ ಮಾಡಲು ಬಯಸುವ ಒಂದೇ ಒಂದು ಬದಲಾವಣೆ ಮಗಳಿಗೆ ಸೀಮಿತಗೊಂಡಿದೆ. ಇತರ ಸ್ತ್ರೀ ವಾರಸುದಾರರ ಹಕ್ಕುಗಳನ್ನು, ಹಿಂದೂ ವಿಮೆನ್ಸ್ ರೈಟ್ ಟು ಪ್ರಾಪರ್ಟಿ ಆಕ್ಟ್ ೧೯೩೭ ಶಾಸನದಲ್ಲಿ ಪುರಸ್ಕರಿಸಲಾಗಿದೆ.

೨. ಸ್ತ್ರೀ ವಾರಸುದಾರರಿಗೆ ಸಂಬಂಧಿಸಿದಂತೆ 'ಮಿತಾಕ್ಷರ'ದಲ್ಲಾಗಲಿ 'ದಾಯಭಾಗ'ದಲ್ಲಾಗಲಿ ಹೇಳಿರುವುದಕ್ಕಿಂತ ಹೆಚ್ಚು ಸಂಖ್ಯೆಯ ಸ್ತ್ರೀ ವಾರಸುದಾರರನ್ನು ಗುರುತಿಸಲಾಗಿದೆ.

೩. ಹಳೆಯ ಕಾನೂನಿನಲ್ಲಿ 'ಮಿತಾಕ್ಷರ'ವಾಗಲಿ 'ದಾಯಭಾಗ'ವಾಗಲಿ ಸ್ತ್ರೀ ವಾರಸುದಾರರುಗಳ ವಿಷಯದಲ್ಲಿ ತಾರತಮ್ಯ ಮಾಡಲಾಗಿತ್ತು. ವ್ಯಕ್ತಿಯು ಮೃತನಾದಾಗ ಅವನಿಗೆ ಸಂಬಂಧಿಸಿದ ಸ್ತ್ರೀಯು ಶ್ರೀಮಂತಳೆ ಅಥವಾ ಬಡವಳೆ, ಅವಳು ವಿವಾಹಿತಗಳಾಗಿದ್ದಾಳೆ ಅಥವಾ ಅವಿವಾಹಿತಳೆ, ಅವಳಿಗೆ ಸಂತಾನವಿದೆಯೇ ಅಥವಾ ಇಲ್ಲವೇ ಇತ್ಯಾದಿ. ಪಕ್ಷಪಾತಕ್ಕೆ ಎಡೆಮಾಡುವ ಈ ಎಲ್ಲ ಪರಿಗಣನೆಗಳನ್ನು ಪ್ರಸ್ತುತ ಮಸೂದೆಯು ರದ್ದುಪಡಿಸುತ್ತದೆ.

೪. ದಾಯಭಾಗದಲ್ಲಿನ ಪಿತ್ರಾರ್ಜಿತದ ನಿಯಮಕ್ಕೆ ಸಂಬಂಧಿಸಿದೆ. ದಾಯಭಾಗದಲ್ಲಿ ತಾಯಿಗಿಂತಲೂ ಮೊದಲು ತಂದೆಯು ಪಡೆಯುತ್ತಾನೆ. ಪ್ರಸ್ತುತ ಮಸೂದೆಯಲ್ಲಿ ಈ ಸ್ಥಿತಿಯನ್ನು ಬದಲಾಯಿಸಿ ತಂದೆಗಿಂತ ಮೊದಲು ತಾಯಿ ಪಡೆಯುವಂತೆ ಮಾಡಲಾಗಿದೆ.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೫, ೬) ಮೃತ ಹಿಂದೂ ಪುರುಷನ ವಾರಸುದಾರಿಕೆಯ ಅನುಕ್ರಮಕ್ಕೆ ಸಂಬಂಧಿಸಿದಂತೆ ಈ ನಾಲ್ಕು ಬದಲಾವಣೆಗಳನ್ನು ಮಾಡಲಾಗಿದೆ. ಇಲ್ಲಿ ಮಹಿಳೆಯು ಒಬ್ಬ ವಾರಸುದಾರಳು ಎಂದು ಘೋಷಿಸುವುದರ ಆಧಾರದಿಂದ ಆಸ್ತಿಯನ್ನು ಪಡೆಯುತ್ತಾಳೆ. ಮತ್ತು ವಾರಸುದಾರಿಕೆಯ ಕ್ರಮದಲ್ಲಿ ಮಹಿಳೆಗೆ ಮೊದಲ ಆದ್ಯತೆಯನ್ನು ನೀಡಲಾಗಿದೆ.

ಉಯಿಲು ಬರೆಯದೆ ಇರುವಂಥ ಸಂದರ್ಭದಲ್ಲಿ ಸ್ತ್ರೀಯ ವಾರಸುದಾರಿಕೆಗೆ ಸಂಬಂಧಿಸಿದಂತೆ ಬದಲಾವಣೆ ಮಾಡಿದ್ದು, ಈಗಿರುವ ಹಿಂದೂ ಕಾನೂನಿನಲ್ಲಿ ಒಬ್ಬ ಹಿಂದೂ ಮಹಿಳೆಯ ಆಸ್ತಿಯು ಎರಡು ವರ್ಗಗಳಿಗೆ ಸೇರುತ್ತದೆ. ಒಂದು 'ಸ್ತ್ರೀಧನ' ಎಂದು, ಇನ್ನೊಂದು 'ಆ ಮಹಿಳೆಯ ಆಸ್ತಿ'. ಸ್ತ್ರೀಧನ ಕುರಿತು ಅಧ್ಯಾಯ ಎರಡರಲ್ಲಿ ವಿವರಿಸಲಾಗಿದೆ. ಇಲ್ಲಿ ಮಹಿಳೆಯ ಸ್ಥಿರ ಆಸ್ತಿಯಲ್ಲಿ ಆದ ಬದಲಾವಣೆ ಗಮನಿಸೋಣ.

**ಮಹಿಳೆಯ ಸ್ಥಿರ ಆಸ್ತಿ**

ಮಹಿಳೆಯು ಸ್ಥಿರ ಆಸ್ತಿ ಪಡೆದಿದ್ದರೆ ಅವಳು ಜೀವಿತಾವಧಿಯವರೆಗೆ ಮಾತ್ರ ಅದರ ಮೇಲೆ ಹಕ್ಕು ಉಳ್ಳವಳು ಎಂದು ಹಿಂದೂ ಕಾನೂನು ಹೇಳಿದೆ. ಅವಳು ಆಸ್ತಿಯಲ್ಲಿನ ಆದಾಯವನ್ನು ಅನುಭವಿಸಬೇಕಾಗಿತ್ತೆ ಹೊರತು, ಮೂಲ ಆಸ್ತಿಯನ್ನು ಮುಟ್ಟುವಂತಿರಲಿಲ್ಲ. ಮಹಿಳೆಯು ಮೃತಳಾದ ಮೇಲೆ ಆ ಆಸ್ತಿಯು ಮತ್ತೆ ಪತಿಯ ಅಣ್ಣ ತಮ್ಮಂದಿರಿಗೆ ಸೇರುತ್ತಿತ್ತು. ಆದುದರಿಂದ ಈ ಆಸ್ತಿಯ ಕಾನೂನಿನಲ್ಲೂ ಎರಡು ಬದಲಾವಣೆಗಳನ್ನು ಮಾಡಲಾಗಿದೆ. ಅವುಗಳಲ್ಲಿ ಮೊದಲನೆಯದು, ''ಸೀಮಿತ ಸ್ಥಿರಾಸ್ತಿಯನ್ನು ಪರಿಪೂರ್ಣ ಸ್ಥಿರಾಸ್ತಿಯನ್ನಾಗಿ ಪರಿವರ್ತಿಸುತ್ತದೆ. ಒಬ್ಬ ಪುರುಷನು ಪಿತ್ರಾರ್ಜಿತ ಆಸ್ತಿಯನ್ನು ಪಡೆದಾಗ ಅದರ ಪರಿಪೂರ್ಣ ಹಕ್ಕನ್ನು ಪಡೆದ ಹಾಗೆ. ಇನ್ನು ಎರಡನೆಯದು, ವಿಧವೆಯ ಮರಣಾನಂತರ ವಾರಸುದಾರರಿಗೆ ಆಕೆಯ ಮೇಲಿರುವ ಹಕ್ಕನ್ನು ರದ್ದುಪಡಿಸುತ್ತದೆ.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೭) ಈ ರೀತಿ ಬದಲಾವಣೆ ಮಾಡುವುದರಿಂದ ಮಹಿಳೆಯು ಸೀಮಿತ ಹಕ್ಕಿನಿಂದ ಮುಕ್ತಳಾಗುವಂತಾಯಿತು.

ಪ್ರಸ್ತುತ ಮಸೂದೆಯಲ್ಲಿ ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯನ್ನು ಪಡೆಯಲು ಇರುವ ಹಕ್ಕುಗಳಿಗೆ ಅಧೀನವಾಗಿ ವರದಕ್ಷಿಣೆಯನ್ನು ಕೊಡಲಾಗುತ್ತದೆ. ವರದಕ್ಷಿಣೆಯಿಂದ ಅನೇಕ ಹಗರಣಗಳು ಆಗಿರುವುದನ್ನು ಕಾಣಬಹುದು. ಮದುವೆಯಾಗಿ ತಂದೆ - ತಾಯಿಗಳ ಮನೆಯಿಂದ ವರದಕ್ಷಿಣೆ ರೂಪದಲ್ಲಿ ಅಥವಾ ಸ್ತ್ರೀಧನ ಹಾಗೂ ಉಡುಗೊರೆ ಹೀಗೆ ಅನೇಕ ರೀತಿಯಲ್ಲಿ ಮಹಿಳೆಯು ಆಸ್ತಿಯನ್ನು ಪತಿಯಮನೆಗೆ ತರುವಳು ಆದರೆ, ಮಸೂದೆಯು ಅತ್ಯಂತ ಪ್ರಶಂಸನೀಯವಾದ ಒಂದು ಅವಕಾಶವನ್ನು ಇಲ್ಲಿ ಕಲ್ಪಿಸಿದೆ. ಅದು ''ಮದುವೆಯ ಸಂದರ್ಭದಲ್ಲಿ ಒಬ್ಬ ವಧುವಿಗೆ ವರದಕ್ಷಿಣೆಗಾಗಿ ಕೊಟ್ಟ ಈ ಆಸ್ತಿಯನ್ನು ಒಂದು ಟ್ರಸ್ಟ್ ಆಸ್ತಿಯನ್ನಾಗಿ ಪರಿಗಣಿಸಲಾಗಿದೆ. ಅದರ ಬಳಕೆಯು ಆಕೆಯ ವಿದ್ಯಾಭ್ಯಾಸ ಮುಗಿದು ೧೮ ವರ್ಷವಾಗುತ್ತಲೇ ಆ ಆಸ್ತಿಯ ಮೇಲೆ ಅವಳು ತನ್ನ ಹಕ್ಕನ್ನು ಪಡೆಯುತ್ತಾಳೆ.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೮) ಇದರಿಂದ ಆಕೆಯ ಪತಿಗಾಗಲೀ ಅಥವಾ ಪತಿಯ ಮನೆಯವರಿಗಾಗಲೀ ಯಾವುದೇ ಲಾಭವಿರುವುದಿಲ್ಲ. ಅಲ್ಲದೆ ಆ ಆಸ್ತಿಯನ್ನು ಹಾಳುಮಾಡಿ ಅವಳನ್ನು ಜೀವನದುದ್ದಕ್ಕೂ ಅಸಹಾಯಕಳನ್ನಾಗಿ ಮಾಡುವ ಹಾಗಿಲ್ಲ.

ಇನ್ನು ಜೀವನಾಂಶಕ್ಕೆ ಸಂಬಂಧಿಸಿದಂತೆ ಇಲ್ಲಿ ಹೆಚ್ಚೇನು ಬದಲಾವಣೆಯಾಗಿಲ್ಲ. ''ಮೃತನ ಅವಲಂಬಿಗಳು, ಅವನ ಆಸ್ತಿಯನ್ನು ಇಷ್ಟಪತ್ರವಿಲ್ಲದ ಸಂದರ್ಭದ ನಿಯಮಗಳ ಪ್ರಕಾರವೋ ಅಥವಾ ಉಯಿಲಿನ ಪ್ರಕಾರ ಆಸ್ತಿಯನ್ನು ಪಡೆದಿದ್ದರೆ ಅವರಿಂದ ತಮ್ಮ ಜೀವನಾಂಶವನ್ನು ಕೇಳುವ ಹಕ್ಕು ಬರುತ್ತದೆ ಎಂದು ಮಸೂದೆಯು ವಿಧಿಸುತ್ತದೆ.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೮) ಜೀವನಾಂಶವನ್ನು ಕೊಡುವ ಕರ್ತವ್ಯ ಮೃತನ ಸ್ಥಿರಾಸ್ತಿಯನ್ನು ಪಡೆಯುವವರ ಮೇಲೆ ನಿಲ್ಲುತ್ತದೆ. ಈ ರೀತಿ ಸಂವಿಧಾನದಲ್ಲಿ ಮೊದಲಿಗಿರುವ ಕಾನೂನುಗಳ ತಿದ್ದುಪಡಿಯ ಮೂಲಕ ಮಹಿಳೆಯರಿಗೆ ಸಂವಿಧಾನಿಕ ಸಮಾನತೆಯನ್ನು ನೀಡಿದ ನಂತರ ೧೯೫೬ರಲ್ಲಿ ಹಿಂದೂ ಉತ್ತರಾಧಿಕಾರ ಕಾಯ್ದೆಯನ್ನು ಜಾರಿಗೆ ತರಲಾಯಿತು.

**ಬಿ). ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮ**

೧೯೫೬ರಲ್ಲಿ ಜಾರಿಗೆ ಬಂದ ಹಿಂದೂ ಉತ್ತರಾಧಿಕಾರ ಅಧಿನಿಯಮವು 'ಜಮ್ಮುಕಾಶ್ಮೀರ' ರಾಜ್ಯವನ್ನುಳಿದು ಭಾರತದ ಉಳಿದೆಲ್ಲ ಪ್ರದೇಶಗಳಿಗೆ ಅನ್ವಯಿಸುತ್ತದೆ. 'ಹಿಂದೂ' ಎನ್ನುವಲ್ಲಿ ಸಿಖ್ಖರು, ಜೈನರು ಹಾಗೂ ಬೌದ್ಧಧರ್ಮಿಯರು ಸೇರುತ್ತಾರೆ. ಈ ಕಾನೂನು ಇದುವರೆಗೂ ಜಾರಿಗೆ ಬಂದಿರುವ ಆಸ್ತಿ ಹಕ್ಕುಗಳ ಕಾನೂನಿನಲ್ಲಿ ಸಾಕಷ್ಟು ಸುಧಾರಣೆಗಳನ್ನು ಮಾಡಿತು. ಈ ಕಾಯ್ದೆಯು ಜಾರಿಗೆ ಬರುವ ಮೊದಲು ಮಹಿಳೆಯರು ಸೀಮಿತವಾದ ಉತ್ತರಾಧಿಕಾರದ ಹಕ್ಕು ಹೊಂದಿದ್ದರು. ವಿಧವೆಯಾದವಳು ತನ್ನ ಜೀವಿತಾವಧಿಯವರೆಗೆ ಮಾತ್ರ ತನ್ನ ಗಂಡನ ಆಸ್ತಿಯನ್ನು ಅನುಭವಿಸಬಹುದಾಗಿತ್ತು, ಆದರೆ ಮಾರುವ ಹಕ್ಕು ಹೊಂದಿರಲಿಲ್ಲ. ಮತ್ತು ಮಹಿಳೆಗೆ ಉತ್ತರಾಧಿಕಾರದ ಹಕ್ಕು ಇರಲಿಲ್ಲ. ಈ ಅಧಿನಿಯಮದಲ್ಲಿ ಉತ್ತರಾಧಿಕಾರದ ಹಕ್ಕನ್ನು ಬದಲಾಯಿಸಿ ಮಹಿಳೆಯರಿಗೆ ಆಸ್ತಿಹಕ್ಕನ್ನು ನೀಡಿತು. ಈ ಅಧಿನಿಯಮದಲ್ಲಿ ಮಹಿಳೆಗೆ ತನ್ನ ಪತಿಯಿಂದ ಪಡೆದ ಆಸ್ತಿಯ ಮೇಲೆ ಸಂಪೂರ್ಣ ಒಡೆತನದ ಹಕ್ಕು ನೀಡಲಾಗಿದೆ. ಮತ್ತು ಹೆಣ್ಣು ಮಕ್ಕಳಿಗೆ ತಮ್ಮ ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಸಮಪಾಲು ಪಡೆಯುವ ಹಕ್ಕನ್ನು ನೀಡಿದೆ. ಕುಟುಂಬದ ವ್ಯಕ್ತಿಯು ಉಯಿಲು ಬರೆಯದೆ ಮೃತನಾದರೆ ಅವನ ಸ್ವಯಾರ್ಜಿತ ಆಸ್ತಿಯಲ್ಲಿ ಗಂಡು ಮಕ್ಕಳು, ಹೆಣ್ಣು ಮಕ್ಕಳು, ವಿಧವೆ ಹಾಗೂ ತಾಯಿ ಸಮಪಾಲು ಪಡೆಯುತ್ತಾರೆ.

**ಮರಣ ಹೊಂದಿದ ಹಿಂದೂ ಪುರುಷನ ಆಸ್ತಿಯ ವಾರಸುದಾರಿಕೆ**

೧೯೫೬ರ ಕಾಯ್ದೆಯ ಪ್ರಕಾರ ಕುಟುಂಬದಲ್ಲಿ ವ್ಯಕ್ತಿಯು ತನ್ನ ಸ್ವಯಾರ್ಜಿತ ಆಸ್ತಿಯನ್ನು ಉಯಿಲು ಬರೆಯದೆ ಮೃತನಾದರೆ ಆತನ ಆಸ್ತಿಯ ವಾರಸುದಾರಿಕೆಯ ಅನುಕ್ರಮವು ಹೀಗಿದೆ.

''೧. ಪ್ರಥಮ ವರ್ಗದ ವಾರಸುದಾರರು.

೨. ದ್ವಿತೀಯ ವರ್ಗದ ವಾರಸುದಾರರು.

೩. ಗೋತ್ರಜರು (ಪುರುಷರ ಮೂಲಕವೇ ಸಂಬಂಧಿಸಿದವರು)

೪. ಬಂಧುಗಳು (ಸ್ತ್ರೀಯರ ಮೂಲಕವೇ ಸಂಬಂಧಿಸಿದವರು).'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೫೦)

**೧.ಪ್ರಥಮ ದರ್ಜೆಯ ವಾರಸುದಾರರು**

ಪ್ರಥಮದರ್ಜೆಯ ವಾರಸುದಾರರಲ್ಲಿ ೮ ಜನ ಸ್ತ್ರೀಯರು ಮತ್ತು ೪ ಜನ ಪುರುಷರು ಒಟ್ಟು ೧೨ ಜನ ಏಕಕಾಲದಲ್ಲಿ ಮೃತ ವ್ಯಕ್ತಿಯ ಆಸ್ತಿಯನ್ನು ಪಡೆದುಕೊಳ್ಳುವ ಹಕ್ಕನ್ನು ಹೊಂದಿರುತ್ತಾರೆ. ಅವರಲ್ಲಿ

''ಸ್ತ್ರೀ ಉತ್ತರಾಧಿಕಾರಿಗಳು - ತಾಯಿ, ಪತ್ನಿ, ಪುತ್ರಿ, ಪೌತ್ರಿ (ಮಗನ ಮಗಳು), ಪ್ರಪೌತ್ರಿ (ಮಗನ ಮಗನ ಮಗಳು), ಪುತ್ರಿಯ ಪುತ್ರಿ, ಪುತ್ರನ ವಿಧವೆ, ಪೌತ್ರನ (ಮಗನ ಮಗ) ವಿಧವೆ-ಎಂಟು ಮಂದಿ.

ಪುರುಷ ಉತ್ತರಾಧಿಕಾರಿಗಳು - ಪುತ್ರ, ಪೌತ್ರ, ಪ್ರಪೌತ್ರ, ಪುತ್ರಿಕಾ ಪುತ್ರ (ಮಗಳ ಮಗ) ನಾಲ್ಕು ಮಂದಿ.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೫೧)

ಪ್ರಥಮ ವರ್ಗದ ವಾರಸುದಾರರಲ್ಲಿ ಯಾರು ಇಲ್ಲದಿದ್ದಾಗ ಮಾತ್ರ ದ್ವಿತೀಯ ವರ್ಗದ ವಾರಸುದಾರರಿಗೆ ಆಸ್ತಿಯಲ್ಲಿ ಪಾಲು ದೊರೆಯುತ್ತದೆ.

**೨. ದ್ವಿತೀಯ ವರ್ಗದ ವಾರಸುದಾರರು**

ದ್ವಿತೀಯ ವರ್ಗದ ವಾರಸುದಾರರ ಪಟ್ಟಿಯನ್ನು ಒಂಬತ್ತು ಉಪವರ್ಗಗಳಾಗಿ ವಿಂಗಡಿಸಲಾಗಿದೆ. ಒಂದನೆ ಉಪವರ್ಗದವರು, ಎರಡನೆ ಉಪವರ್ಗದವರು, ಹೀಗೆ ಅನುಕ್ರಮವಾಗಿ ಇಲ್ಲಿ ಆಸ್ತಿಹಕ್ಕು ಪಡೆಯುತ್ತಾರೆ. ಈ ವರ್ಗದ ವಾರಸುದಾರರು ಪ್ರಥಮ ವರ್ಗದವರ ಹಾಗೆ ಇಲ್ಲಿ ಒಟ್ಟಿಗೆ ಅಧಿಕಾರ ಪಡೆಯುವುದಿಲ್ಲ. ಮೊದಲನೆಯ ವರ್ಗದವರು ಇರದಿದ್ದರೆ ಎರಡನೆ ವರ್ಗದವರು ಪಡೆಯುವರು. ಹೀಗೆ ಅನುಕ್ರಮವಾಗಿ ಆಸ್ತಿ ಪಡೆಯಲಾಗುವುದು.

''೧. ಮೃತ ವ್ಯಕ್ತಿಯ ತಂದೆ.



೨. ಮಗನ ಮಗಳ ಮಗ, ಮಗನ ಮಗಳ ಮಗಳು, ಸಹೋದರ, ಸಹೋದರಿಯರು.

೩. ಮಗಳ ಮಗನ ಮಗ ಮತ್ತು ಮಗಳು, ಮಗಳ ಮಗಳ ಮಗ ಮತ್ತು ಮಗಳು.

೪. ಸಹೋದರನ ಮಗ ಮತ್ತು ಮಗಳು, ಸಹೋದರಿಯ ಮಗ ಮತ್ತು ಮಗಳು.

೫. ತಂದೆಯ ತಂದೆ, ತಂದೆಯ ತಾಯಿ.

೬. ತಂದೆಯ ವಿಧವೆ, ಸಹೋದರನ ವಿಧವೆ. (ತಂದೆಯ ವಿಧವೆ ಎಂದರೆ ಬಲತಾಯಿ).

೭. ತಾಯಿಯ ಸಹೋದರ, ತಂದೆಯ ಸಹೋದರಿ.

೮. ತಾಯಿಯ ತಂದೆ, ತಾಯಿಯ ತಾಯಿ.

೯. ತಾಯಿಯ ಸಹೋದರ, ತಾಯಿಯ ಸಹೋದರಿ.

**೩. ಗೋತ್ರಜರು**

ಪ್ರಥಮ ಹಾಗೂ ದ್ವಿತಿಯ ವರ್ಗಗಳ ವಾರಸುದಾರರು ಇಲ್ಲದಿದ್ದಲ್ಲಿ ಮೃತ ವ್ಯಕ್ತಿಯ ಗೋತ್ರಜರು ಎಂದರೆ ಪುರುಷ ವ್ಯಕ್ತಿಯ ಮೂಲಕ ಸಂಬಂಧಿಸಿದವರು ಆಸ್ತಿ ಪಡೆಯಲು ಹಕ್ಕುದಾರರಾಗುತ್ತಾರೆ.

**೪. ಬಂಧುಗಳು**

ಒಬ್ಬಳು ಅಥವಾ ಹೆಚ್ಚು ಸ್ತ್ರೀಯರ ಮೂಲಕ ಸಂಬಂಧಿಸಿದ ವ್ಯಕ್ತಿ ಬಂಧು ಎನಿಸಿಕೊಳ್ಳುತ್ತಾನೆ. ಗೋತ್ರಜರಿಲ್ಲದಿದ್ದಾಗ ಬಂಧುಗಳು ಮೃತ ವ್ಯಕ್ತಿಯ ಆಸ್ತಿ ಪಡೆಯಲು ಹಕ್ಕು ಹೊಂದಿರುತ್ತಾರೆ.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೫೨, ೧೫೪)

ಈ ವಾರಸುದಾರಿಕೆಯಲ್ಲಿ ಮೃತ ವ್ಯಕ್ತಿಯ ತಾಯಿಯು ಪ್ರಥಮ ವರ್ಗದ ವಾರಸುದಾರರಲ್ಲಿ ಬರುತ್ತಾಳೆ. ಆದರೆ ತಂದೆಯು ಎರಡನೆ ವರ್ಗದ ವಾರಸುದಾರರಲ್ಲಿ ಬರುತ್ತಾನೆ. ತಾಯಿ, ವಿಧವೆ ಪತ್ನಿ ಮತ್ತು ಮಕ್ಕಳು ಈ

ಆಸ್ತಿಯಲ್ಲಿ ಸಮಪಾಲು ಪಡೆಯುತ್ತಾರೆ. ಇಲ್ಲಿ ಮಹಿಳೆಗೆ ಅನುಕೂಲಕರವಾದ ರೀತಿಯಲ್ಲಿ ಕಾನೂನು ರೂಪಿಸಿದೆ. ಕುಟುಂಬದಲ್ಲಿ ತಾಯಿ ವಿಧವೆಯಾಗಿದ್ದರೆ ಅವಳ ಜವಾಬ್ದಾರಿ ಅವಳ ಮಗನದಾಗಿರುತ್ತದೆ. ಆದರೆ ತಾಯಿಗಿಂತ ಮೊದಲೇ ಮಗನು ಮೃತನಾದರೆ, ತಾಯಿಯು ವಿಧವೆಯಾಗಿರಲಿ ಅಥವಾ ಆಗಿರದೆ ಇರಲಿ ಕಾನೂನು ಅವಳಿಗೆ ಆರ್ಥಿಕ ಭದ್ರತೆಯನ್ನು ಒದಗಿಸಿದೆ. ಇಲ್ಲಿ ತಂದೆಗಿಂತ ತಾಯಿಗೆ ಮೊದಲ ಆದ್ಯತೆ ನೀಡಲಾಗಿದೆ. ಇದು ಮರಣ ಹೊಂದಿದ ಪುರುಷನ ಆಸ್ತಿಯ ವಾರಸುದಾರಿಕೆಯಾದರೆ ಮಹಿಳೆಯ ವಾರಸುದಾರಿಕೆ ಕ್ರಮ ಹೀಗಿದೆ.

**ಮರಣ ಹೊಂದಿದ ಹಿಂದೂ ಮಹಿಳೆಯ ಆಸ್ತಿಯ ವಾರಸುದಾರಿಕೆ**

೧೯೫೬ರ ಅಧಿನಿಯಮವು ೧೫ ಮತ್ತು ೧೬ನೇ ಪ್ರಕರಣದಲ್ಲಿ ಮಹಿಳೆಯ ಮರಣದ ನಂತರ ಅವಳ ಆಸ್ತಿಯ ಉತ್ತರಾಧಿಕಾರಿಯ ಅನುಕ್ರಮವನ್ನು ಹೀಗೆ ಕೊಡಲಾಗಿದೆ.

''೧. ಗಂಡು ಮಕ್ಕಳು, ಹೆಣ್ಣು ಮಕ್ಕಳು (ಮೃತ ಮಗನ ಅಥವಾ ಮಗಳ ಮಕ್ಕಳು) ಮತ್ತು ಪತಿ.

೨. ಪತಿಯ ವಾರಸುದಾರರು.

೩. ತಾಯಿ ಮತ್ತು ತಂದೆ.

೪. ತಂದೆಯ ವಾರಸುದಾರರು.

೫. ತಾಯಿಯ ವಾರಸುದಾರರು.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೫೪)

ಪುರುಷ ಮತ್ತು ಸ್ತ್ರೀಯರ ಆಸ್ತಿಯ ವಾರಸುದಾರಿಕೆಯ ಕ್ರಮವನ್ನು ಗಮನಿಸಿದಾಗ ಈ ವಾರಸುದಾರಿಕೆಯ ಕ್ರಮದಲ್ಲಿ ಮಹಿಳೆಗೆ ಪ್ರಥಮ ಆದ್ಯತೆ ನೀಡಿದರು ಕೂಡ ಪುರುಷ ಪ್ರಾಧಾನ್ಯತೆಯೇ ಅಧಿಕವಾಗಿ ಎದ್ದು ಕಾಣುತ್ತದೆ. ಹೀಗಾಗಿ ಇಲ್ಲಿ ಮಹಿಳೆಯ ಆರ್ಥಿಕ ಅವಲಂಬನೆಯು ಸ್ಪಷ್ಟವಾಗಿ ಕಾಣುವಂಥದ್ದಾಗಿದೆ. ಅಲ್ಲದೆ ಪುರುಷ ಮತ್ತು ಮಹಿಳೆಯ ವಾರಸುದಾರಿಕೆ ಕ್ರಮ ಬೇರೆ ಬೇರೆಯೇ ಆಗಿದೆ. ಮಹಿಳೆಯ ಆಸ್ತಿಯು ಮೊದಲು ಅವಳ ಮಕ್ಕಳು ಮತ್ತು ಪತಿ, ನಂತರ ಪತಿಯ ವಾರಸುದಾರರು ಇಲ್ಲದಿದ್ದಾಗ ತಂದೆಯ ವಾರಸುದಾರರು ಮತ್ತು ಕೊನೆಯದಾಗಿ ತಾಯಿಯ ವಾರಸುದಾರರಿಗೆ ಸೇರುತ್ತದೆ. ಇಲ್ಲಿ ಮೊದಲು ಮಕ್ಕಳಿಗೆ ಮತ್ತು ಪತಿಗೆ ಆದ್ಯತೆ ನೀಡಲಾಗಿದೆ. ಈ ಆದ್ಯತೆಯ ಮೂಲಕ ಅವಳ ಆಸ್ತಿಯನ್ನು ಅವಳ ಪತಿಯ ಕುಟುಂಬದಲ್ಲಿಯೇ ಇರುವಂತೆ ನೋಡಿಕೊಳ್ಳಲಾಗಿದೆ.

ಮಹಿಳೆಯಾದವಳು ತನ್ನ ತಂದೆಯ ಅಥವಾ ತಾಯಿಯಿಂದ ವಾರಸುದಾರಿಕೆಯಾಗಿ ಪಡೆದ ಯಾವುದೇ ಆಸ್ತಿ ಅವಳಿಗೆ ಮಗ ಅಥವಾ ಮಗಳಿಲ್ಲದಿದ್ದರೆ, ಅವಳ ಮರಣದ ನಂತರ ಆ ಆಸ್ತಿಯು ಅವಳ ತಂದೆಯ ವಾರಸುದಾರರಿಗೆ ಸೇರುತ್ತದೆ. ಪತಿ ಅಥವಾ ಮಾವನಿಂದ ಪಡೆದ ಆಸ್ತಿಯಾಗಿದ್ದರೆ ಅದು ಅವಳ ಪತಿಯ ವಾರಸುದಾರರಿಗೆ ಸೇರುತ್ತದೆ. ಇದು ಮಹಿಳೆಯು ವಾರಸುದಾರಿಕೆಯಿಂದ ಪಡೆದ ಆಸ್ತಿಗೆ ಮಾತ್ರ ಅನ್ವಯವಾಗುತ್ತದೆ. ಈ ವಾರಸುದಾರಿಕೆಯ ಮೂಲಕ ಮಹಿಳೆಯ ಕೈಯಲ್ಲಿರುವ ಆಸ್ತಿ ಪುರುಷ ವಾರಸುದಾರರಿಗೆ ಸೇರುತ್ತದೆ. ತಂದೆ ಇಲ್ಲವೆ ಪತಿಯ ಕುಟುಂಬಕ್ಕೆ ಸೇರುತ್ತದೆ. ಈ ಅಧಿನಿಯಮದಲ್ಲಿ ಮಹಿಳೆ ಮತ್ತು ಪುರುಷರಿಬ್ಬರೂ ಸಮಾನವಾಗಿ ಆಸ್ತಿಯ ಹಕ್ಕುಳ್ಳವರೆಂದು ಕಂಡರೂ ವಾಸ್ತವವಾಗಿ ಇದರ ಪರಿಣಾಮವೇ ಬೇರೆ. ಪುರುಷನು ತನ್ನ ಸಂಪೂರ್ಣ ಆಸ್ತಿಯನ್ನು ಉಯಿಲಿನ ಮೂಲಕ ತನ್ನ ಗಂಡುಮಕ್ಕಳಿಗೆ ಸೇರುವಂತೆ ಮಾಡಿ, ಹೆಣ್ಣು ಮಕ್ಕಳಿಗೆ ಆ ಆಸ್ತಿಯಲ್ಲಿ ಪಾಲು ಸಿಗದಂತೆಯೂ ಮಾಡಬಹುದು. ಹಾಗೆಯೇ ಇನ್ನೂ ಸಾಂಪ್ರದಾಯಿಕ ಉತ್ತರಾಧಿಕಾರ ಪದ್ಧತಿಯನ್ನು ಅನುಸರಿಸುತ್ತಿದ್ದ ಕುಟುಂಬಗಳಲ್ಲಿ ಮಹಿಳೆಯರು ಸಮಾನ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಮೊದಲಿನಿಂದಲೂ ಅವಿಭಕ್ತ

ಕುಟುಂಬಗಳು ಸಮಾಜದ ಕುಟುಂಬ ವ್ಯವಸ್ಥೆಯ ಘಟಕಗಳಾಗಿರುವುದರಿಂದ, ಕಾನೂನು ಪ್ರತಿಯೊಂದು ಹಿಂದೂ ಕುಟುಂಬವನ್ನು ಅವಿಭಕ್ತ ಕುಟುಂಬವೆಂದೇ ಪರಿಗಣಿಸುತ್ತಿತ್ತು. ಇಂಥ ಅವಿಭಕ್ತ ಕುಟುಂಬಗಳಿಗೆ ಸಂಬಂಧಿಸಿದ ವಾರಸುದಾರಿಕೆಯಲ್ಲಿ ಎರಡು ಪ್ರಕಾರದ ಹಿಂದೂ ಸಾಂಪ್ರದಾಯಿಕ ಕಾನೂನು ಪದ್ಧತಿಗಳಿದ್ದವು. 'ದಾಯಭಾಗ' ಮತ್ತು 'ಮಿತಾಕ್ಷರ' ಪದ್ಧತಿಯೆಂದು. 'ಮಿತಾಕ್ಷರ' ಪದ್ಧತಿಯಲ್ಲಿ ಕುಟುಂಬದ ವ್ಯವಹಾರಗಳನ್ನು ಪುರುಷನೆ ನೋಡಿಕೊಳ್ಳುತ್ತಾನೆ. ಇಲ್ಲಿ ಮಗ, ಮಗನ ಮಗ, ಮೊಮ್ಮಗನ ಮಗ ಇವರೆಲ್ಲರೂ ತಮ್ಮ ಹುಟ್ಟಿನಿಂದಲೇ ಈ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ಪಡೆದುಕೊಂಡಿದ್ದಾರೆ. ಇಲ್ಲಿ ಪುರುಷ ಪೀಳಿಗೆಯೇ ಮುಂದುವರೆಯುತ್ತದೆ. ಈ ಕುಟುಂಬದಲ್ಲಿ ಮಗಳು ದಾಯಾದಿಯಾಗಲು ಸಾಧ್ಯವಿಲ್ಲ. ಇಂತಹ ಕುಟುಂಬದ ಮೃತ ದಾಯಾದಿಯ ವಿಧವೆಯರು ಕೇವಲ ಜೀವನಾಂಶ ಮಾತ್ರ ಪಡೆಯುವ ಹಕ್ಕನ್ನು ಹೊಂದಿದ್ದರೂ ಉತ್ತರಾಧಿಕಾರ ಪಡೆಯುವ ಹಕ್ಕು ಹೊಂದಿರಲಿಲ್ಲ. ವಿಧವೆಯ ಪತಿ ತನ್ನ ಮರಣಕ್ಕಿಂತ ಮುಂಚೆ ಅವಿಭಕ್ತ ಕುಟುಂಬದಿಂದ ಬೇರೆಯಾಗಿದ್ದರೆ ಮಾತ್ರ ಅವಳು ತನ್ನ ಪತಿಯ ಆಸ್ತಿಯಲ್ಲಿ ಹಕ್ಕು ಹೊಂದಿರುತ್ತಿದ್ದಳು. ಈ ಪದ್ಧತಿಯು ೧೯೫೬ರ ಕಾಯ್ದೆ ಜಾರಿಗೆ ಬರುವವರೆಗೆ ಮಾತ್ರ ಇತ್ತು. ಆದರೆ 'ದಾಯಭಾಗ' ಪದ್ಧತಿಯಲ್ಲಿ ವಿಧವೆಯ ಹಕ್ಕುಗಳ ದೃಷ್ಟಿಯಿಂದ ಸ್ವಲ್ಪ ಉದಾರವಾಗಿದೆ. ಈ ಪದ್ಧತಿಯಲ್ಲಿ ಪತಿಯಾದವನು ತನ್ನ ಮರಣದ ಸಮಯದಲ್ಲಿಯೂ ಕೂಡ ಅವಿಭಕ್ತ ಕುಟುಂಬದಲ್ಲಿಯೇ ಉಳಿದಿದ್ದರೂ ಅವನ ವಿಧವೆಯು ಅವನ ಆಸ್ತಿಯಲ್ಲಿ ಪಾಲು ಪಡೆಯಲು ಹಕ್ಕುಳ್ಳವಳಾಗಿದ್ದಳು. ಆದರೆ ಅದು ಅವಳ ಜೀವಿತಾವಧಿಯವರೆಗೆ ಮಾತ್ರ ಸೀಮಿತವಾಗಿತ್ತು. ಅವಿಭಕ್ತ ಕುಟುಂಬದಲ್ಲಿ ಒಬ್ಬ ದಾಯಾದಿ ಮೃತ ಪಟ್ಟರೆ ಅವನ ಆಸ್ತಿ ಅವನ ವಾರಸುದಾರರಿಗೆ ಸೇರುತ್ತದೆಯೇ ಹೊರತು 'ಮಿತಾಕ್ಷರ' ಪದ್ಧತಿಯಂತೆ ಉಳಿದ ದಾಯಾದಿಗಳಿಗೆ ಸೇರುವುದಿಲ್ಲ. ಹೀಗಾಗಿ ಮಹಿಳೆಯು ಅವಿಭಕ್ತ ಕುಟುಂಬದಲ್ಲಿ ಆಸ್ತಿಯಿಂದ ವಂಚಿತಳಾಗುತ್ತಿದ್ದಳು.

ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ೧೯೩೭ರಲ್ಲಿ ಜಾರಿಗೆ ಬಂದಂತಹ ಹಿಂದೂ ಮಹಿಳೆಯರ ಆಸ್ತಿ ಹಕ್ಕು ಅಧಿನಿಯಮದ ಪ್ರಕಾರ ವಿಧವೆಯ ಪತಿ ತನ್ನ ಮರಣ ಕಾಲದಲ್ಲಿ ಅವಿಭಕ್ತ ಕುಟುಂಬದಿಂದ ಬೇರೆಯಾಗಿರಲಿ ಅಥವಾ ಅವಿಭಕ್ತ ಕುಟುಂಬದಲ್ಲಿಯೇ ಇರಲಿ ಅವನ ಪಾಲಿನ ವಾರಸುದಾರಿಕೆ ಅವನ ಪತ್ನಿಗೆ ನೀಡಲಾಯಿತು. ಆದರೆ ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮದ ಪ್ರಕಾರ ''ಮಹಿಳೆಯು ಆಸ್ತಿಯಲ್ಲಿ ಪಾಲು ಪಡೆಯಬಹುದು ಹಾಗೂ ಯಾವುದೇ ರೀತಿಯಲ್ಲಿ ಪಡೆದಿರುವ ಸ್ಥಿರ ಅಥವಾ ಚರಾಸ್ತಿಗೆ ಅವಳು ಸಂಪೂರ್ಣ ಒಡೆತನ ಹೊಂದಿರುತ್ತಾಳೆ ಎಂದು ಅನುಚ್ಛೇದ ೧೪ರಲ್ಲಿ ಮಾನ್ಯ ಮಾಡಲಾಯಿತು. ಆದರೆ ಇದೇ ಕಾನೂನಿನ ಅನುಚ್ಛೇದ ೬ರ ಪ್ರಕಾರ ಮಹಿಳೆಯು ದಾಯಾದಿತ್ವ (Coparcenary)ದ ಹಕ್ಕು ಹೊಂದಿರುವುದಿಲ್ಲ. ಇದು ಕುಟುಂಬದ ಪುರುಷ ಸದಸ್ಯರಿಗೆ ಮಾತ್ರ ವಂಶಪಾರಂಪರ್ಯವಾಗಿ ಬರುವ ಹಕ್ಕು ಎಂದು ಹೇಳಲಾಗಿದೆ.'' (ಅಂಜಲಿ ರಾಮಣ್ಣ, ೨೦೦೬, ಪು ೧) ಇದರಿಂದಾಗಿ ಮಹಿಳೆಯರು ಪಿತ್ರಾರ್ಜಿತ ಆಸ್ತಿಯಲ್ಲಿ ಸಿಗಬೇಕಾದ ಹಕ್ಕಿನಿಂದ ವಂಚಿತರಾಗಬೇಕಾಯಿತು.

೧೯೫೬ರ ಕಾಯ್ದೆಯಲ್ಲಿ ಮಹಿಳಾ ಆಸ್ತಿಯ ಕುರಿತು ಇರುವ ತೊಡಕುಗಳನ್ನು ತೊಡೆದು ಹಾಕಲು ಈ ಅಧಿನಿಯಮಕ್ಕೆ ತಿದ್ದುಪಡಿಯನ್ನು ಮಾಡುವ ಮೂಲಕ ''ಗಂಡು ಮಕ್ಕಳಿಗಿರುವಷ್ಟೇ ಹಕ್ಕನ್ನು ಹೆಣ್ಣು ಮಕ್ಕಳಿಗೂ ನೀಡಿದೆ. ಅಂದರೆ, ಮಗಳನ್ನು ಆಸ್ತಿ ವಿಭಾಗವಾಗದ ಹಿಂದೂ ಅವಿಭಕ್ತ ಕುಟುಂಬದ ದಾಯಾದಿಯನ್ನಾಗಿ ಮಾಡಲಾಗಿದೆ. ೧೯೯೦ರ ಹಿಂದೂ ಉತ್ತರಾಧಿಕಾರ (ಕರ್ನಾಟಕ) ತಿದ್ದುಪಡಿ ಕಾಯ್ದೆಯು ಸುಮಾರು ಎರಡು ವರ್ಷಗಳ ಹಿಂದೆಯೇ ರಾಜ್ಯ ವಿಧಾನ ಮಂಡಲದಲ್ಲಿ ಅಂಗೀಕರಿಸಲ್ಪಟ್ಟಿದ್ದರೂ ಅದಕ್ಕೆ ೧೯೯೪ರ ಜುಲೈ ೨೮ ರಂದು

ರಾಷ್ಟ್ರಪತಿಗಳ ಅನುಮೋದನೆ ದೊರಕಿತು. ಆಗಸ್ಟ್ ೧ ರಿಂದ ಇದು ಜಾರಿಗೆ ಬಂದಿದೆ.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೫೮)

**೩). ೧೯೯೪ರ ಕರ್ನಾಟಕ ತಿದ್ದುಪಡಿ ಕಾಯ್ದೆ**

೧೯೯೪ರ ಹಿಂದೂ ಉತ್ತರಾಧಿಕಾರ ಅಧಿನಿಯಮವು ಪಿತ್ರಾರ್ಜಿತ ಆಸ್ತಿಯಲ್ಲಿ ಗಂಡು ಮಕ್ಕಳಂತೆಯೇ ಹೆಣ್ಣು ಮಕ್ಕಳಿಗೂ ಸಮಾನ ಹಕ್ಕು ನೀಡಿದೆ. ಆದರೆ ೧೯೯೪ರ ಜುಲೈ ೩೦ರೊಳಗೆ ಆ ಮಹಿಳೆಗೆ ವಿವಾಹವಾಗಿದ್ದರೆ ಮತ್ತು ಕುಟುಂಬದ ಆಸ್ತಿ ವಿಭಜನೆಯಾಗಿ ಬಿಟ್ಟಿದ್ದರೆ ಅಂಥ ಮಹಿಳೆಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ದೊರಕದಂತಾಗಿದೆ. ೧೯೯೪ರ ಜುಲೈ ೩೦ರ ಒಳಗೆ ಮದುವೆ ಆಗದ ಹೆಣ್ಣು ಮಗಳು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವಳು. ಅಂತಹ ಮಹಿಳೆಯು ಆ ಆಸ್ತಿಯ ಮೇಲೆ ಸಂಪೂರ್ಣ ಒಡೆತನವನ್ನು ಹೊಂದುತ್ತಾಳೆ. ಇದರಿಂದಾಗಿ ಅವಳು ಈ ಆಸ್ತಿಯ ಮೇಲೆ ಉಯಿಲು ಬರೆಯದೆ ಮರಣ ಹೊಂದಿದ್ದರೆ ಅದು ಅವಳ ಮಕ್ಕಳಿಗೆ ಸೇರುತ್ತದೆ. ಮಕ್ಕಳು ಕೂಡ ಇಲ್ಲದಿದ್ದರೆ ಆ ಆಸ್ತಿಯು ಮರಳಿ ತವರು ಮನೆಯ ಒಡಹುಟ್ಟಿದವರಿಗೆ ಸೇರುತ್ತದೆ. ೧೯೯೪ರಲ್ಲಿ ಕರ್ನಾಟಕದಲ್ಲಿ ಈ ಕಾಯ್ದೆಯು ಜಾರಿಗೆ ಬರುವ ಮೊದಲು ಆಂಧ್ರ ಪ್ರದೇಶದಲ್ಲಿ ಎನ್.ಟಿ. ರಾಮರಾವ್ ಅವರ ಅಧಿಕಾರಾವಧಿಯಲ್ಲಿ ೧೯೮೫ರಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಹುಟ್ಟಿನಿಂದಲೇ ಸಮಾನ ಆಸ್ತಿ ಹಕ್ಕು ನೀಡಿರುವುದನ್ನು ಗಮನಿಸಬೇಕಾಗಿದೆ. ತಮಿಳುನಾಡಿನಲ್ಲಿ ೧೯೮೯ರ ನಂತರದಲ್ಲಿ ಈ ಕಾಯ್ದೆಯು ಜಾರಿಗೆ ಬಂದಿದೆ. ಮಹಾರಾಷ್ಟ್ರದಲ್ಲೂ ಕೂಡ ೧೯೯೪ರಲ್ಲಿ ಹೆಣ್ಣುಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಕೊಡುವ ಕಾನೂನನ್ನು ಜಾರಿಗೊಳಿಸಲಾಯಿತು. ೧೯೩೩ರಲ್ಲಿ ಮೈಸೂರು ಸಂಸ್ಥಾನದಲ್ಲಿ ಹೆಣ್ಣು ಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸ್ವಲ್ಪಮಟ್ಟಿನ ಪಾಲು ಕೊಡುವ ಕಾನೂನು ಜಾರಿಯಲ್ಲಿತ್ತು. ಆದರೆ ೧೯೩೭ರಲ್ಲಿ ಕುಟುಂಬದ ಪಿತ್ರಾರ್ಜಿತ ಆಸ್ತಿಯಲ್ಲಿ ಮೃತ ಗಂಡನ ಪಾಲನ್ನು ಪಡೆಯುವ ಕಾನೂನನ್ನು ಜಾರಿಗೆ ತರಲಾಯಿತು. ೧೯೫೬ರ ಹಿಂದೂ ವಾರಸಾ ಕಾನೂನಿನ ಪ್ರಕಾರ, ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಸಮಪಾಲಿನೊಂದಿಗೆ ಪಿತ್ರಾರ್ಜಿತ ಆಸ್ತಿಯಲ್ಲಿಯೂ ಒಂದು ಸಣ್ಣ ಪಾಲನ್ನು ಹೆಣ್ಣುಮಕ್ಕಳಿಗೆ ಕೊಡಲಾಗಿದೆ. ಆದರೆ ಈ ಪಿತ್ರಾರ್ಜಿತ ಆಸ್ತಿಯನ್ನು ಮಹಿಳೆಯು ತಂದೆಯ ಮರಣದ ನಂತರವೇ ಮಾತ್ರ ಪಡೆಯಲು ಸಾಧ್ಯವಿತ್ತು.

೧೯೯೪ರ ಕಾಯ್ದೆಯನ್ನು ಜಾರಿಗೆ ತರುವಾಗ ''ಅನೇಕ ಸಂಘ ಸಂಸ್ಥೆಗಳು ತಮ್ಮ ವಿರೋಧವನ್ನು ವ್ಯಕ್ತಪಡಿಸಿದವು. ಈ ತಿದ್ದುಪಡಿಯಿಂದ ಹೆಣ್ಣಿನ ಪರಿಸ್ಥಿತಿ ಸುಧಾರಿಸುವ ಬದಲು ಅವಳ ಬದುಕು ದುರ್ಬರವಾಗುತ್ತದೆ. ತವರು ಮನೆಯೊಂದಿಗೆ ಇರುವ ಸೌಹಾರ್ದಯುತ ಸಂಬಂಧ ಕೊನೆಗಾಣುತ್ತದೆ. ಮನೆಯ ಹೆಣ್ಣು ಮಗಳ ಕಷ್ಟದಲ್ಲಿ ಭಾಗಿಯಾಗಿ ಆಸರೆಯಾಗುತ್ತಿದ್ದ ಅಣ್ಣ ತಮ್ಮಂದಿರು ಆಸ್ತಿಯ ಕಾರಣಕ್ಕಾಗಿ ದೂರವೇ ಉಳಿಯಬಹುದು. ಈ ತಿದ್ದುಪಡಿಯಿಂದ ವಿಧವೆಯರಿಗೆ ಹಾಗೂ ಅವಿವಾಹಿತ ಮಹಿಳೆಯರಿಗೆ ಸಹಾಯವಾಗಬಹುದು. ಆದರೆ ವಿವಾಹಿತ ಮಹಿಳೆಗೆ ಪತಿಯಿಂದ ಕಿರುಕುಳ ಪ್ರಾರಂಭವಾಗಬಹುದು. ತವರು ಮನೆಯಿಂದ ಆಸ್ತಿಯಲ್ಲಿ ಪಾಲು ಪಡೆಯುವಂತೆ ಆಕೆಯ ಮೇಲೆ ಒತ್ತಡ ಹೇರಬಹುದು ಎಂಬ ಭಯವೂ ವ್ಯಕ್ತವಾಯಿತು. ಹೆಣ್ಣು ಮಕ್ಕಳಿಗೆ ಆಸ್ತಿ ಹಂಚುವುದರಿಂದ ಕುಟುಂಬಗಳಲ್ಲಿ ವಿವಾದ ತಲೆದೋರುತ್ತದೆ, ಆಸ್ತಿ ಚಿಕ್ಕ ಚಿಕ್ಕ ಚೂರುಗಳಾಗುತ್ತವೆ ಎಂದು ಈ ಕಾಯ್ದೆ ವಿರೋಧಿಗಳ ವಾದ. ಸ್ತ್ರೀಪರವಾದಿಗಳು ಈ ತಿದ್ದುಪಡಿಯನ್ನು ಸ್ವಾಗತಿಸಿ ಮಹಿಳೆಯರಿಗೆ ಆರ್ಥಿಕ ಸ್ವಾತಂತ್ರ್ಯವನ್ನು ಕಲ್ಪಿಸಿಕೊಟ್ಟು ಅವರಲ್ಲಿ ಆತ್ಮಬಲ ತುಂಬಲು ಇದು ಸಹಾಯವಾಗುತ್ತದೆ ಎಂದಿದ್ದಾರೆ.'' (ಗೀತಾ ಕೃಷ್ಣಮೂರ್ತಿ, ೨೦೦೭, ಪು ೧೮, ೧೯). ಇದಕ್ಕಾಗಿಯೇ ರಚನೆಯಾದ ಜಂಟಿ ಸಲಹಾ ಸಮಿತಿ ಕೂಲಂಕಷವಾಗಿ ಪರಿಶೀಲನೆ ಮಾಡಿ ಸಕಾರಾತ್ಮಕ

ಅಭಿಪ್ರಾಯ ವ್ಯಕ್ತಪಡಿಸಿತು. ೧೯೫೬ರ ಕಾಯ್ದೆಯನ್ನು ತಿದ್ದುಪಡಿ ಮಾಡಲು ಇರುವ ಮೂಲ ಉದ್ದೇಶ ''೧. ಸ್ತ್ರೀ ಪುರುಷರಿಗೆ ಆಸ್ತಿಹಕ್ಕಿನಲ್ಲಿರುವ ತಾರತಮ್ಯವನ್ನು ಹೋಗಲಾಡಿಸುವುದು. ೨. ಹೆಣ್ಣುಮಕ್ಕಳಿಗೆ ಆರ್ಥಿಕ ಬೆಂಬಲ ಒದಗಿಸುವುದರ ಮೂಲಕ ಅವರ ಸ್ಥಾನಮಾನವನ್ನು ಸುಧಾರಿಸುವುದು. ೩. ವರದಕ್ಷಿಣೆಯೆಂಬ ವಿನಾಶಕಾರಿ ಪದ್ಧತಿಯನ್ನು ತೊಡೆದು ಹಾಕುವುದು.'' (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೬೦).

ಹಿಂದೂ ಉತ್ತರಾಧಿಕಾರ ಅಧಿನಿಯಮ ತಿದ್ದುಪಡಿ ಮಾಡುವ ಮೂಲಕ ಸ್ತ್ರೀ - ಪುರುಷರ ಮಧ್ಯೆ ಇರುವ ಆಸ್ತಿಹಕ್ಕುಗಳ ತಾರತಮ್ಯ ನಿವಾರಿಸಿದಂತಾಗುತ್ತದೆ. ಮಹಿಳೆಯು ಸ್ವತಂತ್ರವಾಗಿ ಬದುಕಬೇಕಾಗಿದೆ, ಬದುಕಿನಲ್ಲಿ ಬರುವ ಜಟಿಲವಾದ ಸಮಸ್ಯೆಗಳನ್ನು ಎದುರಿಸಬೇಕಾದ ಅನಿವಾರ್ಯತೆ ಬಂದಾಗ, ಅವಳಿಗೆ ಆರ್ಥಿಕ ಭದ್ರತೆಯ ಅವಶ್ಯಕತೆ ಇರುವುದು. ಇದರ ಜೊತೆಗೆ ಭರವಸೆ ಮತ್ತು ಕಾನೂನಿನ ಬೆಂಬಲ ಕೂಡ ಅವಶ್ಯಕವಾಗಿದೆ. ಯಾವುದೇ ಕಾನೂನಿನ ಉದ್ದೇಶ ನೆರವೇರುವುದು ಅದು ಪರಿಣಾಮಕಾರಿಯಾಗಿ ಜಾರಿಗೊಂಡಾಗ ಮಾತ್ರ. ಜನರು ಕಾನೂನಿನ ಉಪಯೋಗ ಪಡೆಯಲು ಕಾನೂನಿನ ಬಗ್ಗೆ ಮಾಹಿತಿ ಇರಬೇಕು. ಬರೀ ಕಾನೂನುಗಳು ಜಾರಿಗೆ ತಂದರೆ ಸಾಲದು. ಅವನ್ನು ಅನುಷ್ಠಾನಗೊಳಿಸುವಂತೆ ನೋಡಿಕೊಂಡಾಗಲೇ ಪುರುಷರು ಮತ್ತು ಮಹಿಳೆಯರು ಸರಿಸಮಾನವಾಗಿ ಆಸ್ತಿ ಹಕ್ಕನ್ನು ಹೊಂದಲು ಸಾಧ್ಯವಾಗುವುದು. ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಜನ್ಮಸ್ವತ್ತ ಅಧಿಕಾರ ನೀಡುವ ಕರ್ನಾಟಕದ ಹೊಸ ಕಾನೂನು, ಅವರ ಮೇಲೆ ಮೃತ ತಂದೆಯ ಸಾಲವಿದ್ದರೆ ಅದನ್ನು ತೀರಿಸುವ ಜವಾಬ್ದಾರಿಯನ್ನೂ ಹೊರಿಸಿದೆ. ಇಲ್ಲಿಯವರೆಗೂ ಜಾರಿಗೆ ಬಂದಂಥ ಕಾನೂನುಗಳಲ್ಲಿ ಈ ಜವಾಬ್ದಾರಿ ಇರಲಿಲ್ಲ. ಕಾರಣ, ಮೃತನ ಗಂಡು ಮಕ್ಕಳು ಆ ಸಾಲವನ್ನು ತೀರಿಸುತ್ತಿದ್ದರು. ಈ ಕಾನೂನಿನ ಪ್ರಕಾರ ಮಹಿಳೆಯು ಪಿತ್ರಾರ್ಜಿತ ಆಸ್ತಿಗೆ ಸರಿಸಮಾನವಾದ ಪಾಲು ಪಡೆಯುವುದರಿಂದ ಆತನ ಸಾಲ ತೀರಿಸುವ ಜವಾಬ್ದಾರಿ ಈ ಕಾನೂನಿನಲ್ಲಿದೆ. ಈ ಪಿತ್ರಾರ್ಜಿತ ಆಸ್ತಿ ಪಡೆಯುವುದರಿಂದ ಅವಳು ಮದುವೆಯಾದ ಮೇಲೂ ತಂದೆಯ ಕುಟುಂಬದ ಸದಸ್ಯಳಂತೆಯೇ ಕಾಣಲಾಗಿದೆ. ಈ ಮೊದಲು 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂದು ಭಾವಿಸಲಾಗಿತ್ತು. ಆದರೆ ಈಗ ಅವಳು ಒಬ್ಬ ಪಾಲುದಾರಳು. ಹೆಣ್ಣುಮಗುವೆಂದರೆ 'ಪರಧನ'ವಲ್ಲ. ಈ ಕಾನೂನಿನ ಪ್ರಕಾರ ವಿವಾಹದ ನಂತರವೂ ಆಕೆಗೆ ತವರಿನ ಕೊಂಡಿ ಕಳಚಿಕೊಳ್ಳುವುದಿಲ್ಲ. ಕಾರಣ ತಂದೆಯ ಮನೆಯಲ್ಲಿನ ಆಸ್ತಿಯ ಅಧಿಕಾರ ಆಕೆಗೂ ಇರುತ್ತದೆ. ಇಂದು ವಿವಾಹದ ನಂತರ ಪತಿಯ ವ್ಯಕ್ತಿತ್ವದಲ್ಲಿ ಪತ್ನಿಯ ವ್ಯಕ್ತಿತ್ವ ಸೇರಿ ಹೋಗುವುದಿಲ್ಲ. ಈ ಕಾನೂನಿನ ಮೂಲಕ ಅವಳು ಕೂಡ ತನ್ನ ಸ್ವತಂತ್ರ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬಹುದಾಗಿದೆ.

ಮಹಿಳೆಗೆ ತನ್ನದೇ ಆದಂತಹ ವ್ಯಕ್ತಿತ್ವ ಮತ್ತು ಅವಳ ಆಸ್ತಿ ಹಕ್ಕುಗಳನ್ನು ವಿಧಿವತ್ತಾಗಿ ಪಡೆಯುವ ಕಾಯ್ದೆಯನ್ನು ಸೆಪ್ಟೆಂಬರ ೨೦೦೫ರ ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಕಾಯಿದೆ ನೀಡಿದೆ.

**ಡಿ). ೨೦೦೫ರ ಹಿಂದೂ ಉತ್ತರಾಧಿಕಾರ (ತಿದ್ದುಪಡಿ) ಕಾಯಿದೆ.**

ಈ ಕಾಯ್ದೆಯಲ್ಲಿ ''ಮೂಲ ಶಾಸನದ ಅನುಚ್ಛೇದ ೬ ಮತ್ತು ೨೩ಕ್ಕೆ ಮುಖ್ಯವಾದ ತಿದ್ದುಪಡಿಯನ್ನು ಮಾಡುವುದರ ಮೂಲಕ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರನ್ನು ಪುರುಷರಿಗೆ ಸರಿಸಮನಾದ ಪಾಲುದಾರರನ್ನಾಗಿ ಮಾಡಲಾಗಿದೆ. ಕೃಷಿ ಭೂಮಿ, ಪಿತ್ರಾರ್ಜಿತ ವಾಸದ ಮನೆ ಹೀಗೆ ಎಲ್ಲ ತರಹದ ಪಿತ್ರಾರ್ಜಿತ ಆಸ್ತಿಯಲ್ಲೂ ಯಾವುದೇ ಭೇದವಿಲ್ಲದೆ ಸಮಾನ ಹಕ್ಕು ನೀಡಲಾಗಿದೆ. ತಾಯಿ, ಹೆಂಡತಿ, ಮಗಳು, ಸಹೋದರಿ, ಮೊಮ್ಮಗಳು, ಮರಿಮಗಳು ಸಹ ಪಿತ್ರಾರ್ಜಿತ ಆಸ್ತಿಗೆ ಕಾನೂನು ಬದ್ಧವಾದ ಉತ್ತರಾಧಿಕಾರಿಗಳಾಗುತ್ತಾರೆ.'' (ಅಂಜಲಿ ರಾಮಣ್ಣ, ೨೦೦೬, ಪು ೨) ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆದಂತಹ ಮಹಿಳೆಯು ಆ ಆಸ್ತಿಯ ಮೇಲೆ ಸಂಪೂರ್ಣ

ಒಡೆತನವನ್ನು ಹೊಂದುವಳು. ಹಿಂದೂ ಸಮಾಜದಲ್ಲಿ ಹೆಣ್ಣು ಮಗುವನ್ನು ಗಂಡುಮಗುವಿಗೆ ಸಮಾನವಾಗಿ ಕಾಣುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿಯೇ ಮಹಿಳೆಗೆ ಆಸ್ತಿ ಹಕ್ಕು ಇರಲಿಲ್ಲ. ಈಗ ತಿದ್ದುಪಡಿಯಿಂದ ಮಹಿಳೆಯು ಆಸ್ತಿ ಹಕ್ಕನ್ನು ಹೊಂದಬಹುದಾಗಿದೆ.

''೨೦೦೪ರ ಹಿಂದೂ ಉತ್ತರಾಧಿಕಾರ ತಿದ್ದುಪಡಿ ಮಸೂದೆ ಹಿಂದೂ, ಜೈನ, ಬೌದ್ಧ ಹಾಗೂ ಸಿಖ್ ಸಮುದಾಯದ ಮಹಿಳೆಯರಿಗೆ ಆಸ್ತಿ ಒಡೆತನದಲ್ಲಿ ಸಮಾನ ಹಕ್ಕನ್ನು ನೀಡಲಿದೆ. ವೀರಶೈವ, ಲಿಂಗಾಯತ ಹಾಗೂ ಬ್ರಹ್ಮ ಸಮಾಜ, ಆರ್ಯಸಮಾಜದ ಅನುಯಾಯಿಗಳಿಗೂ ಈ ಕಾಯಿದೆ ಅನ್ವಯವಾಗುತ್ತದೆ. ಒಟ್ಟಾರೆ ಮುಸ್ಲಿಂ, ಕ್ರೈಸ್ತ, ಪಾರ್ಸಿ ಅಥವಾ ಯಹೂದಿಗಳನ್ನು ಬಿಟ್ಟು ಉಳಿದೆಲ್ಲಾ ಭಾರತೀಯರೂ ಈ ಕಾಯಿದೆ ವ್ಯಾಪ್ತಿಗೆ ಸೇರುತ್ತಾರೆ.'' (ಮಂಜುಳಾ ಸಿ.ಜಿ., ೨೦೦೫, ಪು ೪೨) ಭಾರತೀಯ ಮಹಿಳೆಯರಿಗೆ ಸಂವಿಧಾನಿಕ ಸಮಾನತೆಯನ್ನು ನೀಡಿದ ಅರ್ಧಶತಮಾನದ ನಂತರ, ಸಮಾನತೆಯ ಸಂಸ್ಕೃತಿಗೆ ಅತ್ಯಂತ ಮೂಲಭೂತವಾದ ಆಸ್ತಿ ಒಡೆತನದ ಹಕ್ಕನ್ನು ಪಡೆಯುವಂತಾಗಿದೆ. ಪಾರಂಪರಿಕವಾಗಿ ಪೂರ್ವಿಕರಿಂದ ಬಂದಂಥ ಆಸ್ತಿಯಲ್ಲಿ ಗಂಡು ಮಕ್ಕಳಂತೆ, ಹೆಣ್ಣು ಮಕ್ಕಳಿಗೂ ಸರಿಸಮಾನ ಹಕ್ಕನ್ನು ಈ ಮಸೂದೆ ನೀಡಲಿದೆ. ಹೆಣ್ಣು ಮಕ್ಕಳು ವಿವಾಹಿತರಿರಲಿ, ಅವಿವಾಹಿತರಿರಲಿ ಪೂರ್ವಿಕರಿಂದ ಬಂದ ಆಸ್ತಿಯಲ್ಲಿ ಅವರು ಸಮಾನ ಹಕ್ಕು ಹೊಂದುವಂತಾಗಿದೆ. ಇದರಲ್ಲಿ ಕೃಷಿ ಭೂಮಿ ಮತ್ತು ಪೂರ್ವಿಕರ ಮನೆಗಳು ಸೇರಿವೆ. ಮೂಲ ಕಾಯಿದೆಯ ೨೩ನೇ ವಿಧಿ ರದ್ದತಿಗೆ ಹೊಸ ಮಸೂದೆಯಲ್ಲಿ ಮತ್ತೊಂದು ತಿದ್ದುಪಡಿ ಮಾಡಲಾಗಿದೆ. ಏಕೆಂದರೆ, ಅಸ್ತಿತ್ವದಲ್ಲಿರುವ ೨೩ನೇ ವಿಧಿ ಉತ್ತರಾಧಿಕಾರದಿಂದ ಬಂದ ಮನೆಯಲ್ಲಿ ವಾಸಿಸುವ ವಿವಾಹಿತ ಮಹಿಳೆಯ ಹಕ್ಕನ್ನು ಸೀಮಿತವಾಗಿಸಿದೆ. ಈ ಪ್ರಕಾರ ವಿಧವೆ, ಪತಿಯಿಂದ ಬೇರೆಯಾಗಿರುವಂಥ ಮಹಿಳೆಗೆ ಮಾತ್ರ ಈ ಹಕ್ಕನ್ನು ಬಳಸುವ ಅವಕಾಶವಿದೆ.

ಕಾನೂನಿನ ಕಣ್ಣಿನಲ್ಲಿ ಮಹಿಳೆಯರನ್ನು ಎಲ್ಲಾ ರೀತಿಯಿಂದಲೂ ಸಮಾನವಾಗಿ ಕಾಣುವಂತೆ ಮಾಡುವಲ್ಲಿ ಇದು ಪ್ರಮುಖ ಹೆಜ್ಜೆ ಎನ್ನುತ್ತಾರೆ ಬಿನಾ ಅಗರವಾಲ್ (ದೆಹಲಿಯ ಇನಸ್ಟಿಟ್ಯೂಟ್ ಆಫ್ ಎಕನಾಮಿಕ್ ಗ್ರೋತನ್ ಅರ್ಥಶಾಸ್ತ್ರದ ಪ್ರೊಫೆಸರ್) ಇವರು ಮಸೂದೆಯಲ್ಲಿನ ಈ ಬದಲಾವಣೆಗಾಗಿ ಸ್ವತಃ ಶ್ರಮಿಸಿರುವರು. ಅಲ್ಲದೆ ಈ ಮಸೂದೆಯ ಪರಿಶೀಲನೆಯನ್ನು ನಡೆಸಿದ ಸಂಸತ್ತಿನ ಆಯ್ಕೆ ಸಮಿತಿಯ ಮುಂದೆಯೂ ಹಾಜರಾಗಿ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ. ''ಮಹಿಳೆಯ ಆಸ್ತಿಹಕ್ಕು : ಹಿಂದೂ ಕಾನೂನಿನ ಅನ್ವಯ ಉದ್ದೇಶಿತ ಸುಧಾರಣೆ ಎಂಬ ಬಗ್ಗೆ ರಾಷ್ಟ್ರೀಯ ಕಾನೂನು ಆಯೋಗ ನೀಡಿದ ೧೭೪ನೇ ವರದಿಯ ಶಿಫಾರಸ್ಸುಗಳಿಗೆ ಅನುಗುಣವಾಗಿ ಈ ಹೊಸ ಮಸೂದೆಯನ್ನು ರೂಪಿಸಲಾಗಿದೆ. ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಾನ ಹಕ್ಕು ನೀಡದಿರುವುದು ಸಂವಿಧಾನದ ೧೪ ಹಾಗೂ ೧೫ನೇ ವಿಧಿಯ ಉಲ್ಲಂಘನೆಯಾಗುತ್ತದೆ ಎಂದು ಈ ವರದಿ ಹೇಳಿದೆ.'' (ಮಂಜುಳಾ ಸಿ.ಜಿ., ೨೦೦೫, ಪು ೪೫) ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿ ವಿಚಾರ ಬಂದಾಗ ಮಹಿಳೆಯನ್ನು ನಗಣ್ಯವಾಗಿ ಪರಿಗಣಿಸಲಾಗಿದೆ. ಆಸ್ತಿಯು ಪುರುಷನೆ ಹೊಂದಬೇಕು, ಅದು ಪುರುಷನ ಸೊತ್ತು ಎಂಬುದು ಅನಾದಿ ಕಾಲದಿಂದಲೂ ಆಚರಣೆಯ ರೂಪದಲ್ಲಿ ಬಂದು ಬಿಟ್ಟಿದೆ. ಮಹಿಳೆಗೆ ಉಳಿದಿರುವುದು ಬರೀ ಕರ್ತವ್ಯ ಪಾಲನೆ ಮಾತ್ರ. ಮಹಿಳೆಗೆ ಆಸ್ತಿಹಕ್ಕುಗಳನ್ನು ಪಡೆಯುವ ಕಾನೂನುಗಳು ಜಾರಿಗೆ ಬಂದರೂ ಸಹ, ಆಸ್ತಿಯ ಯಜಮಾನ ಪುರುಷನೆ ಆಗಿದ್ದಾನೆ. ಎಲ್ಲೋ ಒಂದೆರಡು ಕಡೆಗಳಲ್ಲಿ ಮಹಿಳೆಯು ಆಸ್ತಿಯನ್ನು ಪಡೆದಿರುವ ಉದಾಹರಣೆಗಳಿವೆ. ಪಿತೃಪ್ರಧಾನ ಸಮಾಜವೆಂಬುದು ನೈಸರ್ಗಿಕ, ಸಹಜವಾದುದು ಎಂದು ಭಾರತೀಯ ಕಾನೂನು ವ್ಯವಸ್ಥೆಯೂ ಭಾವಿಸುತ್ತದೆ. ಈ ಹಿನ್ನೆಲೆಯಲ್ಲಿಯೇ ಮಹಿಳೆಯೂ ಕಾನೂನಿನ ಪರಿಭಾಷೆಯಲ್ಲಿಯೇ ಇನ್ನೂ ಅನ್ಯಳೇ ಆಗಿ ಉಳಿದಿರುವಳು. ಪತಿಯ

ಮನೆಯವರ ದುರಾಸೆಯ ಒತ್ತಡಗಳಿಗೆ ಮಣಿಯದಂತಹ ವಿಶ್ವಾಸವನ್ನು ಮಹಿಳೆಯರೂ ಗಳಿಸಿಕೊಳ್ಳಬೇಕಿದೆ. ಆಸ್ತಿಯ ಒಡತಿಯಾಗುವುದರಿಂದ ಇಂತಹ ಆತ್ಮವಿಶ್ವಾಸವನ್ನು ಮಹಿಳೆಗೆ ತಂದು ಕೊಡುತ್ತದೆ. ಆಸ್ತಿಯನ್ನು ಮಹಿಳೆಯರ ಹೆಸರಿನಲ್ಲಿ ನೋಂದಾಯಿಸಿದರೆ ಸ್ಟಾಂಪ್ ಶುಲ್ಕವನ್ನು ಅರ್ಧದಷ್ಟು ಕಡಿಮೆ ಮಾಡುವಂತಹ ನಿರ್ಧಾರವನ್ನು ಇತ್ತೀಚೆಗೆ ದೆಹಲಿ ಸರ್ಕಾರ ಜಾರಿಗೆ ತಂದಿದೆ. ಈ ನಿರ್ಧಾರದಿಂದಾಗಿ ಮಹಿಳೆಯ ಹೆಸರಿನಲ್ಲಿ ಆಸ್ತಿ ನೋಂದಾವಣೆ ಮಾಡುವ ಪ್ರವೃತ್ತಿ ದೆಹಲಿಯಲ್ಲಿ ಹೆಚ್ಚಾಗಿ ಕಂಡುಬರುತ್ತಲಿದೆ. ಇದರಿಂದ ಮಹಿಳೆಯರಿಗೆ ಆರ್ಥಿಕ ಹಾಗೂ ಮಾನಸಿಕ ಭದ್ರತೆಯನ್ನು ನೀಡಿದಂತಾಗಿದೆ. ಮಹಿಳೆಯರಿಗೆ ಆಸ್ತಿ ಹಕ್ಕನ್ನು ಪಡೆಯುವ ಕಾನೂನುಗಳು ಜಾರಿಗೆ ಬಂದರೂ ನಿರೀಕ್ಷಿಸಿದ ಮಟ್ಟದಲ್ಲಿ ಮಹಿಳೆಯರಿಗೆ ಫಲಿತಾಂಶ ಬರದಿರುವುದು ವಿಷಾದನೀಯ. ಕೆಲವೇ ಕೆಲವು ಪ್ರಕರಣಗಳಲ್ಲಿ ಈ ಕಾನೂನಿನಿಂದ ಆಸ್ತಿ ಹಕ್ಕನ್ನು ಪಡೆದರೂ ಕೃಷಿ ಭೂಮಿ ಪಡೆಯುವಲ್ಲಿ ತಾರತಮ್ಯವಾಗಿದೆ. ಈ ಎಲ್ಲ ಕಾನೂನುಗಳಲ್ಲಿ ಕೃಷಿ ಭೂಮಿಗೆ ಸಂಬಂಧಿಸಿದ ಅಧಿನಿಯಮಗಳನ್ನು ಪ್ರತ್ಯೇಕವಾಗಿ ನೋಡಲಾಗಿದೆ.

**೩.೨. ಕೃಷಿ ಭೂಮಿಗೆ ಸಂಬಂಧಿಸಿದ ಕಾನೂನುಗಳು ಮಹಿಳೆಗೆ ನೀಡಿದ ಪ್ರಾತಿನಿಧ್ಯ**

ಮಹಿಳೆಯರಿಗೆ ಆಸ್ತಿಹಕ್ಕು ಕುರಿತ ಅನೇಕ ಕಾನೂನುಗಳು ಜಾರಿಗೆ ಬಂದರೂ ಅದರಲ್ಲಿ ಕೃಷಿ ಭೂಮಿಯನ್ನು ಹೊರತುಪಡಿಸಲಾಗಿದೆ. ಕೃಷಿ ಭೂಮಿಯಲ್ಲಿನ ಅವರ ಹಕ್ಕುಗಳು ಪ್ರತ್ಯೇಕವಾಗಿಯೇ ಉಳಿದಿವೆ. ಮಹಿಳೆಯು ಸಮಾಜದಲ್ಲಿ ಎರಡನೆ ದರ್ಜೆಯ ಪ್ರಜೆಯಾಗಿ ಶೋಷಣೆಗೆ ಒಳಗಾಗಲು ಇದೂ ಒಂದು ಕಾರಣ. ಭಾರತದಲ್ಲಿ ಮಹಿಳೆಯು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಸಬಲಳಾಗಬೇಕಾದರೆ ಅವಳು ಕೃಷಿ ಭೂಮಿಯಲ್ಲಿ ಹಕ್ಕು ಹೊಂದಬೇಕಾಗುವುದು ಬಹುಮುಖ್ಯವಾಗಿದೆ. ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯು ಕೃಷಿಯನ್ನೆ ಅವಲಂಬಿಸಿರುವುದರಿಂದ ಕೃಷಿ ಭೂಮಿಯನ್ನು ಪಡೆಯುವುದು ಮುಖ್ಯವಾಗಿದೆ. ಕೃಷಿ ಭೂಮಿಯ ವ್ಯಾಪ್ತಿಯೊಳಗೆ ಬರುವ ಕೆಲವೊಂದು ಕಾನೂನುಗಳನ್ನು ಪರಿಶೀಲಿಸಿದಾಗ,

**೩.೨.೧ ವಸಾಹತು ಕಾಲಘಟ್ಟದಲ್ಲಿ**

ಕೃಷಿಗೂ ಮತ್ತು ಮಹಿಳೆಗೂ ಅವಿನಾಭಾವ ಸಂಬಂಧವಿದ್ದರೂ ಕೂಡ ಪ್ರಾಚೀನ ಕಾಲದಿಂದಲೂ ಭೂಮಿಯ ಒಡೆತನ ಪುರುಷನದೇ ಆಗಿದೆ. ಉತ್ಪಾದನೆ ತರುವಂತಹ ಆಸ್ತಿಯ ಮಾಲೀಕನು ಪುರುಷನಾಗಿದ್ದಾನೆ. ಉಳುಮೆ ಮಾಡುವವನು ಪುರುಷ ಆಗಿರುವುದರಿಂದ ಮಹಿಳೆಯು ಉಳಿದ ಕೃಷಿ ಕೆಲಸಗಳನ್ನು ಮಾಡಿದರೂ ಕೃಷಿಯಲ್ಲಿ ಪುರುಷನೇ ಪ್ರಮುಖನಾಗಿರುವನು. ಭಾರತೀಯ ಕುಟುಂಬ ವ್ಯವಸ್ಥೆಯು ಪಿತೃಪ್ರಧಾನವಾಗಿರುವುದರಿಂದ ಮನೆಯ ಗಂಡು ಮಗನೇ ಕೃಷಿ ಭೂಮಿಯ ವಾರಸುದಾರನಾಗಿರುವನು. ಬ್ರಿಟೀಷರ ಆಡಳಿತ ಕಾಲದಲ್ಲಿಯೂ ಸಹ ರೈತವಾರಿ ಪದ್ಧತಿ, ಜಮೀನ್ದಾರಿ ಪದ್ಧತಿಗಳ ಮೂಲಕ ಭೂಮಿಯ ಒಡೆತನ ಪುರುಷನಲ್ಲಿಯೇ ಹಂಚಿಹೋಗಿದೆ. ೧೯ನೇ ಶತಮಾನದಲ್ಲಿ ಕಾನೂನುಗಳನ್ನು ಜಾರಿಗೆ ತಂದರೂ ಕೃಷಿ ಭೂಮಿಯನ್ನು ಹೊರತುಪಡಿಸಿ ಉಳಿದ ಆಸ್ತಿಹಕ್ಕುಗಳ ಕುರಿತು ಕಾನೂನು ಜಾರಿಗೆ ತರಲಾಗಿತ್ತು.

**೧೯೩೫ರಲ್ಲಿ ಜಾರಿಗೆ ಬಂದ ಭಾರತ ಸರ್ಕಾರದ ಅಧಿನಿಯಮ (Govt of India Act-1935)**

ಈ ಅಧಿನಿಯಮ ಜಾರಿಗೆ ಬಂದ ನಂತರ ''ಕೃಷಿ ಭೂಮಿಗೆ ಸಂಬಂಧಿಸಿದ ಶಾಸನ ರಚನೆಯ ಎಲ್ಲಾ ಅಧಿಕಾರಗಳನ್ನು ಪ್ರಾಂತೀಯ (ರಾಜ್ಯ) ಶಾಸನ ಸಭೆಗಳಿಗೆ ವಹಿಸಿಕೊಟ್ಟಿತು.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೮೨)ಅಂದಿನಿಂದ ಇಂದಿನವರೆಗೂ ಕೃಷಿ ಭೂಮಿಗೆ ಸಂಬಂಧಿಸಿದ ಎಲ್ಲ ಕಾನೂನುಗಳು ಆ ಭೂಮಿಯಿರುವ

ಪ್ರದೇಶದಲ್ಲಿ ಜಾರಿಯಲ್ಲಿರುವ ಕಾನೂನುಗಳನ್ನು ಆಧರಿಸಿ ರೂಪುಗೊಂಡವು. ಹೀಗಾಗಿ ಉಳಿದ ಆಸ್ತಿಗೆ ಸಂಬಂಧಿಸಿದ ಯಾವುದೇ ಕಾನೂನುಗಳು ಕೃಷಿ ಭೂಮಿಗೆ ಸಂಬಂಧಿಸಿದ ಕಾನೂನುಗಳಿಗೆ ಅನ್ವಯವಾಗಲಿಲ್ಲ. ಉದಾ: ೧೯೩೭ರಲ್ಲಿ ಜಾರಿಗೆ ಬಂದಂತಹ ಹಿಂದೂ ಮಹಿಳೆಯರ ಆಸ್ತಿಹಕ್ಕು ಅಧಿನಿಯಮವೂ ಕೂಡ ಕೃಷಿ ಭೂಮಿಗೆ ಅನ್ವಯವಾಗಲಿಲ್ಲ. ೧೯೪೪ರ ರಾವ್ ಸಮಿತಿಯು ಸಹ ಕೃಷಿ ಭೂಮಿಯ ಆಸ್ತಿ ಹಕ್ಕನ್ನು ಪ್ರಾಂತ್ಯಗಳ ಅಧಿಕಾರದ ಪರಿಧಿಗೆ ಸೇರುತ್ತದೆಂಬ ಕಾರಣದ ಮೇಲೆ ಬಿಟ್ಟು ಬಿಡಲಾಗಿದೆ.

**೩.೨.೨. ವಸಾಹತೋತ್ತರ ಕಾಲಘಟ್ಟದಲ್ಲಿ**

ಸ್ವಾತಂತ್ರ್ಯದ ನಂತರವೂ ರಾಜ್ಯಶಾಸನ ಸಭೆಗಳೇ ಭೂಮಿಗೆ ಸಂಬಂಧಿಸಿದ ಕಾನೂನುಗಳ ರಚನೆಯ ಅಧಿಕಾರವನ್ನು ಹೊಂದಿವೆ. ಆಯಾ ರಾಜ್ಯಗಳಿಗೆ ಸಂಬಂಧಪಟ್ಟ ಕಾನೂನುಗಳು ಮತ್ತು ಆಚರಣೆಗಳನ್ನು ಆಧರಿಸಿ ಕೃಷಿ ಭೂಮಿ ಪಡೆಯುವಲ್ಲಿ ಸ್ತ್ರೀ ಪುರುಷರ ಮಧ್ಯೆ ತಾರತಮ್ಯವಾಗಿರುವುದನ್ನು ನಿಖರವಾಗಿ ಗುರುತಿಸಬಹುದು. ಕಾನೂನುಗಳು ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಬದಲಾಗುತ್ತದೆ, ಇದರಿಂದ ಸಹಜವಾಗಿ ಬದಲಾದ ಕಾನೂನುಗಳಿಂದ ಸಂಪೂರ್ಣವಾಗಿ ಮಹಿಳೆಯು ಹಕ್ಕುಗಳನ್ನು ಪಡೆಯುವಲ್ಲಿ ವಿಫಲಳಾಗುತ್ತಾ ಬಂದಿರುವಳು.

**ಎ). ಸಂವಿಧಾನದಲ್ಲಿ**

ನಮ್ಮ ಸಂವಿಧಾನವು ಸ್ತ್ರೀ-ಪುರುಷರ ಸಮಾನತೆಯನ್ನು ಎತ್ತಿಹಿಡಿಯುತ್ತದೆ. ಆದರೆ ಅಷ್ಟೇ ಮುಖ್ಯವಾದ ಆರ್ಥಿಕ ಸಂಪನ್ಮೂಲಕ್ಕೆ ಸಂಬಂಧಿಸಿದ, ವಾರಸುದಾರಿಕೆ ಮತ್ತು ಭೂ ಗರಿಷ್ಠ ಮಿತಿಯ ನಿಗದಿಗಳಲ್ಲಿ ಸ್ತ್ರೀ - ಪುರುಷರ ಅಸಮಾನತೆ ಅತ್ಯಂತ ಹೆಚ್ಚಿನ ಮಟ್ಟದಲ್ಲಿದೆ. ಸಂವಿಧಾನ ರಚನೆಯಲ್ಲಿ ಅಂಬೇಡ್ಕರ್‌ರವರು ಈ ಮಸೂದೆಯೂ ಕೃಷಿ ಭೂಮಿ ಅಲ್ಲದ ಆಸ್ತಿಗೆ ಮಾತ್ರವೇ ಸೀಮಿತಗೊಂಡಿದೆ ಎಂದಿದ್ದಾರೆ. ಆಸ್ತಿಯಲ್ಲಿ ಕೃಷಿ ಭೂಮಿಯನ್ನು ಸೇರಿಸದಿರುವುದಕ್ಕೆ ಎರಡು ವಿವರಣೆಗಳನ್ನು ನೀಡಿದ್ದಾರೆ. ಅವು

೧. ''ಗೌರ್ನಮೆಂಟ್ ಆಫ್ ಇಂಡಿಯಾ ಆಕ್ಟ್ ಶಾಸನದಲ್ಲಿ ಕೇಂದ್ರ ಹಾಗೂ ಪ್ರಾಂತಗಳು ಶಾಸನ ಮಾಡಬೇಕಾದ ವಿಷಯಗಳ ಪಟ್ಟಿ ಇದೆ. ಅಲ್ಲಿ ಭೂಮಿಯನ್ನು 'ಪ್ರಾಂತೀಯ ಪಟ್ಟಿ'ಯಲ್ಲಿ ಸೇರಿಸಿದೆ.

೨. ಫೆಡರಲ್ ನ್ಯಾಯಾಲಯವು ನೀಡಿದ ನ್ಯಾಯಿಕ ವ್ಯಾಖ್ಯಾನದ ಫಲವಾಗಿ 'ಭೂಮಿ' ಎಂಬ ಪದ ಅಥವಾ 'ಭೂಮಿ' ಎಂಬ ವಸ್ತು ಪ್ರಾಂತೀಯ ಪಟ್ಟಿಯಲ್ಲಿ ಸೇರಿದೆ; ಅದು ಗೇಣಿ ಕೊಟ್ಟಿರುವ ಭೂಮಿಯನ್ನು ಮಾತ್ರವಲ್ಲದೆ ಭೂಮಿಗೆ ವಾರಸುದಾರಿಕೆಯನ್ನು ಒಳಗೊಳ್ಳುತ್ತದೆ. ಪರಿಣಾಮವಾಗಿ ಕೇಂದ್ರ ಸರಕಾರವು ಭೂಮಿಯ ವಾರಸುದಾರಿಕೆಗೆ ಸಂಬಂಧಿಸಿದಂತೆ ಕಲ್ಪಿಸುವ ಯಾವುದೇ ಅವಕಾಶವು ಅದರ ಅಧಿಕಾರ ವ್ಯಾಪ್ತಿಯನ್ನು ಮೀರುತ್ತದೆ. ಹೀಗಾಗದಂತೆ ನೋಡಿಕೊಳ್ಳಲು ಸಮಿತಿಯು ಉದ್ದೇಶಪೂರ್ವಕವಾಗಿ ಮಸೂದೆಯ ಅವಕಾಶಗಳಿಂದ ಕೃಷಿ ಭೂಮಿಗೆ ವಿನಾಯಿತಿ ಕೊಟ್ಟಿತು.'' (ಬಾಬಾಸಾಹೇಬ್ ಅಂಬೇಡ್ಕರ್, ೨೦೦೧, ಪು ೪೫) ಈ ಮಸೂದೆಗಳು ಭೂಮಿಯನ್ನು ಕೈಬಿಟ್ಟಿರುವುದರಿಂದ ಎಲ್ಲಾ ಬಗೆಯ ಆಸ್ತಿಗೆ ಒಂದೇ ರೀತಿಯ ಉತ್ತರಾಧಿಕಾರ ನಿಯಮವು ಅನ್ವಯವಾಗುವುದಿಲ್ಲ. ಇಲ್ಲಿ ಆಸ್ತಿಯ ಸ್ವರೂಪವೂ ಬೇರೆ ಬೇರೆ ಆಗುವುದರಿಂದ ಒಂದು ಸಮುದಾಯದ ಸಾಮಾಜಿಕ ಜೀವನದ ಪ್ರಾಮುಖ್ಯತೆಯಲ್ಲಿ ವ್ಯತ್ಯಾಸಗೊಳ್ಳುತ್ತದೆ. ಆದ್ದರಿಂದ ಕೃಷಿ ಭೂಮಿಯ ಉತ್ತರಾಧಿಕಾರಕ್ಕೆ ಸಂಬಂಧಿಸಿದ ನಿಯಮವನ್ನು, ಕೃಷಿಯೇತರ ಆಸ್ತಿಗೆ ಇನ್ನೊಂದು ಉತ್ತರಾಧಿಕಾರದ ನಿಯಮವನ್ನೂ ಹೊಂದಬಹುದಾಗಿದೆ.

## ಬಿ). ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮ

"ಹಿಂದೂ ಉತ್ತರಾಧಿಕಾರ ಅಧಿನಿಯಮದ ೪(೨)ನೇ ಪ್ರಕರಣ ಕೃಷಿ ಹಿಡುವಳಿಗಳ ತುಂಡೀಕರಣವನ್ನು ತಡೆಗಟ್ಟುವುದಕ್ಕಾಗಿ ಅಥವಾ ಅಂಥ ಹಿಡುವಳಿಗಳ ಗರಿಷ್ಠ ಮಿತಿಯನ್ನು ನಿಗದಿಪಡಿಸುವುದಕ್ಕಾಗಿ ಅಥವಾ ಅಂಥ ಹಿಡುವಳಿಗಾಗಿ ಉಪಬಂಧ ಕಲ್ಪಿಸುವ ನಿಯಮಗಳ ರಚನೆಗೆ ರಾಜ್ಯ ಸರ್ಕಾರಗಳಿಗೆ ಅಧಿಕಾರ ನೀಡಲಾಗಿದೆ." (ಗೀತಾ ಕೃಷ್ಣಮೂರ್ತಿ, ೨೦೦೧, ಪು ೧೫೬) ಹೆಣ್ಣು ಮಕ್ಕಳು ಮದುವೆಯಾದ ಮೇಲೆ ಕುಟುಂಬದ ಹೊರಗೆ ಹೋಗಬೇಕು ಹಾಗೂ ಅವರು ವಿವಾಹದ ನಂತರ ಮೂಲ ಕುಟುಂಬದ ಸದಸ್ಯತ್ವವನ್ನು ಕಳೆದುಕೊಳ್ಳುತ್ತಾರೆ ಎಂಬ ಕಾರಣಕ್ಕಾಗಿಯೆ ಹಿಂದೂ ಉತ್ತರಾಧಿಕಾರ ಅಧಿನಿಯಮದಲ್ಲಿ ಕೂಡ ಕೃಷಿ ಭೂಮಿಯ ಕಾಯ್ದೆಯನ್ನು ರಾಜ್ಯ ಸರ್ಕಾರಕ್ಕೆ ವಹಿಸಿಕೊಟ್ಟಿದೆ. ಇದರಿಂದಾಗಿ ಕೆಲವು ರಾಜ್ಯಗಳಲ್ಲಿನ ಪ್ರಕರಣಗಳ ಪ್ರಯೋಜನವನ್ನು ಮಹಿಳೆಯರ ಬದಲು ಪುರುಷರೇ ಪಡೆದ ಉದಾಹರಣೆಗಳಿವೆ. ಹಿಂದೂ ಉತ್ತರಾಧಿಕಾರ ಅಧಿನಿಯಮ ಭೂ ಮಾಲೀಕತ್ವಕ್ಕೆ ಸಂಬಂಧಪಟ್ಟಂತೆ ಅನ್ವಯಿಸುತ್ತದಷ್ಟೇ, ಇದರಿಂದಾಗಿ ಮಹಿಳೆಯರನ್ನು ಅವರ ಸಮಾನ ಹಕ್ಕುಗಳಿಂದ ವಂಚಿತರನ್ನಾಗಿಸುವಂಥ ನಿಯಮಗಳನ್ನು ರಚಿಸಲು ರಾಜ್ಯಗಳು ಸ್ವಾತಂತ್ರ್ಯವನ್ನು ಹೊಂದಿವೆ. ಉದಾ: ಉತ್ತರ ಪ್ರದೇಶ, ಮಧ್ಯ ಪ್ರದೇಶ ಮತ್ತು ಪಂಜಾಬ್ ರಾಜ್ಯಗಳು ಕೃಷಿ ಭೂಮಿಗೆ ಸಂಬಂಧಿಸಿದಂತೆ ರಾಜ್ಯ ಕಾನೂನುಗಳನ್ನು ರಚಿಸುವ ಮೂಲಕ ಹಿಂದೂ ಉತ್ತರಾಧಿಕಾರ ಅಧಿನಿಯಮದ ಉದ್ದೇಶವನ್ನು ಮೊಟಕುಗೊಳಿಸಲು ಯತ್ನಿಸಿವೆ. ಅದರಂತೆ ಉತ್ತರ ಪ್ರದೇಶದ ಜಮೀನ್ದಾರಿ ರದ್ದಿಯಾತಿ ಮತ್ತು ಭೂ ಸುಧಾರಣಾ ಅಧಿನಿಯಮ ೧೯೫೦ರ ಪ್ರಕಾರ, ಪುರುಷ ವಾರಸುದಾರರು ಜೀವಂತವಿದ್ದರೆ, ಮಹಿಳೆಯರು ಉತ್ತರಾಧಿಕಾರಿಗಳಾಗಿ ಅದನ್ನು ಪಡೆಯಲು ಹಕ್ಕುಳ್ಳವರಾಗಿರುವುದಿಲ್ಲ. ಪುರುಷರಿಂದ ಸ್ತ್ರೀಯರು ವಾರಸುದಾರಿಕೆಯಿಂದ ಪಡೆದ ಆಸ್ತಿ ಅವಳ ವಾರಸುದಾರರಿಗೆ ಸೇರುವುದಿಲ್ಲ. ಆದರೆ ಆ ಪುರುಷನ ವಾರಸುದಾರರಿಗೆ ಸೇರುತ್ತದೆ.

ಸಂವಿಧಾನದಲ್ಲಿ ಶಾಸನವನ್ನು ಈಗಾಗಲೇ ರಚಿಸಿದ್ದು, ಆ ಶಾಸನವನ್ನು ರಾಜ್ಯ ವಿಧಾನ ಮಂಡಲ ಮಾರ್ಪಾಟು ಮಾಡಲು ಇಚ್ಛಿಸಿದರೆ ಅಂಥ ಮಾರ್ಪಾಟುಗಳಿಗೆ ರಾಷ್ಟ್ರಾಧ್ಯಕ್ಷರ ಸಮ್ಮತಿಯನ್ನು ಪಡೆಯಬೇಕಾಗುತ್ತದೆ. ಹೀಗಾಗಿ ಕೃಷಿ ಭೂಮಿಯ ವಾರಸುದಾರಿಕೆಯಿಂದ ಸ್ತ್ರೀಯರನ್ನು ಹೊರಗಿಡಬೇಕೆಂಬ ರಾಜ್ಯ ಮಟ್ಟದ ಪ್ರಯತ್ನಗಳನ್ನು ತಡೆಯಲು ಈ ನಿರ್ಬಂಧ ಯಶಸ್ವಿಯಾಗಿದೆ. ಆದರೆ ಗೇಣಿ ಹಕ್ಕು, ಗರಿಷ್ಠಮಿತಿ ನಿಗದಿ ಕಾನೂನುಗಳು ಹಿಂದೂ ಉತ್ತರಾಧಿಕಾರ ಅಧಿನಿಯಮದ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ರಾಷ್ಟ್ರಾಧ್ಯಕ್ಷರ ಸಮ್ಮತಿಯಿಲ್ಲದೆಯೇ ಅದಕ್ಕೆ ಸಂಬಂಧಪಟ್ಟ ಅಂಥ ಕಾನೂನುಗಳನ್ನು ರಾಜ್ಯ ವಿಧಾನ ಮಂಡಲಗಳು ರಚಿಸಬಹುದಾಗಿದೆ. ಹೀಗಾಗಿ ಮಹಿಳೆಗೆ ಕೃಷಿ ಭೂಮಿಗೆ ಸಂಬಂಧಿಸಿದ ಹಕ್ಕುಗಳು ತಾರತಮ್ಯದಿಂದ ಕೂಡಿವೆ.

ಹಿಂದೂ ಉತ್ತರಾಧಿಕಾರ ಅಧಿನಿಯಮ ಮತ್ತು ಅದಕ್ಕಿಂತ ಮುಂಚಿನ ಕಾನೂನುಗಳಲ್ಲಿ ಕೃಷಿ ಭೂಮಿಯನ್ನು ಹೊರತುಪಡಿಸಲಾಗಿದೆ. ಕೃಷಿ ಭೂಮಿಯಲ್ಲಿನ ಮಹಿಳೆಯರ ಹಕ್ಕುಗಳು ಪ್ರತ್ಯೇಕವಾಗಿ ಉಳಿಯಲು ಇರುವ ಮುಖ್ಯವಾದ ಅಂಶಗಳು ಎರಡು ಅವು -

"೧. ಶಾಸನ ರಚನಾ ಅಧಿಕಾರ, ಸಂಯುಕ್ತ ಸ್ವರೂಪ ಸರಕಾರ ವ್ಯವಸ್ಥೆಯಲ್ಲಿ ಕೇಂದ್ರ ಹಾಗೂ ರಾಜ್ಯಗಳ ನಡುವೆ ಹಂಚಿಕೆಯಾಗುತ್ತದೆ. ಕೃಷಿಭೂಮಿಗೆ ಸಂಬಂಧಿಸಿದ ಶಾಸನ ರಚನೆಯಲ್ಲಿ ರಾಜ್ಯಗಳಿಗೆ ಗಣನೀಯ ಅಧಿಕಾರ ವಿರುತ್ತದೆ. ಹೀಗಾಗಿ ಆಯಾ ರಾಜ್ಯಗಳಲ್ಲಿನ ಸಾಮಾಜಿಕ ಮನೋಭಾವ, ಕಾನೂನುಗಳ ಮೂಲಕ ಸಮಸ್ಯೆಗಳನ್ನು ಎದುರಿಸುವ ರೀತಿ ಹಾಗೂ ಆಯಾ ರಾಜ್ಯಗಳ ಆಡಳಿತ ಹಿನ್ನೆಲೆ ಇವುಗಳನ್ನು ಆಯಾ ರಾಜ್ಯಗಳಲ್ಲಿ ಕೃಷಿ ಭೂಮಿಗೆ (ಕೃಷಿ ಭೂಮಿಗೆ ಕೆಲವು ಪ್ರವರ್ಗಗಳಿಗೆ) ಸಂಬಂಧಿಸಿದಂತೆ ಮಹಿಳೆಯರಿಗೆ ನೀಡಿರುವ ಹಕ್ಕುಗಳು ಪ್ರತಿಬಿಂಬಿಸುತ್ತವೆ.

೨. ಭೂ ಸುಧಾರಣಾ ನೀತಿಯನ್ನು ರೂಪಿಸುವಾಗ ಮರು ಹಂಚಿಕೆ ನ್ಯಾಯದ ತತ್ವಗಳು ಹಾಗೂ ದಕ್ಷತೆಯನ್ನು ಎಂದರೆ ಉಳುವವನಿಗೇ ಭೂಮಿ, ಗರಿಷ್ಠ ಮಿತಿಯ ನಿಗದಿ, ತುಂಡೀಕರಣ ತಡೆ ಮುಂತಾದ ಅಂಶಗಳನ್ನು ಆಧರಿಸಿ ಶಾಸನ ರಚನೆ ಮಾಡಲಾಗುತ್ತದೆ. ಆದರೆ ಯಾವ ಸಂದರ್ಭದಲ್ಲಿಯೂ ಇದರ ಹಿಂದಿರುವ ಸ್ತ್ರೀ ಪುರುಷ ತಾರತಮ್ಯವನ್ನು ಗಣನೆಗೆ ತೆಗೆದುಕೊಂಡಿಲ್ಲ.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೮೨).

ಹೀಗಾಗಿ ಭೂಮಿಗೆ ಸಂಬಂಧಿಸಿದಂತೆ ಸ್ತ್ರೀಯರಿಗಿರುವ ಹಕ್ಕುಗಳು ತಾರತಮ್ಯದಿಂದ ಕೂಡಿವೆ. ಮತ್ತು ಈ ತಾರತಮ್ಯ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿದೆ. ಅನೇಕ ರಾಜ್ಯಗಳಲ್ಲಿ ಗೇಣಿಗೆ ಕೊಟ್ಟಿರುವ ಭೂಮಿಗೆ ಸಂಬಂಧಿಸಿದ ವಾರಸುದಾರಿಕೆ ನಿಯಮಗಳು ವೈಯಕ್ತಿಕ ಕಾನೂನುಗಳಲ್ಲಿ ನಿರ್ದಿಷ್ಟಪಡಿಸಿರುವ ವಾರಸುದಾರಿಕೆ ಕ್ರಮಕ್ಕಿಂತ ಭಿನ್ನವಾಗಿವೆ. ಈ ಎಲ್ಲಾ ನಿಯಮಗಳಲ್ಲಿಯೂ ಸಗೋತ್ರಜರಾದ ಪುರುಷರಿಗೆ ಆದ್ಯತೆಯನ್ನು ನೀಡಲಾಗಿದೆ. ಪುರುಷ ವಾರಸುದಾರರು ಇಲ್ಲದಿದ್ದಲ್ಲಿ ಮಾತ್ರ ವಿಧವೆಯರು ಸೀಮಿತವಾದ ಹಕ್ಕನ್ನು ಪಡೆಯುತ್ತಾರೆ. ''ಜಮ್ಮು ಮತ್ತು ಕಾಶ್ಮೀರ, ಹರಿಯಾಣ, ಹಿಮಾಚಲ ಪ್ರದೇಶ, ಪಂಜಾಬ್ ರಾಜ್ಯಗಳಲ್ಲಿ ಹೆಣ್ಣುಮಕ್ಕಳನ್ನು ಮತ್ತು ಅಕ್ಕ ತಂಗಿಯರನ್ನು (ಸಹೋದರಿ) ಸಂಪೂರ್ಣವಾಗಿ ಆಸ್ತಿಯಿಂದ ವಂಚಿತರನ್ನಾಗಿ ಮಾಡಲಾಗಿದೆ. ಆದರೆ ದೆಹಲಿ ಮತ್ತು ಉತ್ತರ ಪ್ರದೇಶಗಳಲ್ಲಿ ಹೆಣ್ಣುಮಕ್ಕಳನ್ನು ಮತ್ತು ಅಕ್ಕ - ತಂಗಿಯರು ವಾರಸುದಾರರಾಗಿರುವರು ಆದರೆ ಆಸ್ತಿ ಹಂಚುವಾಗ - ಅವರು ಆಸ್ತಿಯಲ್ಲಿ ಹಕ್ಕು ಪಡೆಯುವುದು ಮಾತ್ರ ಕೊನೆಯಲ್ಲಿ.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೮೩). ಮಹಿಳೆಯರು ಮತ್ತು ವಿಧವೆಯರು ಆಸ್ತಿಯಲ್ಲಿ ಸೀಮಿತ ಹಕ್ಕನ್ನು ಹೊಂದಿದ್ದು ಅವರ ಮರಣದ ನಂತರ ಅವು ಅವಳ ಪತಿಯ ವಾರಸುದಾರರಿಗೆ ಸೇರುತ್ತದೆ. ವಿಧವೆಯಾದವಳು ಮರುವಿವಾಹವಾದರೆ ಅಥವಾ ಭೂಮಿಯನ್ನು ಉಳುಮೆ ಮಾಡದೆ ಹಾಗೆಯೇ ಬಿಟ್ಟಿದ್ದರೆ ಅವಳು ಆ ಭೂಮಿಯ ಮೇಲಿನ ಹಕ್ಕನ್ನು ಕಳೆದುಕೊಳ್ಳುತ್ತಾಳೆ. ಗೇಣಿ ಭೂಮಿಯ ವಾರಸುದಾರಿಕೆ ಕುರಿತು ಪ್ರತ್ಯೇಕ ನಿಯಮಗಳನ್ನು ರಚಿಸದಿದ್ದರೆ ಆಯಾ ಧರ್ಮದವರಿಗೆ ಅನ್ವಯವಾಗುವ ವೈಯಕ್ತಿಕ ಕಾನೂನುಗಳೇ ಅನ್ವಯವಾಗುತ್ತವೆ. ಕರ್ನಾಟಕದಲ್ಲಿಯೂ ವೈಯಕ್ತಿಕ ಕಾನೂನುಗಳೇ ಅನ್ವಯವಾಗುತ್ತವೆ.

**ಸಿ). ಭೂ ಸುಧಾರಣಾ ಅಧಿನಿಯಮ - ೧೯೬೧**

ಕರ್ನಾಟಕದಲ್ಲಿ ಪ್ರಥಮ ಭೂ ಸುಧಾರಣ ಶಾಸನವನ್ನು ೧೯೬೧ರಲ್ಲಿ ಜಾರಿಗೆ ತರಲಾಯಿತು. ನಂತರ ೧೯೬೫ ರಲ್ಲಿ ಮತ್ತು ೧೯೭೩ ರಲ್ಲಿ ಈ ಶಾಸನಕ್ಕೆ ತಿದ್ದುಪಡಿಗಳನ್ನು ತರಲಾಯಿತು. ಉಳುವವನನ್ನು ಭೂಮಿಯ ಒಡೆಯನನ್ನಾಗಿ ಮಾಡುವುದು ಭೂ ಸುಧಾರಣಾ ಕಾರ್ಯಕ್ರಮಗಳ ಗುರಿಯಾಗಿದೆ. ಭೂ ಸುಧಾರಣೆಯಲ್ಲಿ ಸಾಮಾಜಿಕ ನ್ಯಾಯದ ಕಳಕಳಿ ಅಡಕಗೊಂಡಿದೆ. ಭೂ ಸುಧಾರಣೆಯ ಕ್ರಮಗಳಿಗೆ ಅಡಿಗಲ್ಲಾದ ಸಿದ್ಧಾಂತವೆಂದರೆ 'ಉಳುವವನಿಗೇ ಭೂಮಿ'ಎಂಬುದು. ಇದರಿಂದ ದುಡಿಯುವವನಿಗೆ ದುಡಿಮೆಯ ಪ್ರತಿಫಲ ದೊರೆಯಬೇಕು ಎನ್ನುವುದೇ ಭೂ ಸುಧಾರಣಾ ಕಾನೂನಿನ ಮುಖ್ಯ ತಿರುಳು ಆಗಿದೆ.

''ಭೂ ಸುಧಾರಣೆ ಕುರಿತು ೧೯೭೦ರಲ್ಲಿ ನಡೆದ ಮುಖ್ಯಮಂತ್ರಿಗಳ ಸಮ್ಮೇಳನದ ನಂತರ ೧೯೭೧ರಲ್ಲಿ ಕೇಂದ್ರ ಕೃಷಿ ಸಚಿವರ ಅಧ್ಯಕ್ಷತೆಯಲ್ಲಿ ಭೂ ಸುಧಾರಣೆಗಳ ಕೇಂದ್ರ ಸಮಿತಿಯನ್ನು ರಚಿಸಲಾಯಿತು. ಇತರ ಶಿಫಾರಸ್ಸುಗಳೊಂದಿಗೆ, ಎಲ್ಲಾ ರಾಜ್ಯಗಳಲ್ಲಿಯೂ ಕುಟುಂಬ ಎಂಬುದರ ಪರಿಭಾಷೆ ಒಂದೇ ಆಗಿರಬೇಕು ಮತ್ತು ಅದು ಒಬ್ಬ ಪುರುಷ ಅವನ ಹೆಂಡತಿ ಮತ್ತು ಅವರ ಮಕ್ಕಳನ್ನು ಒಳಗೊಂಡಿರಬೇಕು. ಕುಟುಂಬದಲ್ಲಿ ೫ ಜನಕ್ಕಿಂತ ಹೆಚ್ಚು ಸದಸ್ಯರಿದ್ದರೆ, ಈ ಐದು ಜನ ಸದಸ್ಯರಿರುವ ಕುಟುಂಬಕ್ಕೆ ಅನ್ವಯವಾಗುವ ಗರಿಷ್ಠಮಿತಿಯ, ಎರಡರಷ್ಟು

ಗರಿಷ್ಠಮಿತಿಗೆ ಒಳಪಟ್ಟ ಪ್ರತಿ ಹೆಚ್ಚಿನ ಸದಸ್ಯರಿಗೆ ಹೆಚ್ಚುವರಿ ಭೂಮಿಯನ್ನು ಹಂಚಿಕೆ ಮಾಡಬೇಕು ಎಂದು ಶಿಫಾರಸ್ಸು ಮಾಡಿತು.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೮೪) ಆದರೆ ಈ ಶಿಫಾರಸ್ಸುಗಳನ್ನು ಪುನರವಲೋಕಿಸಬೇಕೆಂದು ಉನ್ನತಾಧಿಕಾರಿಗಳ ಸಮಿತಿ ರಚಿಸಲಾಯಿತು. ಆದರೆ ಈ ಸಮಿತಿಯು ಇದನ್ನು ಒಪ್ಪಲಿಲ್ಲ. ಈ ಸಮಿತಿಯು ಗರಿಷ್ಠಮಿತಿಯನ್ನು ಪತಿ - ಪತ್ನಿ ಮತ್ತು ಮೂವರು ಮಕ್ಕಳು ಇರುವ ಒಂದು ಕುಟುಂಬದ ಸದಸ್ಯರಿಗೆ ಅನ್ವಯಿಸಬೇಕೆಂದು ಶಿಫಾರಸ್ಸು ಮಾಡಿತು.

''ಕೃಷಿ ಭೂ ಹಿಡುವಳಿಗಳಲ್ಲಿಯ ಗರಿಷ್ಠಮಿತಿ ನಿಗದಿಯ ಬಗ್ಗೆ ೧೯೭೨ರಲ್ಲಿ ನಡೆದ ಮುಖ್ಯಮಂತ್ರಿಗಳ ಸಮ್ಮೇಳನದಲ್ಲಿ, ಮೇಲಿನ ಎರಡು ಶಿಫಾರಸ್ಸುಗಳನ್ನು ಪರಿಗಣಿಸಿತು. ಪತಿ - ಪತ್ನಿ, ಅಪ್ರಾಪ್ತ ವಯಸ್ಕ ಮಕ್ಕಳನ್ನು ಕುಟುಂಬವೆಂದು ಪರಿಗಣಿಸಬೇಕು ಮತ್ತು ಐದು ಜನ ಸದಸ್ಯರಿಗಿಂತ ಹೆಚ್ಚು ಜನ ಸದಸ್ಯರಿದ್ದರೆ, ಹೆಚ್ಚಿರುವ ಸದಸ್ಯರಿರಾಗಿ ಹೆಚ್ಚುವರಿ ಭೂಮಿಯನ್ನು ಮಂಜೂರು ಮಾಡಬೇಕು. ಆದರೆ ಇದು ಕುಟುಂಬದಲ್ಲಿರುವ ಐದು ಜನ ಸದಸ್ಯರಿಗೆ ಮಾತ್ರ ನಿಗದಿಪಡಿಸಿರುವ ಗರಿಷ್ಠ ಮಿತಿಯ ಎರಡಕ್ಕಿಂತ ಹೆಚ್ಚಾಗತಕ್ಕುದಲ್ಲ. ಅಲ್ಲದೆ ಪ್ರಾಪ್ತ ವಯಸ್ಕನಾದ ಪ್ರತಿ ಗಂಡು ಮಗನನ್ನು ಒಂದು ಪ್ರತ್ಯೇಕ ಘಟಕವೆಂದು ಪರಿಗಣಿಸಬೇಕು ಎಂಬ ಮಾನದಂಡವನ್ನು ಅಂಗೀಕರಿಸಲಾಯಿತು.'' (ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೮೪) ಹಾಗಾಗಿ ಸ್ತ್ರೀ - ಪುರುಷರ ತಾರತಮ್ಯ ಈ ನಿಯಮಗಳಲ್ಲೂ ಕಂಡು ಬಂದಿತು. ಇಂದಿಗೂ ಈ ವಿಷಯಗಳ ಕುರಿತು ರಾಜ್ಯಗಳ ನಡುವೆ ಏಕರೂಪತೆಯಿಲ್ಲ.

ಈ ಮೇಲಿನ ನಿಯಮಗಳು ಲಿಂಗ ತಾರತಮ್ಯಗಳಿಂದ ಕೂಡಿದ್ದು, ಇವು ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುತ್ತವೆ. ಇದರಿಂದ ಇವು ಸಂವಿಧಾನಕ್ಕೆ ವಿರುದ್ಧವಾದವುಗಳು ಎಂದು ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಆದರೆ ೧೯೫೧ರಲ್ಲಿ ಸಂವಿಧಾನಕ್ಕೆ ತಂದ ಮೊದಲನೆಯ ತಿದ್ದುಪಡಿಯಲ್ಲಿಯೇ ಭೂ ಸುಧಾರಣಾ ಶಾಸನದ ಸಿಂಧುತ್ವದ ರಕ್ಷಣೆಗಾಗಿ ಒಂದು ಉಪಬಂದವನ್ನು ಕಲ್ಪಿಸಲಾಗಿತ್ತು. ಸ್ತ್ರೀ - ಪುರುಷರ ಅಸಮಾನತೆಯಿಂದ ಕೂಡಿರುವ ಈ ಎಲ್ಲ ಭೂ ಗರಿಷ್ಠ ಮಿತಿ ನಿಗದಿಪಡಿಸುವ ಕಾನೂನುಗಳು ಸಂವಿಧಾನದ ೯ನೇ ಅನುಸೂಚಿಯಲ್ಲಿಯೇ ಸೇರಿವೆ. ಹೀಗಾಗಿ ಯಾವುದೇ ಕಾರಣಕ್ಕಾಗಿಯೂ ಗರಿಷ್ಠಮಿತಿ ನಿಗದಿಪಡಿಸುವ ಕಾನೂನನ್ನು ಪ್ರಶ್ನಿಸುವ ಅವಕಾಶ ಇಲ್ಲದಾಯಿತು.

ಭೂ ಸಾಧಾರಣಾ ಕಾನೂನಿನಲ್ಲೂ ಗರಿಷ್ಠ ಮಿತಿಯನ್ನು ನಿಗದಿಪಡಿಸುವಲ್ಲಿಯೂ ಲಿಂಗ ತಾರತಮ್ಯ ಮಾಡಲಾಗಿದೆ. ಸ್ತ್ರೀ - ಪುರುಷರ ನಡುವೆ ಮೂರು ವಿಷಯಗಳಲ್ಲಿ ಈ ಅಸಮಾನತೆ ಮಾಡಲಾಗಿದೆ. ೧. ಕುಟುಂಬದ ಪರಿಭಾಷೆ ೨. ವಯಸ್ಕ ಗಂಡು ಮಕ್ಕಳಿಗೆ ಹೆಚ್ಚುವರಿ ಭೂಮಿ ಹಂಚಿಕೆಯಾದರೆ, ವಯಸ್ಕ ಹೆಣ್ಣು ಮಕ್ಕಳಿಗೆ ಈ ಅವಕಾಶ ಇಲ್ಲದಿರುವುದು. ೩. ಪತಿಯನ್ನು ಒಂದು ಘಟಕ ಎಂದು ಪರಿಗಣಿಸಿರುವುದು, ಆದರೆ ಪತ್ನಿಯನ್ನು ಒಂದು ಸ್ವತಂತ್ರ ಘಟಕವನ್ನಾಗಿ ಪರಿಗಣಿಸದೆ ಇರುವುದು.

ಕುಟುಂಬದ ಪರಿಭಾಷೆಯಲ್ಲಿ ಎಲ್ಲಾ ರಾಜ್ಯಗಳಲ್ಲಿ ವ್ಯತ್ಯಾಸವಿದ್ದರೂ, ಎಲ್ಲಾ ರಾಜ್ಯಗಳಲ್ಲಿಯೂ ವಯಸ್ಕ ಗಂಡು ಮಕ್ಕಳನ್ನು ವಿಶೇಷವಾಗಿ ಕಾಣಲಾಗಿದೆ. ಕರ್ನಾಟಕ, ಕೇರಳ, ತಮಿಳುನಾಡು, ಜಮ್ಮು ಮತ್ತು ಕಾಶ್ಮೀರ, ಪಶ್ಚಿಮ ಬಂಗಾಳ ಮೊದಲಾದ ರಾಜ್ಯಗಳಲ್ಲಿಯೇ ಮಾತ್ರ ಅವಿವಾಹಿತ ಹೆಣ್ಣು ಮಕ್ಕಳನ್ನು ಭೂ ಹಂಚಿಕೆಯ ಸಮಯದಲ್ಲಿ ಕುಟುಂಬದ ಸದಸ್ಯರನ್ನಾಗಿ ಪರಿಗಣಿಸಲಾಗಿದೆ. ಆದರೆ ಉಳಿದ ಯಾವುದೇ ರಾಜ್ಯಗಳಲ್ಲಿಯೂ ಅವಿವಾಹಿತ ಹೆಣ್ಣು ಮಕ್ಕಳನ್ನು ಭೂ ಹಂಚಿಕೆಯ ಸಂದರ್ಭದಲ್ಲಿ ಸ್ವತಂತ್ರ ಘಟಕವಾಗಿ ಅಥವಾ ಕುಟುಂಬದ ಸದಸ್ಯಳನ್ನಾಗಿ ಪರಿಗಣಿಸಿಲ್ಲ. ಕುಟುಂಬದ ಸದಸ್ಯರನ್ನಾಗಿ ಅಥವಾ ಪ್ರತ್ಯೇಕ ಘಟಕ ಎಂದು ಪರಿಗಣಿಸಲಾಗಿರುವವರ

ಜೀವನ ನಿರ್ವಹಣೆ ಈ ಗರಿಷ್ಠ ಮಿತಿಯ ಭೂ ಹಂಚಿಕೆ ನಿಯಮಗಳ ಅಡಿಯಲ್ಲಿ, ಹಂಚಿಕೆ ಮಾಡಲಾದ ಭೂಮಿಯಿಂದ ನಡೆಯುತ್ತವೆ ಎಂಬುದು ಭೂಮಿಯ ಗರಿಷ್ಠ ಮಿತಿಯನ್ನು ನಿಗದಿಪಡಿಸುವುದರ ಪೂರ್ವಕಲ್ಪನೆ. ಆದರೆ ಮೇಲೆ ಹೇಳಿದ ಕೆಲವು ರಾಜ್ಯಗಳನ್ನು ಹೊರತುಪಡಿಸಿ ಉಳಿದ ಯಾವುದೇ ರಾಜ್ಯಗಳಲ್ಲಿ ಹೆಣ್ಣು ಮಕ್ಕಳನ್ನು ಕುಟುಂಬದ ಸದಸ್ಯರನ್ನಾಗಿ ಪರಿಗಣಿಸದೇ ಇರುವುದರಿಂದ ಅವರ ಜೀವನ ನಿರ್ವಹಣೆಗೆ ಯಾವುದೇ ವ್ಯವಸ್ಥೆಯನ್ನು ಕಲ್ಪಿಸಲಾಗಿಲ್ಲ. ಆದರೆ ಹಂಚುವ ಸಮಯದಲ್ಲಿ ಗಂಡು ಮಕ್ಕಳನ್ನು ಪರಿಗಣಿಸಲಾಗಿದೆ. ಹೀಗಾಗಿ ಗಂಡು ಮಕ್ಕಳು ಭೂಮಿಯನ್ನು ಪಡೆಯುತ್ತಿರುವರು.

**ಡಿ). ೧೯೭೪ರಲ್ಲಿ ಜಾರಿಗೆ ಬಂದ 'ಉಳುವವನೆ ಹೊಲದೊಡೆಯ' ಕಾನೂನು**

ಕರ್ನಾಟಕದ ಮುಖ್ಯಮಂತ್ರಿ ದೇವರಾಜ ಅರಸರು ೧೯೭೪ರಲ್ಲಿ ಕರ್ನಾಟಕದಲ್ಲಿ ಭೂ ಸುಧಾರಣೆಯನ್ನು ಜಾರಿಗೆ ತರುವ ಮೂಲಕ ಬಂದಂಥ ಕಾನೂನಿದು. ಬ್ರಿಟೀಷರು ಭಾರತಕ್ಕೆ ಬರುವ ಮೊದಲು ಕೃಷಿ ಭೂಮಿಯ ಮೇಲೆ ಅಂತಹ ಒತ್ತಡವೇನಿರಲಿಲ್ಲ. ಒಂದೊಂದು ರಾಜ್ಯವೂ ಒಬ್ಬೊಬ್ಬ ಪಾಳೆಯಗಾರ ಮತ್ತು ರಾಜನಿಗೆ ಸೇರಿದ್ದರೂ ಕೂಡ ಕೃಷಿ ಭೂಮಿಯು ಕೃಷಿಕನ ಕೈಯಲ್ಲೆ ಇತ್ತು. ಬ್ರಿಟಿಷರು ಭೂಮಿಯ ಮೇಲೆ ಅಧಿಕವಾದ ಕಂದಾಯವನ್ನು ಪಡೆಯುವ ಉದ್ದೇಶದಿಂದ ಅವರು ಭೂಮಿಯಲ್ಲಿ ಭಾಗಗಳನ್ನು ಮಾಡಿ ಭೂಮಿಯನ್ನು ಮಾರುವ ಮತ್ತು ಕೊಳ್ಳುವ ಅಧಿಕಾರವನ್ನು ಪಡೆದರು. ಜಮೀನ್ದಾರಿಕೆ ಪದ್ಧತಿಯಲ್ಲಿ ರೈತರು ಸಂಪೂರ್ಣವಾಗಿ ಸ್ವಾತಂತ್ರ್ಯವನ್ನು ಕಳೆದುಕೊಂಡರು. ಕಾರಣ ಕಂದಾಯವನ್ನು ಹಣದ ರೂಪದಲ್ಲಿ ಕೊಡಲಾಗದೇ ರೈತರು ಅಲ್ಲಿಯ ಶ್ರೀಮಂತರಿಗೆ ಭೂಮಿಯನ್ನು ಮಾರಿದರು. ಇದರಿಂದ ಭೂಮಿಯನ್ನೇ ನಂಬಿದ್ದ ರೈತರು ಭೂಮಿ ಇದ್ದವರು ಇಲ್ಲದವರಂತಾಗಿ ಜಮೀನ್ದಾರರ ಭೂಮಿಯಲ್ಲಿ ದುಡಿಯತೊಡಗಿದರು. ಸ್ವಾತಂತ್ರ್ಯದ ನಂತರ ದೇವರಾಜ ಅರಸರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಭೂ ಸುಧಾರಣೆಯ ಅಧಿನಿಯಮವನ್ನು ಜಾರಿಗೆ ತಂದರು. ಇದರ ಮೂಲಕ ಭೂ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಿದರು. ಈ ಕಾಯ್ದೆಯ ಮೂಲಕ 'ಉಳುವವನೆ ಹೊಲದೊಡೆಯ' ಎನ್ನುವ ಕ್ರಾಂತಿಕಾರಕ ಕಾನೂನು ೧೯೭೪ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಯ ಪ್ರಕಾರ ''ಎಲ್ಲಾ ಗೇಣಿದಾರರಿಗೆ ಭೂಮಿಯ ಹಕ್ಕು ನೀಡುವ ಅವಕಾಶವನ್ನು ಕಲ್ಪಿಸಲಾಯಿತು. ಭೂ ಮಾಲೀಕರು ಒಮ್ಮೆ ಗೇಣಿಗೆ ಕೊಟ್ಟ ಭೂಮಿಯನ್ನು ಯಾವುದೇ ಕಾರಣಕ್ಕೆ ಹಿಂದಕ್ಕೆ ಪಡೆಯದಂತೆ ನಿರ್ಬಂಧ ಹೇರಲಾಯಿತು. ಅಲ್ಲದೆ ಭೂಮಿಯನ್ನು ಕೇವಲ ಹತ್ತು ಯುನಿಟ್‌ಗಳಿಗೆ ಇಳಿಸುವುದರ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಊಳಿಗಮಾನ್ಯ ಪದ್ಧತಿಯನ್ನು ಅಳಿಸಿ ಹಾಕುವ ದಿಟ್ಟ ಹೆಜ್ಜೆ ಇದಾಗಿತ್ತು. ಗೇಣಿ ರಶೀದಿ, ಗೇಣಿ ಚೀಟಿಯಂತಹ ದಾಖಲೆ ಇಲ್ಲದಿದ್ದರೂ ವಾಸ್ತವಿಕವಾಗಿ ಒಕ್ಕಲುತನದಲ್ಲಿದ್ದವರನ್ನು ಪರಿಗಣಿಸಿ ಅವರಿಗೆ ಭೂಮಿಯ ಹಕ್ಕು ನೀಡಲು ಸಾಧ್ಯವಾಗುವಂತೆ ವಿಶೇಷವಾದ ಭೂ ನ್ಯಾಯ ಮಂಡಳಿಗಳನ್ನು ರಚಿಸಲು ಈ ಮಸೂದೆಯು ಅವಕಾಶ ನೀಡಿತು.'' (ಚಂದ್ರಶೇಖರ ದಾಮ್ಲೆ, ೨೦೦೬, ಪು ೧೯೨)

ಈ ಕಾಯ್ದೆಯ ಅನ್ವಯ ಕೆಲವು ರೈತರು ಭೂಮಿಯನ್ನು ಪಡೆದರು ಆದರೆ ಅಲ್ಪ ಪ್ರಮಾಣದಲ್ಲಿ ಮಾತ್ರ. ಈ ಕಾಯ್ದೆಯ ಪ್ರಕಾರ ಭೂಮಿಯಿಲ್ಲದವರಿಗೆ ಉಳುಮೆ ಮಾಡುತ್ತಿರುವ ಭೂಮಿಯು ದೊರಕುವಂತಾಯಿತು. ಆದರೆ ಈ ಕಾನೂನು ಸಂಪೂರ್ಣವಾಗಿ ಅನುಕೂಲವಾದದ್ದು ಯಾರಿಗೆಂದರೆ ಭೂಮಿಯನ್ನು ಉಳುಮೆ ಮಾಡುವವನಿಗೆ ಬಿಟ್ಟು ನಗರವನ್ನು ಸೇರಿದ ಮತ್ತು ಭೂಮಿಯ ಕಂದಾಯ ಪಾಣಿ ಪಟ್ಟಿಯನ್ನು ಉಳ್ಳವನಿಗೆ ಮಾತ್ರ, ಅಕ್ಷರಸ್ಥರು, ಸಮಾಜದಲ್ಲಿ ವ್ಯವಹಾರ ಜ್ಞಾನ ಇದ್ದವರು ಮಾತ್ರ ಉಳುಮೆಯ ಭೂಮಿಯನ್ನು ಪಡೆಯುವಂತಾಯಿತು. ಹಾಗೆಯೇ

ಈ ಕಾಯ್ದೆಯಡಿಯಲ್ಲಿ ಕೆಲವು ಜನ ದಲಿತರು ಭೂಮಿಯನ್ನು ಪಡೆದರು. ಆದರೆ ಅವರಲ್ಲಿ ಯಾವುದೇ ಭೂ ದಾಖಲೆಗಳು ಇರದ ಕಾರಣ ದಲಿತರು ಉಳುಮೆ ಭೂಮಿಯ ಮೇಲಿನ ಹಕ್ಕನ್ನು ಕಳೆದುಕೊಂಡರು. ಈ ಕಾಯ್ದೆಯ ಹೆಸರೆ ಸೂಚಿಸುವಂತೆ ಉಳುವವನಿಗೆ ಭೂಮಿ ಅಂದರೆ ಭೂಮಿಯ ಉಳುಮೆ ಮಾಡುವವನು ಪುರುಷನು ಹೀಗಾಗಿ ಈ ಕಾಯ್ದೆಯಲ್ಲಿ ಮಹಿಳೆಯರಿಗೆ ಆದ್ಯತೆಯನ್ನು ನೀಡದೆ ಕೇವಲ ಪುರುಷರನ್ನು ಮಾತ್ರ ಒಳಗೊಂಡಿದೆ. ಈ ಕಾಯ್ದೆಯು ಪುರುಷರಿಗೆ ಮಾತ್ರ ಅನುಕೂಲವನ್ನು ಮಾಡಿಕೊಟ್ಟಿದೆ.

**೩). ೨೦೦೪ರ ಹಿಂದೂ ಉತ್ತರಾಧಿಕಾರ ತಿದ್ದುಪಡಿ ಮಸೂದೆ.**

ಕೃಷಿ ಭೂಮಿಯನ್ನು ಆಸ್ತಿಗೆ ಸರಿಸಮಾನವಾಗಿ ಈ ಮಸೂದೆಯಲ್ಲಿ ತರಲಾಗಿದೆ. ೧೯೫೬ರ ಕಾಯ್ದೆಯಲ್ಲಿರುವ ಕೃಷಿ ಭೂಮಿಯನ್ನು ಹೊರತುಪಡಿಸುವಂತಹ ೪ನೇ ವಿಧಿ (೨)ಯನ್ನು ರದ್ದು ಪಡಿಸಲಾಗಿದೆ. ಈ ಮಸೂದೆಯಲ್ಲಿಯೂ ಕೃಷಿ ಭೂಮಿಯ ಮೇಲಿನ ಹಕ್ಕು ರಾಜ್ಯಗಳ ಅಧೀನಕ್ಕೆ ಒಳಪಟ್ಟಿದೆ. ಎಲ್ಲಾ ರೀತಿಯಿಂದಲೂ ಈ ಕಾನೂನು ಮಹಿಳೆಯರನ್ನು ಸಮಾನವಾಗಿ ಕಾಣುವಂತೆ ಮಾಡಲಾಗಿದೆ. ''ಮಹಿಳೆಯರ ಪರ ಇಲ್ಲದ ಗೇಣಿ ಕಾನೂನುಗಳನ್ನು ಹೊಂದಿರುವ ರಾಜ್ಯಗಳಾದ ಹರಿಯಾಣ, ಪಂಜಾಬ್, ಹಿಮಾಚಲ ಪ್ರದೇಶ, ದೆಹಲಿ, ಉತ್ತರ ಪ್ರದೇಶ, ಜಮ್ಮು ಮತ್ತು ಕಾಶ್ಮೀರ.'' (ಮಂಜುಳಾ ಸಿ.ಜಿ., ೨೦೦೫, ಪು ೪೪) ಇಲ್ಲಿ ಪುರಾತನ ಮಿತಾಕ್ಷರ ವ್ಯವಸ್ಥೆಯ ಪ್ರಕಾರ, ಪುರುಷ ಸಂತತಿಗೆ ಹೆಚ್ಚು ಒತ್ತು ಕೊಡಲಾಗಿದೆ. ದಕ್ಷಿಣ ಭಾರತದಲ್ಲಿ ಗೇಣಿದಾರ ಕಾನೂನು ಮೌನವಾಗಿದೆ. ಕೇರಳದಲ್ಲಿ ಅವಿಭಕ್ತ ಕುಟುಂಬದ ಆಸ್ತಿ ವ್ಯವಸ್ಥೆಯನ್ನು ರದ್ದುಮಾಡಲಾಗಿದೆ. ಇದರಿಂದ ಕೃಷಿ ಭೂಮಿ ಮತ್ತಷ್ಟು ಚೂರು ಚೂರಾಗುವುದೆಂಬ ಭಯವಿದೆ. ಆದರೆ ಗ್ರಾಮೀಣ ಪ್ರದೇಶದ ಆಸ್ತಿಗಳಲ್ಲಿಯೇ ಅತಿ ಮುಖ್ಯವಾದ ಆಸ್ತಿ ಎಂದರೆ ಕೃಷಿ ಭೂಮಿಯ ಆಸ್ತಿ. ಈ ಭೂಮಿಯಲ್ಲಿ ಲಿಂಗ ಸಮಾನ ಹಕ್ಕುಗಳನ್ನು ಒದಗಿಸುವುದು ಲಿಂಗ ನ್ಯಾಯಕ್ಕಷ್ಟೇ ಅಲ್ಲ; ಆರ್ಥಿಕ, ಸಾಮಾಜಿಕ ಪ್ರಗತಿಗೂ ಮುಖ್ಯವಾಗಿದೆ.

ಕೃಷಿ ಭೂಮಿಯ ವಿಚಾರದಲ್ಲಿ ತರುವಂತಹ ಲಿಂಗ ಸಮಾನತೆ ಒಬ್ಬ ಮಹಿಳೆಗೆ ಅಲ್ಲ. ಆಕೆಯ ಕುಟುಂಬ ಬಡತನಕ್ಕೆ ಸಿಲುಕಿಸುವ ಅಪಾಯವನ್ನು ತಪ್ಪಿಸುತ್ತದೆ. ಮಹಿಳೆಯ ಬದುಕಿನ ಆಯ್ಕೆಗಳು ಹೆಚ್ಚಾಗುತ್ತವೆ. ಅಲ್ಲದೆ ಕೌಟುಂಬಿಕ ಹಿಂಸೆಯ ಪ್ರಮಾಣವು ತಗ್ಗುತ್ತದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರಣಗಳಿಂದ ಸ್ತ್ರೀ-ಪುರುಷರ ಮಧ್ಯೆ ಬೆಳೆದು ಬಂದಿರುವಂತಹ ತಾರತಮ್ಯವನ್ನು ಪುರುಷ ಸಮುದಾಯದಿಂದ ಸ್ತ್ರೀ ಸಮುದಾಯದ ಮೇಲೆ ಅಲಿಖಿತ ಕಾನೂನುಗಳಂತೆ ಹೇರಲಾಗಿದೆ. ಈ ತಾರತಮ್ಯಕ್ಕೆ ಒಳಗಾದವಳು ಮೊದಲಿನಿಂದಲೂ ಮಹಿಳೆಯೇ. ಹೀಗಾಗಿ ಆಸ್ತಿ ಹಕ್ಕುಗಳಂಥ ಕಾನೂನುಗಳು ಕೂಡ ಲಿಂಗ ತಾರತಮ್ಯದಿಂದ ಕೂಡಿದೆ. ಆಯಾ ಧರ್ಮದವರಿಗೆ ಅವರದೆ ಆದಂಥ ವೈಯಕ್ತಿಕ ಕಾನೂನುಗಳಿರುವುದರಿಂದ ಅವರವರ ಧರ್ಮದಲ್ಲಿರುವ ಧಾರ್ಮಿಕ ಆಚರಣೆಗಳು ಹಾಗೂ ಸಮಾಜದಲ್ಲಿ ಇದ್ದಂಥ ಸ್ತ್ರೀ ಪುರುಷರ ತಾರತಮ್ಯ ಕಾನೂನಿನಲ್ಲಿಯೂ ಪ್ರತಿಬಿಂಬಿತವಾಗಿದೆ.

ನಮ್ಮ ದೇಶದ ಆರ್ಥಿಕತೆಯ ಬೆನ್ನೆಲುಬು ಕೃಷಿ. ಕೃಷಿ ಕ್ಷೇತ್ರದಲ್ಲಿಯೇ ಮಹಿಳೆಯರು ಅಧಿಕವಾಗಿ ಕೆಲಸ ಮಾಡುವುದರಿಂದ ಕೃಷಿಯನ್ನೇ ಅವಲಂಬಿಸಿದ ಮಹಿಳೆಯರನ್ನು ಕೃಷಿ ಭೂಮಿಯ ಒಡೆತನದಿಂದ ವಂಚಿತರನ್ನಾಗಿಸಲಾಗಿದೆ. ''ಎಂಗೆಲ್ಸರು ಇದರ ಬಗ್ಗೆ ಹೀಗೆ ಹೇಳುತ್ತಾರೆ. ಕೃಷಿಯ ಪರಿಕಲ್ಪನೆ ಬರುವುದಕ್ಕೆ ಮುಂಚಿನ ಸಮಾಜದಲ್ಲಿ ಸ್ತ್ರೀ - ಪುರುಷರ ನಡುವೆ ಮೂಲಭೂತ ಸಮಾನತೆ ಇತ್ತು ಎಂಬುದನ್ನು ಒತ್ತಿ ಹೇಳುತ್ತಾರೆ.''

(ಉದ್ಧೃತ: ಗೀತಾ ಕೃಷ್ಣಮೂರ್ತಿ, ೨೦೦೩, ಪು ೧೮೮) ಆದರೆ ಕಾಲಕಳೆದಂತೆ ಪುರುಷರು ಉತ್ಪಾದನೆ ಹಾಗೂ ಉತ್ಪಾದನೆಯ ಸಾಧನಗಳ ಮೇಲೆ ನಿಯಂತ್ರಣ ಹೊಂದಿದಂತೆ ಕುಟುಂಬದ ಮಹಿಳೆಯರ ಮೇಲೂ ನಿಯಂತ್ರಣವನ್ನು ಸಾಧಿಸುತ್ತ ಸಮಾಜದಲ್ಲಿ ಪಿತೃಪ್ರಧಾನ ವ್ಯವಸ್ಥೆ ಬೆಳೆದು ಬಂದಿತು. ಈ ರೀತಿ ಕುಟುಂಬಗಳು ಪ್ರಮುಖವಾಗಿ ಪಿತೃಪ್ರಧಾನ ಕುಟುಂಬಗಳಾಗಿರುವುದರಿಂದ ಆಸ್ತಿಯು ಪುರುಷ ವಾರಸುದಾರರ ಮೂಲಕ ಮುಂದುವರೆಯತೊಡಗಿತು. ಹೀಗಾಗಿ ಕೃಷಿ ಭೂಮಿಯಂತಹ ಆಸ್ತಿಯಿಂದ ಮಹಿಳೆಯನ್ನು ವಂಚಿತಳನ್ನಾಗಿಸಲಾಗಿದೆ. ಕಾನೂನಿನಲ್ಲಿಯೂ ಸಹ ಕೃಷಿ ಭೂಮಿಗೆ ಮಹತ್ವ ಕೊಡದೆ ಇರುವುದನ್ನು ಕಾಣಬಹುದಾಗಿದೆ. ಹಿಂದೂಗಳಲ್ಲಿ ಮರಣ ಶಾಸನ ಬರೆಯುವ ಮೂಲಕ ಇಡೀ ಸ್ವಯಾರ್ಜಿತ ಆಸ್ತಿಯು ವಿಲೇ ಮಾಡುವ ಅವಕಾಶವಿರುವುದರಿಂದ, ಹಿಂದೂ ಕುಟುಂಬಗಳು ಮೂಲತಃ ಪಿತೃ ಪ್ರಧಾನ ಕುಟುಂಬಗಳಾಗಿರುವುದರಿಂದ ಆಸ್ತಿಯು ಕೂಡ ಪುರುಷನ ಹೆಸರಿನಲ್ಲಿಯೇ ಇರುವುದರಿಂದ ಪುರುಷನು ತನ್ನ ಆಸ್ತಿಯನ್ನೆಲ್ಲಾ ಗಂಡು ಮಕ್ಕಳ ಹೆಸರಿಗೆ ವರ್ಗಾಯಿಸುವ ಮೂಲಕ ಹೆಣ್ಣು ಮಕ್ಕಳನ್ನು ಆಸ್ತಿಯಿಂದ ವಂಚಿತರನ್ನಾಗಿಸಬಹುದಾಗಿದೆ. ಪತಿಯಿಂದ ವಿಚ್ಛೇದನೆಯನ್ನು ಪಡೆದಂಥ ಮಹಿಳೆಯು ಪತಿಯಿಂದ ಜೀವನಾಂಶವನ್ನು ಮಾತ್ರ ಪಡೆಯುತ್ತಾಳೆ. ವಿವಾಹಿತ ಮಹಿಳೆಯು ತನ್ನ ಪತಿಯ ಆಸ್ತಿಗೆ ಹಕ್ಕುದಾರಳಾಗುವುದು ಪತಿಯ ಮರಣದ ನಂತರ. ಆದ್ದರಿಂದ ವಿವಾಹದ ನಂತರ ಕುಟುಂಬದ ಆಸ್ತಿಯ ಮೇಲೆ ಇಬ್ಬರು ಅಂದರೆ ಪತಿ ಮತ್ತು ಪತ್ನಿ ಇಬ್ಬರು ಆ ಆಸ್ತಿಯ ಒಡೆತನದ ಹಕ್ಕನ್ನು ಹೊಂದುವುದು ತುಂಬಾ ಅವಶ್ಯಕವಾಗಿದೆ.

ಈ ರೀತಿಯಾಗಿ ಮಹಿಳೆಯರಿಗೆ ನ್ಯಾಯ ಒದಗಿಸುವಲ್ಲಿ ಕಾನೂನುಗಳು ವಿಫಲವಾಗುತ್ತಿವೆ. ಮಹಿಳಾ ಸಂಘಟನೆಗಳು ಹಾಗೂ ಮಹಿಳಾ ಚಳುವಳಿಗಳ ಪ್ರಯತ್ನದಿಂದಾಗಿ ಆಸ್ತಿ ಹಕ್ಕಿನ ಕಾನೂನುಗಳಿಗೆ ತಿದ್ದುಪಡಿಯಾದರೂ ಸಹ ಮಹಿಳೆಯರಿಗೆ ಆಸ್ತಿಹಕ್ಕು ದೊರೆಯುತ್ತಿಲ್ಲ. ಗ್ರಾಮೀಣ ಪ್ರದೇಶದ ಮಹಿಳೆಯರು ಅನಕ್ಷರಸ್ಥರಾಗಿರುವುದರಿಂದ ಅವರಿಗೆ ತಮ್ಮ ಹಕ್ಕುಗಳ ಬಗ್ಗೆ ತಿಳುವಳಿಕೆ ಇರುವುದಿಲ್ಲ. ಹೀಗಾಗಿ ಅವರು ಇನ್ನೂ ಸುಲಭವಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆ. ಮಹಿಳೆಯರಿಗೆ ನ್ಯಾಯ ದೊರಕಿಸಿ ಕೊಡಬೇಕೆಂಬ ಉದ್ದೇಶದಿಂದಲೇ ರಚನೆಯಾದಂಥ ಅನೇಕ ಕಾನೂನುಗಳು ದೋಷಯುಕ್ತವಾಗಿವೆ. ಕಾನೂನಿನ ಮೂಲಕ ಸ್ತ್ರೀ - ಪುರುಷರ ನಡುವೆ ಇರುವ ಅಧಿಕಾರ ತಾರತಮ್ಯ, ಕುಟುಂಬದೊಳಗೆ ಮಹಿಳೆಯರ ಆರ್ಥಿಕ ಹಕ್ಕುಗಳು, ಸಮಾಜದಲ್ಲಿನ ಸ್ಥಾನಮಾನಗಳ ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನ ನಡೆದಿಲ್ಲವೆಂದೇ ಹೇಳಬಹುದು. ಯಾವುದೇ ಕಾನೂನಿನಲ್ಲಿ ಮಾಡಿರುವ ತಿದ್ದುಪಡಿ ಮಹಿಳೆಯರ ಸಬಲೀಕರಣಕ್ಕೆ ಸಹಾಯವಾಗುವಂತಿರಬೇಕು. ಆದರೆ ಕಾನೂನು ರಚನೆ ಮತ್ತು ಶಾಸನ ರಚನೆಯ ನಿಯಂತ್ರಣ ಸಂಪೂರ್ಣವಾಗಿ ಪುರುಷರ ಕೈಯಲ್ಲಿ ಇರುವವರೆಗೆ ನಿಜವಾದ ಮಹಿಳಾಪರ ಅಭಿವೃದ್ಧಿಯಾಗಲೀ ಕಾನೂನು ರಚನೆಯಾಗಲೀ ಸಾಧ್ಯವಿಲ್ಲ. ಹಾಗೆಯೇ ಕಾನೂನುಗಳು ನೀಡಿರುವ ಹಕ್ಕುಗಳ ಬಗ್ಗೆ ಅರಿವಿದ್ದರೆ ಮಾತ್ರ ನಾವು ಹೇಗೆ ವಂಚಿತರಾಗುತ್ತಿದ್ದೇವೆ ಎಂದು ಅರಿಯಲು ಸಾಧ್ಯವಾಗುತ್ತದೆ. ಆಸ್ತಿಗೆ ಸಂಬಂಧಿಸಿದ ಕಾನೂನುಗಳು ಪಿತೃ ಪ್ರಧಾನ ನೆಲೆಯಿಂದ ಹೊರಬಂದಂಥವುಗಳಾಗಿರುವುದರಿಂದ, ಕಾನೂನಿನ ಬಗ್ಗೆ ಅರಿವಿದ್ದಾಗ ಮಾತ್ರ ಅದರಲ್ಲಿರುವ ಕಂದಕವನ್ನು ಹೋಗಲಾಡಿಸಲು ಸಾಧ್ಯವಾಗುತ್ತದೆ. ಜಮೀನಿನಿಂದ ಹಿಡಿದು ತಟ್ಟೆಗೆ ಆಹಾರ ವರ್ಗಾವಣೆಯಾಗುವವರೆಗೆ ಮಹಿಳೆಯರು ಪ್ರಮುಖ ಪಾತ್ರವಹಿಸಿದರೂ, ಅವರಿಗೆ ಸಲ್ಲಬೇಕಾದ ನ್ಯಾಯಯುತ ಪಾಲು ಸಿಗುತ್ತಿಲ್ಲ.

ಉಲ್ಲೇಖಗಳು


೧. ಹೇಮಲತಾ ಮಹಿಷಿ (ಲೇ), ಕಾನೂನು ಮತ್ತು ಮಹಿಳೆ, **ಮಹಿಳಾ ಅಧ್ಯಯನ ಸಂಪುಟ ೩, ಸಂಚಿಕೆ ೩,** ಶ್ರೀಮತಿ ಎಚ್.ಎಸ್ (ಸಂ), ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಗೀತಾ ಕೃಷ್ಣಮೂರ್ತಿ, **ಮಹಿಳೆ ಕಾನೂನು ಮತ್ತು ರಾಜಕಾರಣ**, ೨೦೦೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಉಷಾ ಎಂ., **ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು**, ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಗಾಯತ್ರಿ ಎನ್., **ಮಹಿಳೆ ಬಿಡುಗಡೆಯ ಹಾದಿಯಲ್ಲಿ**, ೧೯೯೬, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫. ಇಂದಿರಾ ಆರ್. (ಲೇ), ಭಾರತದಲ್ಲಿ ಮಹಿಳೆಯರು : ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನ, **೧೯೯೯ ವಿಚಾರ ಸಾಹಿತ್ಯ**, ವಿಜಯಶ್ರೀ ಸಬರದ (ಸಂ), ೨೦೦೦, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬. ಗೀತಾ ಕೃಷ್ಣಮೂರ್ತಿ, **ಮಹಿಳೆ ಕಾನೂನು ಮತ್ತು ನ್ಯಾಯ**, ಅಪ್ರಕಟಿತ ಪಿಎಚ್.ಡಿ ಮಹಾ ಪ್ರಬಂಧ, ೨೦೦೩, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಬಾಬಾಸಾಹೇಬ್ ಅಂಬೇಡ್ಕರ್, **ಡಾ. ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು,** ಸಂಪುಟ ೧೪, ಭಾಗ ೧ (೬), ರಾಜಶೇಖರಯ್ಯ ಎ.ಎಂ., (ಸಂ), ೨೦೦೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೮. ಅಂಜಲಿ ರಾಮಣ್ಣ, ಭಾರತೀಯ ಶಾಸನಗಳಲ್ಲಿ ಸ್ತ್ರೀಯರಿಗೆ ಆಸ್ತಿಹಕ್ಕು, **ವಿಜಯ ಕರ್ನಾಟಕ** (ಮಹಿಳಾ ವಿಜಯ), ೨೦೦೬, ೨೧ ನವೆಂಬರ್, ಬೆಂಗಳೂರು.

೯. ಗೀತಾ ಕೃಷ್ಣಮೂರ್ತಿ, **ಮಹಿಳೆ ಸಮಾಜ ಮತ್ತು ಕಾನೂನು**, ೨೦೦೭, ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು.

೧೦. ಮಂಜುಳಾ ಸಿ.ಜಿ., ಸಮಾನತೆಯ ಸಬಲೀಕರಣದತ್ತ ಹೊಸ ಹೆಜ್ಜೆ ಮಹಿಳೆಗೆ ಆಸ್ತಿಹಕ್ಕು, **ಸುಧಾ**, ೨೦೦೫, ೨೨ ಸೆಪ್ಟೆಂಬರ್, ಬೆಂಗಳೂರು.

೧೧. ಚಂದ್ರಶೇಖರ ದಾಮ್ಲೆ (ಲೇ), ಕರ್ನಾಟಕದಲ್ಲಿ ಭೂ ಸುಧಾರಣೆ : ಸಾಮಾಜಿಕ ಫಲಶ್ರುತಿ, **ಸುವರ್ಣ ಕರ್ನಾಟಕ ಸಮಾಜ ಮತ್ತು ಸಂಸ್ಕೃತಿ**, ಮುಳಗುಂದ ಚ.ವಿ. ಮತ್ತು ಹೆಗಡೆ ಜಿ.ಎಂ. (ಸಂ), ೨೦೦೬, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.


* * *

## ಭೂ ಒಡೆತನ : ಕೆಲ ಪ್ರಕರಣಗಳು

ಸಂವಿಧಾನವು ಸ್ತ್ರೀ - ಪುರುಷರಿಗೆ ಸಮಾನತೆಯ ಹಕ್ಕನ್ನು ನೀಡಿದೆ. ರಾಷ್ಟ್ರದ ಅಭಿವೃದ್ಧಿಯಾಗಬೇಕಾದರೆ ಮಹಿಳೆ ಮತ್ತು ಪುರುಷರ ಮಧ್ಯ ಇರುವ ತಾರತಮ್ಯವನ್ನು ಹೋಗಲಾಡಿಸಲು ಮಹಿಳೆಯರಿಗೆ ಶಿಕ್ಷಣ ನೀಡುವುದು, ಆರ್ಥಿಕ ಭದ್ರತೆಯ ಅವಕಾಶ ಒದಗಿಸುವುದು, ಸಾಮಾಜಿಕ ಅನ್ಯಾಯ ಹಾಗೂ ಶೋಷಣೆಯಿಂದ ಅವರನ್ನು ರಕ್ಷಿಸುವುದು, ಆಸ್ತಿಯಲ್ಲಿ ಸರಿಸಮಾನ ಪಾಲನ್ನು ನೀಡುವುದು ಮುಖ್ಯವಾಗುತ್ತದೆ. ಮಹಿಳೆಯು ಸ್ವಾವಲಂಬಿಯಾಗಿ ಬದುಕಬೇಕಾದರೆ ತನಗೆ ಆಧಾರವಾಗಿರುವ ಕೃಷಿ ಭೂಮಿಯ ಮೇಲೆ ತನ್ನ ಒಡೆತನ ಹೊಂದುವುದು ಅವಶ್ಯಕವಾಗಿದೆ. ಸಂವಿಧಾನವು ಮಹಿಳೆಯರಿಗೆ ಆಸ್ತಿಹಕ್ಕು ಮತ್ತು ಕೃಷಿ ಭೂಮಿಯ ಒಡೆತನದ ಹಕ್ಕನ್ನು ಪಡೆಯುವ ಕಾನೂನನ್ನು ಜಾರಿಗೆ ತಂದರೂ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರು ಎಷ್ಟರ ಮಟ್ಟಿಗೆ ಕಾನೂನಿನ ಮೊರೆಹೋಗಿರುವರು ಎಂದು ಅರಿಯಲು ಪ್ರಕರಣಗಳ ಅಧ್ಯಯನವನ್ನು ಮಾಡಲಾಗಿದೆ. ಈ ಪ್ರಕರಣಗಳಲ್ಲಿ ಎರಡು ಪ್ರಕಾರಗಳಿವೆ.

೧. ನ್ಯಾಯಾಲಯಕ್ಕೆ ಸಂಬಂಧಿಸಿದ ಪ್ರಕರಣಗಳು.

೨. ಪಂಚಾಯತಿಗೆ ಸಂಬಂಧಿಸಿದ ಪ್ರಕರಣಗಳು ಎಂದು.

### ೪.೧. ನ್ಯಾಯಾಲಯಕ್ಕೆ ಸಂಬಂಧಿಸಿದ ಪ್ರಕರಣಗಳು

### ಪ್ರಕರಣ-೧

ನಾಗಮ್ಮ (ವ. ೨೭), ಶಿವಶರಣಪ್ಪ (ವ. ೩೫) ದಂಪತಿಗಳು ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನವರು. ನಾಗಮ್ಮಳ ತವರುಮನೆ ಸೇಡಂ ತಾಲೂಕಿನ ಕೋಡ್ಲ ಗ್ರಾಮ. ಮದುವೆಯಾಗಿ ಹತ್ತು ವರ್ಷ ಕಳೆದಿದ್ದು, ಎಂಟು ವರ್ಷದ ಗೌರಮ್ಮ ಎಂಬ ಮಗಳಿದ್ದಾಳೆ. ಶಿವಶರಣಪ್ಪ ಪೋಲಿಸ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದರೆ, ಹತ್ತನೇ ತರಗತಿಯವರೆಗೆ ಓದಿದ ಪತ್ನಿ ನಾಗಮ್ಮ ಗೃಹಿಣಿಯಾಗಿದ್ದಳು. ಪತಿಯ ಮನೆಯಲ್ಲಿ ಶಿವಶರಣಪ್ಪ ತಂದೆ, ತಾಯಿ ಮತ್ತು ತಮ್ಮನ ಜೊತೆ ಇವರು ವಾಸವಾಗಿದ್ದರು. ಶಿವಶರಣಪ್ಪನ ತಂದೆ ಒಕ್ಕಲುತನ ಮಾಡುತ್ತಿದ್ದು, ಈಗ ವಯಸ್ಸಾದುದರಿಂದ ಚಿಕ್ಕ ಮಗನೇ ನೋಡಿಕೊಳ್ಳುತ್ತಿರುವನು. ಈತನಿಗೆ ಇನ್ನು ಮದುವೆಯಾಗಿರಲಿಲ್ಲ.

ವಯಸ್ಸಾದ ತಂದೆ-ತಾಯಿಯರನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲವೆಂದು ಶಿವಶರಣಪ್ಪ ತನ್ನ ಪತ್ನಿ ನಾಗಮ್ಮಳ ಜೊತೆ ಆಗಾಗ್ಗೆ ಜಗಳವಾಡುತ್ತಿದ್ದನು. ಕೆಲವು ಬಾರಿ ಜಗಳ ವಿಕೋಪಕ್ಕೆ ಹೋಗಿ ಶಿವಶರಣಪ್ಪ ನಾಗಮ್ಮಳಿಗೆ ಹೊಡೆಯುತ್ತಿದ್ದನು. ಒಂದು ದಿನ ಜಗಳವಾಡಿದಾಗ ಶಿವಶರಣಪ್ಪ ''ನೀನು ನನ್ನ ತಂದೆ-ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳುವುದಿಲ್ಲ. ನಿನ್ನ ತವರು ಮನೆಗೆ ಹೋಗು. ಇಲ್ಲಿ ನಿನ್ನ ಅಗತ್ಯವಿಲ್ಲ'' ಎಂದು ಹೇಳಿದನು. ಕೋಪಗೊಂಡ ನಾಗಮ್ಮ ತಕ್ಷಣ ತನ್ನ ಮಗಳು ಗೌರಮ್ಮಳನ್ನು ಕರೆದುಕೊಂಡು ತವರು ಮನೆಗೆ ಹೋದಳು ಮತ್ತು ಅಲ್ಲೆ ಉಳಿದಳು. ಹೀಗೆ ಎರಡು ವರ್ಷವಾದರೂ ಶಿವಶರಣಪ್ಪ ಪತ್ನಿಯ ಮತ್ತು ಮಗಳ ಯೋಗಕ್ಷೇಮದ ಬಗ್ಗೆ ವಿಚಾರಿಸದೇ ಹೋದನು. ನಾಗಮ್ಮಳ ತವರು ಮನೆಯವರು ಬಡವರಾಗಿದ್ದು ಜೀವನವೇ ಕಷ್ಟಕರವಾಗಿತ್ತು. ನಾಗಮ್ಮಳಿಗೆ ತವರು ಮನೆಯಲ್ಲಿ ಮಗಳನ್ನು ಕಟ್ಟಿಕೊಂಡು ಜೀವನ ನಡೆಸುವುದು ಕಷ್ಟವಾಗಿತ್ತು. ಆಗ ಆಕೆಯ ಸಹೋದರ ನಾಗಮ್ಮಳ ಪತಿಯ (ಶಿವಶರಣಪ್ಪ) ವಿರುದ್ಧ ದಾವೆ ಹೂಡಲು ಬೆಂಬಲವಾಗಿ ನಿಂತ. ಸಹೋದರನ ಪ್ರೇರಣೆಯಿಂದ ನಾಗಮ್ಮ ೨೦೦೨ರಲ್ಲಿ ಕೇಸ್ ನಂ. ೧೦೦ ರಂತೆ ಗುಲಬರ್ಗಾದ ಮುಖ್ಯ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ಶಿವಶರಣಪ್ಪನ ಮೇಲೆ ದಾವೆ ಹೂಡಿದಳು.

**ದಾವೆಯ ವಿವರ:** ಪತಿ ಶಿವಶರಣಪ್ಪನ ಮನೆಯಲ್ಲಿ ಆಸ್ತಿ ಪಾಲಾಗುವವರೆಗೆ ತನ್ನ ಮಗಳು ಗೌರಮ್ಮಳ ಮತ್ತು ತನ್ನ ಜೀವನಕ್ಕಾಗಿ ಪ್ರತಿ ತಿಂಗಳು ತಲಾ ೪೦೦೦/- ರೂಗಳಂತೆ ೮೦೦೦/- ರೂಗಳನ್ನು ಕೊಡಬೇಕು. ಮತ್ತು ಆಸ್ತಿಯ ಪಾಲಾದ ಕೂಡಲೇ ಮಾರಾಟ ಮಾಡದೇ ತನ್ನ ಮತ್ತು ಮಗಳ ಹೆಸರಿಗೆ ವರ್ಗಾಯಿಸಬೇಕು ಎಂಬುದು ದಾವೆಯ ಪ್ರಮುಖ ಅಂಶ.

**ಆಸ್ತಿಯ ವಿವರ:** ಶಿವಶರಣಪ್ಪನಿಗೆ ಸೇಡಂ ತಾಲೂಕಿನಲ್ಲಿ ಒಂದು ಮನೆಯಿದೆ ಹಾಗೂ ೪ ಎಕರೆ ಹೊಲವಿದೆ. ಆದರೆ ಅವೆಲ್ಲವೂ ಆತನ ತಂದೆಯ ಹೆಸರಿನಲ್ಲೆ ಇದೆ.

ಈ ದಾವೆಯ ಕುರಿತು ನ್ಯಾಯಾಲಯದಲ್ಲಿ ವಿಚಾರಣೆ ನಡೆದಾಗ ಪತಿ ಶಿವಶರಣಪ್ಪ ''ಜೀವನಾಂಶ ಮತ್ತು ಆಸ್ತಿಯನ್ನು ಕೊಡುವುದಿಲ್ಲ. ಪತ್ನಿ ಮತ್ತು ಮಗಳನ್ನು ಮನೆಗೆ ಕರೆದುಕೊಂಡು ಹೋಗಿ ಜೊತೆಯಾಗಿ ಜೀವನ ಮಾಡುತ್ತೇನೆ'' ಎಂದು ಹೇಳಿದನು. ಅದಕ್ಕೆ ಉತ್ತರವಾಗಿ ನಾಗಮ್ಮ ''ಎರಡು ವರ್ಷಗಳವರೆಗೆ ತವರು ಮನೆಯಲ್ಲಿದ್ದಾಗ ನನ್ನ ಮತ್ತು ಮಗಳನ್ನು ನೋಡಲು ಒಂದು ಸಲವೂ ಬಂದಿಲ್ಲ. ಈಗ ದಾವೆ ಹಾಕಿದ ಕೂಡಲೇ ಆಸ್ತಿ ಮತ್ತು ಜೀವನಾಂಶ ಕೊಡಬೇಕಾಗುತ್ತದೆಯೆಂದು ಮನೆಗೆ ಕರೆದುಕೊಂಡು ಹೋಗುತ್ತೇನೆ ಎಂದು ಹೇಳುವರು. ಮನೆಗೆ ಕರೆದುಕೊಂಡು ಹೋಗಿ ಹಿಂಸೆ ನೀಡುವರು. ಅವರ ಜೊತೆ ಜೀವನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ನನ್ನ ಮತ್ತು ಮಗಳ ಜೀವನಕ್ಕಾಗಿ ಆಸ್ತಿಯಲ್ಲಿ ಪಾಲು ಬೇಕೇ ಬೇಕು'' ಎಂದು ಹೇಳಿದಳು. ವಾದಿ, ಪ್ರತಿವಾದಿಗಳ ಹೇಳಿಕೆಗಳಾಗಿಯೂ ಇನ್ನೂ ವಿಚಾರಣೆಯ ಹಂತದಲ್ಲಿದೆ.

ಈ ಪ್ರಕರಣದಲ್ಲಿ ಕಂಡುಬರುವ ಅಂಶವೆಂದರೆ ಮಹಿಳೆ (ಪತ್ನಿ)ಗೆ ಜೀವನಾಂಶ ಅಥವಾ ಆಸ್ತಿ ಕೊಡಬೇಕಾಗುತ್ತದೆ ಎಂದಾಗ 'ಇಲ್ಲ ನಾನು ಆಕೆಯನ್ನು ಕರೆದುಕೊಂಡು ಹೋಗಿ ಸಾಕುತ್ತೇನೆ' ಎಂಬ ಸಿದ್ಧ ಉತ್ತರ ಪುರುಷರಲ್ಲಿ (ಪತಿ) ಕಂಡು ಬರುವಂಥದ್ದು. ಅಂತೆಯೇ ಶೋಷಿತ, ಶಿಕ್ಷಿತ ಮಹಿಳೆಯರು ಕಾನೂನಿನ ಮೊರೆ ಹೋದರೆ ತೀರ್ಪು ನೀಡುವಲ್ಲಿನ ವಿಳಂಬ ನೀತಿ ಇನ್ನೊಂದು ಪ್ರಮುಖ ಅಂಶ.

'ಪತ್ನಿಯನ್ನು ಕರೆದುಕೊಂಡು ಹೋಗಿ ಸಾಕುತ್ತೇನೆ' ಎಂಬ ಹೇಳಿಕೆಯ ಹಿಂದೆ ಪತ್ನಿ ಮಕ್ಕಳನ್ನು ಹಿಂಸೆಗೊಳಪಡಿಸುವ ಹುನ್ನಾರವೂ ಇರುವುದನ್ನು ಈ ಪ್ರಕರಣದ ನಾಗಮ್ಮಳ ಹೇಳಿಕೆಯಿಂದ ತಿಳಿಯಬಹುದು.

ಪ್ರಕರಣದಲ್ಲಿನ ಶಿವಶರಣಪ್ಪ ವೃತ್ತಿಯಲ್ಲಿ ಸರ್ಕಾರಿ ನೌಕರನಾಗಿದ್ದೂ, ಜನರನ್ನು ರಕ್ಷಿಸುವ (ಪೋಲಿಸ್) ಜವಾಬ್ದಾರಿಯನ್ನು ಹೊತ್ತಿದ್ದರೂ ತನ್ನ ಪತ್ನಿಯನ್ನು ಕಾಣುವ ಮನೋಭಾವನೆ ಪ್ರಶ್ನಾರ್ಹವಾಗಿದೆ. ರಕ್ಷಕರೇ ಭಕ್ಷಕರಾಗುವ ಇಂದಿನ ಕಾಲಮಾನದಲ್ಲಿ ಸ್ತ್ರೀಯರಿಗೆ ರಕ್ಷಣೆಯೇ ಇಲ್ಲವೆಂದ ಮೇಲೆ ಆಸ್ತಿ ಹಕ್ಕು ಪಡೆಯುವಂಥದ್ದು ಸುಲಭ ಸಾಧ್ಯವಲ್ಲ ಎಂಬುದು ಈ ಪ್ರಕರಣದಿಂದ ತಿಳಿದುಬರುವ ಅಂಶವಾಗಿದೆ.

**ಪ್ರಕರಣ - ೨**

ಗುಲಬರ್ಗಾ ಜಿಲ್ಲೆಯ ಅಫಜಲಪೂರ ತಾಲೂಕಿನ ಗೊಬ್ಬುರ (ಬಿ) ಗ್ರಾಮದಲ್ಲಿ ವಾಸವಾಗಿರುವ ಈರಪ್ಪ ಮತ್ತು ಕಾಶಿಬಾಯಿ ದಂಪತಿಗಳಿಗೆ ಮೂವರು ಹೆಣ್ಣು ಮಕ್ಕಳು ಮಾತ್ರ, ಗಂಡು ಮಕ್ಕಳು ಇರಲಿಲ್ಲ. ಈರಪ್ಪ ಕೃಷಿಕನಾಗಿದ್ದು ಈತನ ಪತ್ನಿ ಗೃಹಿಣಿಯಾಗಿದ್ದಳು. ಮಕ್ಕಳಾದ ಗಂಗಾಬಾಯಿ ಮತ್ತು ಭೀಮಬಾಯಿ ಮೂರನೇ ತರಗತಿಯವರೆಗೂ, ಶರಣಮ್ಮ ಎರಡನೇ ತರಗತಿಯವರೆಗೂ ಶಾಲೆ ಕಲಿಸಿ ಮದುವೆ ಮಾಡಿ ಕೊಡಲಾಗಿತ್ತು. ಮೂವರು ಹೆಣ್ಣು ಮಕ್ಕಳು ಗೃಹಿಣಿಯರಾಗಿದ್ದು ಇವರ ಪತಿಯಂದಿರು ಕೃಷಿಕರಾಗಿದ್ದರು. ಶರಣಮ್ಮಳನ್ನು ಅದೇ ಗ್ರಾಮ (ಗೊಬ್ಬುರ) ದಲ್ಲಿಯೇ ಮದುವೆ ಮಾಡಿಕೊಟ್ಟಿದ್ದರು. ಶರಣಮ್ಮಳ ಪತಿಗೆ ನಾಲ್ಕು ಎಕರೆ ಭೂಮಿ ಮತ್ತು ಒಂದು ಮನೆ ಇರುವುದು. ಮೂವರು ಹೆಣ್ಣು ಮಕ್ಕಳ ಕೌಟುಂಬಿಕ ಸ್ಥಿತಿ ಸಾಧಾರಣ ಮಟ್ಟದಲ್ಲಿದೆ. ವೃದ್ಧ ದಂಪತಿಗಳಾದ ಈರಪ್ಪ ಮತ್ತು ಕಾಶಿಬಾಯಿಯ ಯೋಗಕ್ಷೇಮವನ್ನು ಅದೇ ಗ್ರಾಮದಲ್ಲಿದ್ದ ಶರಣಮ್ಮ ಮತ್ತು ಅವಳ ಪತಿ ನೋಡಿಕೊಳ್ಳುತ್ತಿದ್ದರು. ಸಾಯುವ ಸಂದರ್ಭದಲ್ಲಿ ಈರಪ್ಪ ತನ್ನನ್ನು ನೋಡಿಕೊಂಡಿದ್ದ ಮಗಳು ಶರಣಮ್ಮಳಿಗೆ ತನ್ನೆಲ್ಲಾ ಆಸ್ತಿಯನ್ನು ಬಹುಮಾನವಾಗಿ ನೀಡಿ ಸತ್ತು ಹೋದ. ತನ್ನ ಹೆಂಡತಿ ಕಾಶೀಬಾಯಿಗಾಗಲೀ ಮತ್ತು ಇತರೆ ಇಬ್ಬರು ಹೆಣ್ಣು ಮಕ್ಕಳಿಗಾಗಲೀ (ಗಂಗಾಬಾಯಿ, ಭೀಮಬಾಯಿ) ಭೂಮಿಯಲ್ಲಿ ಯಾವುದೇ ರೀತಿಯ ಪಾಲು ನೀಡಲಿಲ್ಲ. ಈರಪ್ಪನ ಮಗಳು ಭೀಮಬಾಯಿ ತನ್ನ ಅಕ್ಕ ಶರಣಮ್ಮಳಿಗೆ ದೊರೆತ ಆಸ್ತಿಯ ಬಗೆಗೆ ಯಾವುದೇ ರೀತಿಯಲ್ಲಿ ವಿರೋಧ ವ್ಯಕ್ತಪಡಿಸಲಿಲ್ಲ. ಆದರೆ ಗಂಗಾಬಾಯಿ ತಂದೆ (ಈರಪ್ಪ) ಸತ್ತ ನಂತರ ತಂಗಿ ಶರಣಮ್ಮಳಲ್ಲಿ ತನಗೂ ಆಸ್ತಿಯಲ್ಲಿ ಪಾಲು ಕೊಡಬೇಕೆಂಬ ಮಾತು ಮುಂದಿಟ್ಟಳು. ಆದರೆ ಶರಣಮ್ಮ ಪಾಲಿನ ವಿಷಯವನ್ನೇ ನಿರಾಕರಿಸಿದಳು. ಇದರಿಂದ ಕೋಪಗೊಂಡ ಗಂಗಾಬಾಯಿ ತನ್ನ ತಾಯಿ ಕಾಶೀಬಾಯಿ, ತಂಗಿ ಭೀಮಾಬಾಯಿ ಹಾಗೂ ಆಸ್ತಿಯ ವಾರಸುದಾರರಾದ ಶರಣಮ್ಮ ಮತ್ತು ಆಕೆಯ ನಾಲ್ವರು ಮಕ್ಕಳಾದ ಗುರುಶಾಂತಪ್ಪ, ಬಸವಣಪ್ಪ, ಭೀಮಾಶಂಕರ ಮತ್ತು ಶ್ರೀಮಂತ ಹೀಗೆ ಒಟ್ಟು ಏಳು ಜನರ ಮೇಲೆ ದಾವೆ ಹಾಕಲು ನಿರ್ಧರಿಸಿದಳು. ಕೇಸ್ ನಂ. ೧೬೭/೯೫ ಪ್ರಕಾರ ಗುಲಬರ್ಗಾದ ಮೂರನೆಯ ಹೆಚ್ಚುವರಿ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ಶ್ರೇಣಿ) ದಾವೆಯನ್ನು ೧೯೯೫ರಲ್ಲಿ ಹೂಡಿದಳು.

ಈರಪ್ಪನ ಒಟ್ಟು ಆಸ್ತಿ ಸುಮಾರು ೧೭ ಎಕರೆ ೩೩ ಗುಂಟೆ ಭೂಮಿ ಮತ್ತು ಎರಡು ಮನೆಯಿದೆ. ಗಂಗಾಬಾಯಿ ಒಟ್ಟು ಆಸ್ತಿಯಲ್ಲಿ ತನಗೆ $^{1}/_{4}$ ಭಾಗ ನೀಡಬೇಕೆಂದು ಕೇಳಿರುವಳು. ಮೂರು ಜನ ಅಕ್ಕ-ತಂಗಿಯರಿಗೆ ಮತ್ತು ತಾಯಿ ಸೇರಿ ಒಟ್ಟು ನಾಲ್ಕು ಪಾಲು ಮಾಡಬೇಕೆಂದು ದಾವೆ ಹೂಡಿರುವಳು.

ನ್ಯಾಯಾಲಯದಲ್ಲಿ ಈ ದಾವೆಯ ವಿಚಾರಣಾ ಸಂದರ್ಭದಲ್ಲಿ ''ಶರಣಮ್ಮಳಿಗೆ ತಂದೆ ಈರಪ್ಪನು ಸ್ವಇಚ್ಛೆಯಿಂದ ಬಹುಮಾನವಾಗಿ ಆಸ್ತಿಯನ್ನು ಕೊಟ್ಟಿರುವುದರಿಂದ ಅದರಲ್ಲಿ ಅಕ್ಕ-ತಂಗಿಯರಿಗೆ (ಗಂಗಾಬಾಯಿ ಮತ್ತು ಭೀಮಾಬಾಯಿ) ಪಾಲು ಇರುವುದಿಲ್ಲ. ಒಂದು ವೇಳೆ ಈ ಆಸ್ತಿಯಲ್ಲಿ ಭೀಮಾಬಾಯಿ ಪಾಲನ್ನು ಪಡೆದಿದ್ದರೆ

ನಿಮಗೆ (ಗಂಗಾಬಾಯಿ) ಆಸ್ತಿಯಲ್ಲಿ ಪಾಲು ಸಿಗುವುದು" ಎಂದು ಹೇಳಿದರು. ಆದರೆ ಗಂಗಾಬಾಯಿ ತನಗೆ ಆಸ್ತಿಯಲ್ಲಿ ಪಾಲು ಕೊಡಲೇ ಬೇಕೆಂದು ಕೇಳಿದ್ದುದರಿಂದ ಇನ್ನೂ ವಿಚಾರಣೆಯು ಮುಂದುವರೆದಿದೆ.

ಕೆಲವೊಂದು ಪ್ರಕರಣಗಳಲ್ಲಿ ಗಂಡು ಮಕ್ಕಳಿಲ್ಲದ ಕುಟುಂಬದಲ್ಲಿ ಹೆಣ್ಣು ಮಕ್ಕಳೇ ವೃದ್ಧ ತಂದೆ-ತಾಯಿಯರನ್ನು ನೋಡಿಕೊಳ್ಳಬೇಕಾಗುತ್ತದೆ. ಆದರೆ ಎಲ್ಲಾ ಹೆಣ್ಣುಮಕ್ಕಳು ತನ್ನ ತವರು ಮನೆಯಲ್ಲಿಯೇ ಬಂದು ಇರಲಿಕ್ಕಾಗುವುದಿಲ್ಲ. ಹಿರಿ-ಕಿರಿಯರಲ್ಲಿ ಒಬ್ಬಳು ಮಗಳು ಮತ್ತು ಅಳಿಯ ಬಂದು ನೋಡಿಕೊಳ್ಳುವ ಸಂದರ್ಭಗಳೇ ಹೆಚ್ಚು. ಈ ಪ್ರಕರಣದಲ್ಲಿ ಈರಪ್ಪ ತನ್ನ ಆಸ್ತಿಯಲ್ಲಿ ಪತ್ನಿ ಕಾಶೀಬಾಯಿಗೂ ಪಾಲನ್ನು ನೀಡಿಲ್ಲ. ಮೂವರು ಹೆಣ್ಣುಮಕ್ಕಳಲ್ಲಿ ಓರ್ವಳಾದ ಶರಣಮ್ಮಳಿಗೆ ಮಾತ್ರ ಪಾಲನ್ನು ಅಂದರೆ ತನ್ನ ಸಮಸ್ತ ಆಸ್ತಿಯನ್ನು ನೀಡಿದ್ದಾನೆ. ಬಹುಮಾನದ ರೀತಿಯಲ್ಲಿ ನೀಡಿರುವುದರಿಂದ ಇತರರಿಗೆ ಪಾಲನ್ನು ಕೇಳುವ ಹಕ್ಕಿಲ್ಲ ಎಂದು ಕಾನೂನು ಹೇಳುತ್ತದೆ. ಆದರೆ ಈರಪ್ಪ ತನ್ನ ಪತ್ನಿಗಾದರೂ ಆಸ್ತಿಯಲ್ಲಿ ಪಾಲನ್ನು ನೀಡಬೇಕಾಗಿತ್ತು. ಮಾನವೀಯತೆಯಿಂದ ನೋಡಿದರೆ ತಂದೆ ತನ್ನ ಆಸ್ತಿಯನ್ನು ಎಲ್ಲರಿಗೂ (ಮಕ್ಕಳು) ಸಮಾನವಾಗಿ ಹಂಚಿಕೆ ಮಾಡಬೇಕಾಗಿತ್ತು. ಹಾಗಾಗದೆ, ಒಬ್ಬ ಮಗಳಿಗೆ ಆಸ್ತಿ ಕೊಡುವುದರಿಂದ ಮಕ್ಕಳು ಕಚ್ಚಾಡುವ ಪರಿಸ್ಥಿತಿ ಬಂದಿದೆ. ಈ ಪ್ರಕರಣದಲ್ಲಿ ಈರಪ್ಪನ ಪತ್ನಿ ಕಾಶೀಬಾಯಿ ನಗಣ್ಯಳಾಗಿ ಕಂಡುಬರುತ್ತಾಳೆ. ತಾನು ಸತ್ತ ನಂತರ ಪತ್ನಿ, ಮಕ್ಕಳೆಲ್ಲರೂ ಆಸ್ತಿಯನ್ನು ಹಂಚಿಕೊಳ್ಳಬೇಕು ಎಂದು ಉಯಿಲು ಬರೆದಿದ್ದರೂ ಸಾಕಾಗಿತ್ತು. ಒಬ್ಬಳೆ ಮಗಳಿಗೆ ಬಹುಮಾನವಾಗಿ ಆಸ್ತಿ ನೀಡಿರುವುದರಿಂದ ಈ ಎಲ್ಲಾ ರಾದ್ಧಾಂತಗಳಿಗೆ ಕಾರಣವಾಯಿತು. ಈ ರೀತಿಯ ಪ್ರಕರಣಗಳನ್ನು ಕಾನೂನಿನಲ್ಲಿಯೇ ತಿದ್ದುಪಡಿಗಳನ್ನು ಮಾಡುವುದರಿಂದ ತಪ್ಪಿಸಬಹುದು.

**ಪ್ರಕರಣ - ೩**

ಸುನಂದಾ (ವ. ೨೯) ದಿಲೀಪ (ವ. ೩೬) ದಂಪತಿಗಳಿಗೆ ಒಬ್ಬಳೇ ಮಗಳು ಪ್ರಿಯಾಂಕ (೬ ವರ್ಷ). ಇವರದು ಗುಲಬರ್ಗಾ ತಿರಂದಾ ಟಾಕೀಸ್ ಹತ್ತಿರ ಮನೆಯಿದ್ದು ಅಲ್ಲಿಯೇ ವಾಸವಾಗಿದ್ದ. ಸುನಂದಾಳ ಪತಿಯ ಮನೆಯಲ್ಲಿ ಸುನಂದಾಳ ಅತ್ತೆ ಮಾವ ಮತ್ತು ನಾಲ್ಕು ಜನ ಮೈದುನರು ಇವರ ಜೊತೆಯಲ್ಲಿಯೇ ವಾಸವಾಗಿದ್ದರು. ಸುನಂದಾ ಎಸ್.ಎಸ್.ಎಲ್.ಸಿ. ಯವರೆಗೆ ವ್ಯಾಸಂಗ ಮಾಡಿದ್ದು ಗೃಹಿಣಿಯಾಗಿದ್ದಳು. ಪತಿ ದಿಲೀಪ ಔಷಧಿ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದನು. ಆತನ ತಂದೆ ಅಂಬಣ್ಣ ಮಾಸ್ತರ್ ಶಿಕ್ಷಕನಾಗಿ ನಿವೃತ್ತಿ ಪಡೆದಿದ್ದನು. ದಿಲೀಪನ ತಮ್ಮಂದಿರು ಓದುತ್ತಿದ್ದರು. ಒಟ್ಟಾರೆ ಸಾಧಾರಣ ಮಟ್ಟದ ಕೌಟುಂಬಿಕ ಜೀವನ ಇವರದಾಗಿತ್ತು.

ಮದುವೆಯಾದ ಆರು ವರ್ಷಗಳ ನಂತರ ದಿಲೀಪ ಅನಾರೋಗ್ಯದಿಂದ ಬಳಲಿ ಆಕಸ್ಮಿಕವಾಗಿ ಮರಣ ಹೊಂದಿದನು. ಆತನ ಮರಣದ ನಂತರ ಸುನಂದಾ ಮತ್ತು ಆಕೆಯ ಮಗಳು ಪ್ರಿಯಾಂಕಳಿಗೆ ಮಾವನ ಮನೆಯವರು (ಅಂಬಣ್ಣ ಮಾಸ್ತರ್) "ತನ್ನ ಮಗನ ಸಾವಿಗೆ ನೀನೆ ಕಾರಣ, ನಿನ್ನ ಕಾಲ್‌ಗುಣ ಸರಿಯಿಲ್ಲ" ಎಂದು ಕಿರುಕುಳ ನೀಡುತ್ತಿದ್ದುದರಿಂದ ಸುನಂದಾ ತನ್ನ ತವರು ಮನೆಯಾದ ದುದನಿ (ಮಹಾರಾಷ್ಟ್ರ) ಗೆ ಬಂದು ವಾಸವಾಗಿದ್ದಳು. ಆದರೆ ತವರು ಮನೆಯಲ್ಲಿ ಯಾವುದೇ ರೀತಿಯ ಆದಾಯವಿರದೆ ರೈಲ್ವೇ ಸ್ಟೇಷನ್ ಹತ್ತಿರ ಒಂದು ಚಹಾದ ಅಂಗಡಿಯಿಟ್ಟು ಜೀವನ ನಡೆಸುತ್ತಿದ್ದರು. ಹೀಗಾಗಿ ತವರು ಮನೆಯಲ್ಲಿ ತುಂಬಾ ಬಡತನದ ಪರಿಸ್ಥಿತಿ ಇದ್ದರೂ ಎರಡು ವರ್ಷ ಜೀವನ ನಡೆಸಿದಳು. ಮುಂದೆ ತನ್ನ ಮತ್ತು ತನ್ನ ಮಗಳ ಜೀವನ ನಡೆಸುವುದು ಕಷ್ಟವಾದುದರಿಂದ ಪತಿಯ ಮನೆಯವರಿಗೆ ತನ್ನ ಪತಿಯ ಪಾಲಿಗೆ ಬರುವ ಆಸ್ತಿಯನ್ನು ಕೇಳಬೇಕೆಂದು ನಿರ್ಧರಿಸಿದಳು. ಅದರಂತೆ ದಿಲೀಪನ ಪಾಲಿಗೆ ಬರುವ ಆಸ್ತಿಯನ್ನು ಕೊಡುವಂತೆ ಮಾವ ಅಂಬಣ್ಣಾ ಮಾಸ್ತರ್‌ರಲ್ಲಿ ಕೇಳಿದಳು. ಆದರೆ ಮಾವ

ಪಾಲನ್ನು ಕೊಡಲು ನಿರಾಕರಿಸಿದನು. ಹಾಗೆಯೇ ತನ್ನ ನಾಲ್ಕು ಜನ ಗಂಡು ಮಕ್ಕಳಿಗೆ ಭೂಮಿ ಮತ್ತು ಮನೆಯನ್ನು ಹಂಚಿದನು. ಈ ವಿಷಯವನ್ನು ಅರಿತ ಸುನಂದಾ ತನ್ನ ಅಣ್ಣನ ಸಹಾಯದಿಂದ ಮಾವ ಅಂಬಣ್ಣಾ ಮಾಸ್ತರ್ ವಿರುದ್ಧ ದಾವೆ ಹೂಡಿದಳು. ಕೇಸ್ ನಂ. ೧೦೮/೦೦ ಪ್ರಕಾರ ಗುಲಬರ್ಗಾದ ಮೊದಲನೆ ದರ್ಜೆಯ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ೨೦೦೦ ಇಸವಿಯಲ್ಲಿ ದಾವೆ ಹಾಕಿದಳು.

**ದಾವೆಯ ವಿವರ:** ತನ್ನ ಪತಿಯ ಪಾಲಿಗೆ ಬರುವ ಆಸ್ತಿಯನ್ನು ತನ್ನ ಹೆಸರಿಗೆ ವರ್ಗಾಯಿಸಬೇಕೆಂದು. ಮಾವನ ಸ್ವಂತ ಮನೆಯು ಗುಲಬರ್ಗಾದ ತಿರಂದಾ ಸಿನಿಮಾ ಮಂದಿರದ ಹತ್ತಿರವಿದೆ. ಅದರಲ್ಲಿಯೇ ವಾಸವಾಗಿರುವರು ಮತ್ತು ಮೂರು ಎಕರೆ ಭೂಮಿಯು ಸರ್ಕಾರಿ ಆಸ್ಪತ್ರೆಯ ಹಿಂಬಾಗದಲ್ಲಿದೆ. ಈ ಆಸ್ತಿಯಲ್ಲಿ ಪತಿಗೆ ಸಿಗಬೇಕಾದ ಪಾಲನ್ನು ಕೇಳಿದಳು.

ಆದರೆ ಈ ಕೇಸು ಇತ್ಯರ್ಥವಾಗಲು ತುಂಬಾ ದಿನಗಳು ಬೇಕಾಗುವುದೆಂದು ಅರಿತು ಅಲ್ಲಿಯವರೆಗೆ ಜೀವನ ಸಾಗಿಸಲು ಕಷ್ಟವಾಗುವುದೆಂದು ಈ ಕೇಸು ಇತ್ಯರ್ಥ ಆಗುವವರೆಗೂ ತಾನು ಮತ್ತು ತನ್ನ ಮಗಳು ಬದುಕಲು ಜೀವನಾಂಶ ಕೊಡಬೇಕೆಂದು ಇನ್ನೊಂದು ದಾವೆ ಹಾಕಿರುವಳು. ಸುನಂದಾಳ ಕೋರಿಕೆಯನ್ನು ನ್ಯಾಯಾಲಯ ಎತ್ತಿಹಿಡಿದು, ತಿಂಗಳಿಗೆ ೫೦೦/- ರೂ ಜೀವನಾಂಶ ನೀಡಬೇಕೆಂದು ಆದೇಶ ನೀಡಿದೆ. ಅದರ ಪ್ರಕಾರ ತಿಂಗಳಿಗೆ ೫೦೦/- ರೂ ಜೀವನಾಂಶ ಪಡೆಯುತ್ತಿದ್ದಾಳೆ. ಆದರೆ ಆಸ್ತಿಗೆ ಸಂಬಂಧಿಸಿದಂತೆ ನ್ಯಾಯಾಲಯ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳದೆ ವಿಚಾರಣೆಯನ್ನು ಮುಂದುವರೆಸಿದೆ.

ಈ ಪ್ರಕರಣವನ್ನು ಗಮನಿಸಿದಾಗ ಕಾನೂನು ಸರಿಯಾದ ಮಾರ್ಗದಲ್ಲಿಯೇ ಮುಂದುವರೆದಿದೆ ಎಂದು ಹೇಳಬಹುದು. ಅನೇಕ ಕುಟುಂಬಗಳಲ್ಲಿ ಗಂಡು ಮಕ್ಕಳಲ್ಲಿ ಒಬ್ಬ ಆಕಸ್ಮಿಕವಾಗಿ ಮರಣ ಹೊಂದಿದಾಗ ಆತನ ಪತ್ನಿ ಮತ್ತು ಮಕ್ಕಳು ತಮಗೆ ಸಂಬಂಧವೇ ಇಲ್ಲ ಎನ್ನುವ ರೀತಿಯಲ್ಲಿ ನಡೆದುಕೊಳ್ಳುವುದು ಕಂಡುಬರುತ್ತದೆ. ಅನೇಕ ಸಂದರ್ಭಗಳಲ್ಲಿ ಪತ್ನಿ ಮತ್ತು ಮಕ್ಕಳು ನಿರ್ಗತಿಕರಾದ ಉದಾಹರಣೆಗಳೂ ದೊರಕುತ್ತವೆ. ಮಹಿಳೆಗೆ ತನ್ನ ತವರುಮನೆಯವರು ಆರ್ಥಿಕವಾಗಿ ದುರ್ಬಲರಾಗಿದ್ದರೆ ತಮ್ಮವರು ಮನೆಯಲ್ಲಿ ತನ್ನ ಜೀವನ ನಡೆಸುವುದು ದುಸ್ತರವಾಗುತ್ತದೆ. ತವರು ಮನೆಯಲ್ಲಿ ಆರ್ಥಿಕವಾಗಿ ಚೆನ್ನಾಗಿದ್ದು, ಅಣ್ಣ-ತಮ್ಮಂದಿರು ಒಳ್ಳೆಯ ಗುಣ - ನಡತೆಯವರಾಗಿದ್ದು ತವರು ಮನೆಯಲ್ಲಿ ಉಳಿದರೆ. ಇವರ ಬದುಕು ಸುಖಮಯವಾಗಿರುವುದರಲ್ಲಿ ಎರಡು ಮಾತಿಲ್ಲ. ಆದರೆ ತವರು ಮನೆಯವರ ಕೌಟುಂಬಿಕ ಸ್ಥಿತಿ ಚೆನ್ನಾಗಿರದಿದ್ದಾಗ ಪತಿಯ ಮನೆಯಿಂದ ಆಸ್ತಿ ಕೇಳುವುದು ಅನಿವಾರ್ಯವಾಗುವುದು, ತನ್ನ ಮಗ/ಮಗಳಿಗೆ ತನ್ನ ಪತಿಗೆ ಬರುವ ಆಸ್ತಿಯಲ್ಲಿ ಪಾಲಾದರು ದೊರೆಯುತ್ತದೆ ಎನ್ನುವ ಆಸೆಯಿಂದ ಪತಿಯ ಮನೆಗೆ ಆಸ್ತಿ ಕೇಳಲು ಕಾನೂನಿನ ಮೊರೆ ಹೋಗಬೇಕಾಗುವುದು. ಆಗ ಅಣ್ಣ-ತಮ್ಮಂದಿರ ಸಹಾಯವಾದರೂ ಸಿಗಬಹುದು. ಪ್ರಸ್ತುತ ಪ್ರಕರಣದಲ್ಲಿ ಸುನಂದಾಳು ಅಣ್ಣನ ಸಹಾಯದಿಂದ ನ್ಯಾಯಾಲಯದ ಮೆಟ್ಟಿಲೇರಿದ್ದಾಳೆ. ಹಾಗೆಯೇ ಜೀವನಾಂಶವನ್ನೂ ಪಡೆದಿದ್ದಾಳೆ. ಆಸ್ತಿಯಲ್ಲಿ ಪಾಲು ಕೊಡಬೇಕೆನ್ನುವ ಆಕೆಯ ಕೂಗು ಇನ್ನೂ ಜೀವಂತವಾಗಿದೆ.

ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ, ೧೦೦ರಲ್ಲಿ ೯೦ ಪ್ರತಿಶತ ಮಹಿಳೆಯರು ಇತರರ (ತಂದೆ, ಅಣ್ಣ, ತಮ್ಮ, ಸಂಬಂಧಿಕರು) ಸಹಾಯದಿಂದಲೇ ಕಾನೂನಿನ ಮುಖಾಂತರ ತಮ್ಮ ಹಕ್ಕನ್ನು ಪಡೆದುಕೊಳ್ಳುತ್ತಿರುವುದು. ಏಕಾಂಗಿಯಾಗಿ ಹೋರಾಟ ಮಾಡುವ ಶಕ್ತಿ ಇನ್ನೂ ಮಹಿಳೆಯರಿಗೆ ಬಂದಿಲ್ಲ. ಗುಲ್ಬರ್ಗಾದಂತಹ ಹಿಂದುಳಿದ ಜಿಲ್ಲೆಗಳಲ್ಲಿ ಮಹಿಳೆಯರು ಕಾನೂನಿನ ಮಾಹಿತಿಗಳನ್ನು ಪಡೆಯದೇ ಇರುವುದು ಹೆಚ್ಚು. ಅದಕ್ಕೂ ಮೊದಲು

ಹಳ್ಳಿಗಳಲ್ಲಿರುವ ಹೆಣ್ಣು ಮಕ್ಕಳಿಗೆ ಸರಿಯಾದ ಶಿಕ್ಷಣವೇ ಇಲ್ಲದಿರುವುದು. ಕೋರ್ಟು, ಕಚೇರಿಗಳಿಗೆ ತಿರುಗಾಡಿ ನ್ಯಾಯ ಪಡೆಯುವಂತಹ ಅಥವಾ ತನ್ನ ಹಕ್ಕನ್ನು ಪಡೆಯುವಂತಹ ಸಂದರ್ಭದಲ್ಲಿ ಏಕಾಂಗಿಯಾಗಿ ಹೋರಾಡಿದರೆ ಎಲ್ಲಿ ಮೋಸ ಹೋಗುತ್ತೇವೆ ಎನ್ನುವ ಭಯ ಮಹಿಳೆಯರ ಮನದಲ್ಲಿ ಆವರಿಸಿದೆ. ಅದಕ್ಕಾಗಿ ಕುಟುಂಬದ ಪುರುಷರ ಸಹಾಯಕ್ಕೆ ಮೊರೆ ಹೋಗುವವರ ಸಂಖ್ಯೆ ಅಧಿಕವಾಗಿ ಕಂಡು ಬರುತ್ತದೆ.

**ಪ್ರಕರಣ-೪**

ವಿಶ್ವನಾಥ ಗುಲಬರ್ಗಾ ತಾಲೂಕಿನ ಹೀರಾಪೂರ ಗ್ರಾಮದವರು. ಇವರು ಗುಲಬರ್ಗಾದ ಎಮ್.ಎಸ್.ಕೆ. ಮಿಲ್‌ನಲ್ಲಿ ಗುಮಾಸ್ತರಾಗಿ ಕೆಲಸ ಮಾಡುತ್ತಿದ್ದರು. ಇವರು ಅಪಾರವಾದ ಆಸ್ತಿಯ ಮಾಲೀಕರು ಆಗಿದ್ದರು. ಹಾಗೂ ಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದುದರಿಂದ ಇವರ ಕೌಟುಂಬಿಕ ಜೀವನ ಉತ್ತಮವಾಗಿತ್ತು. ಇವರಿಗೆ ಗಂಡು ಮಕ್ಕಳಿರಲಿಲ್ಲ ಹೆಣ್ಣು ಮಕ್ಕಳು ಮಾತ್ರ. ಈ ಹೆಣ್ಣು ಮಕ್ಕಳು ಹೆಚ್ಚೇನು ವಿದ್ಯಾಭ್ಯಾಸ ಮಾಡದಿದ್ದರೂ ಶ್ರೀಮಂತರ ಮನೆ ನೋಡಿ ಮದುವೆ ಮಾಡಿ ಕೊಡಲಾಗಿತ್ತು. ಹಿರಿಯ ಮಗಳಾದ ಗುರುಶಾಂತವ್ವಳಿಗೆ ಆಳಂದ ತಾಲೂಕಿನ ನೆಲ್ಲೂರು ಗ್ರಾಮದ ಸಿದ್ರಾಮಪ್ಪನ ಜೊತೆ ಮದುವೆ ಮಾಡಲಾಯಿತು. ಗುರುಶಾಂತವ್ವಳ ಪತಿ ಸೋಮಾರಿಯಾಗಿದ್ದು ಯಾವುದೇ ಕೆಲಸ ಮಾಡದೆ ಊರಲ್ಲಿ ಅಲೆಯುತ್ತಾ ಜೂಜಾಡುತ್ತಾ ಸಾಲಮಾಡಿಕೊಂಡಿದ್ದ. ಸಾಲವನ್ನು ತೀರಿಸಲು ನೆಲ್ಲೂರಿನಲ್ಲಿರುವ ತನ್ನ ಆಸ್ತಿಯನ್ನು ಮಾರಾಟಮಾಡಿ ತನ್ನ ಮಾವನ (ವಿಶ್ವನಾಥನ) ಮನೆಯಲ್ಲಿಯೇ ಬಂದು ಉಳಿದರು. ಗುರುಶಾಂತವ್ವಳ ತಂದೆ-ತಾಯಿಗೆ ವಯಸ್ಸಾಗಿರುವುದರಿಂದ ತಮ್ಮನ್ನು ನೋಡಿಕೊಳ್ಳುತ್ತ ಇರಲು ಹೇಳಿದರು. ಹೀಗಾಗಿ ಗುರುಶಾಂತವ್ವ ಮತ್ತು ಆಕೆಯ ಪತಿ ಹೀರಾಪೂರದಲ್ಲಿಯೇ ಉಳಿದರು. ಇನ್ನು ಎರಡನೆ ಮಗಳು ಅಂಬಾಬಾಯಿಯ ಪತಿಯು ಮಾವ (ವಿಶ್ವನಾಥ) ಕೆಲಸ ಮಾಡುವ ಮಿಲ್‌ನಲ್ಲಿಯೇ ಕ್ಯಾಶೀಯರ್ ಆಗಿ ಕೆಲಸ ಮಾಡುತ್ತಿರುವುದರಿಂದ ಮದುವೆಯಾದ ಮೇಲೆ ಹಾಗರಗಿಯಲ್ಲಿರುವ ಹೊಲವನ್ನು ಬೇರೆಯವರಿಗೆ ಗುತ್ತಿಗೆ ಕೊಟ್ಟು ಮನೆಯನ್ನು ಅಣ್ಣ ತಮ್ಮಂದಿರಿಗೆ ಇರಲು ಕೊಟ್ಟಿದ್ದ. ಗುಲಬರ್ಗಾದ ಪುಟಾಣಿಗಲ್ಲಿಯಲ್ಲಿ ಮನೆಯನ್ನು ಖರೀದಿಸಿ ಅಲ್ಲಿಯೇ ಹೆಂಡತಿಯನ್ನು ಕರೆತಂದು ಉಳಿದನು. ಇತ್ತ ಗುರುಶಾಂತವ್ವಳ ಪತಿ ಮನೆಯಲ್ಲೆ ಇದ್ದಿರುವುದರಿಂದ ತಂಗಿಯ ಪತಿ ತಾನು ಕೆಲಸ ಮಾಡುವ ಮಿಲ್‌ನಲ್ಲೆ ಕೆಲಸಕ್ಕೆ ಸೇರಿಸಿದನು. ಗುರುಶಾಂತಪ್ಪ ಅಲ್ಲಿಯೂ ಸರಿಯಾಗಿ ಕೆಲಸ ಮಾಡದೇ ಹೋದ. ನಾಲ್ಕುದಿನ ಕೆಲಸಕ್ಕೆ ಹೋದರೆ ಹದಿನೈದು ದಿನ ಮನೆಯಲ್ಲಿ ಇರುತ್ತಿದ್ದನು. ಮಾವ ವಿಶ್ವನಾಥ ಅಳಿಯನ ಸ್ಥಿತಿಯನ್ನು ಕಂಡು ಚಿಂತೆಮಾಡಿ ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡನು. ವಿಶ್ವನಾಥನ ಹೆಂಡತಿ ಮೊದಲೆ ತೀರಿಕೊಂಡಿದ್ದಳು. ವಿಶ್ವನಾಥನು ತೀರಿದ ನಂತರ ತಂದೆಯ ಸಮಸ್ತ ಆಸ್ತಿಯನ್ನು ಹಿರಿಯ ಮಗಳು ಗುರುಶಾಂತವ್ವಳೇ ನೋಡಿಕೊಳ್ಳುತ್ತಿದ್ದಳು. ಹಾಗೆಯೇ ತನ್ನ ತಾಯಿಯ ತವರುಮನೆಯಾದ ಅಫಜಲಪೂರ ತಾಲೂಕಿನ ನೀಲೂರ ಗ್ರಾಮದಲ್ಲಿ ತಾಯಿಗೆ ಆಸ್ತಿ ದೊರಕಿತ್ತು, ಕಾರಣ ಗುರುಶಾಂತವ್ವನ ತಾಯಿ ಮತ್ತು ಚಿಕ್ಕಮ್ಮ ಇಬ್ಬರೆ ಅಕ್ಕತಂಗಿಯರಿರುವುದರಿಂದ ಗುರುಶಾಂತವ್ವಳ ತಾಯಿಗೆ ತವರಿನಿಂದ ೨೩ ಎಕ್ರೆ ೩೧ ಗುಂಟೆ ಹೊಲ ದೊರಕಿತು. ತಂದೆಯ ಆಸ್ತಿ ಗುಲಬರ್ಗಾ ನಗರದ ಬಿದ್ದಾಪೂರ ಗ್ರಾಮದಲ್ಲಿರುವ ೧೭ ಎಕ್ರೆ ೩೦ ಗುಂಟೆ, ಇದೇ ಗ್ರಾಮದಲ್ಲಿ ಮತ್ತೆ ೧೪ ಎಕ್ರೆ ೩೧ ಗುಂಟೆ ಹೊಲ ಮತ್ತು ಮಾದಸನ ಹಳ್ಳಿಯಲ್ಲಿ ೨೪ ಎಕ್ರೆ ೦೭ ಗುಂಟೆ ಭೂಮಿ ಮತ್ತು ಹೀರಾಪುರದಲ್ಲಿ ಎರಡು ಮನೆಗಳು ಇದ್ದವು. ತಾಯಿಯ ತವರಿನಿಂದ ಬಂದ ಆಸ್ತಿ ಮತ್ತು ತಂದೆಯ ಸಮಸ್ತ ಆಸ್ತಿಯನ್ನು ಗುರುಶಾಂತವ್ವ ಒಬ್ಬಳೇ ಅನುಭವಿಸುತ್ತಿದ್ದಳು. ಊರಿನ ಮಂದಿ ಈ ಬಗ್ಗೆ ವಿಚಾರಿಸಿದರೆ ''ತನ್ನ ತಂಗಿ ಅಂಬಾಬಾಯಿ ಗಂಡ ನೌಕರಿ

ಮಾಡುತ್ತಾನ ಮತ್ತು ಹಾಗರಗಿಯಲ್ಲಿ ಹೊಲ ಅದ ಅದಕ್ಕ ತವರು ಮನೆಯಿಂದ ಆಸ್ತಿ ಬೇಡ ನೀನೆ ಇಟ್ಟಕೋ ಅಂತ ಹೇಳ್ಯಾಳ. ಅದಕ್ಕ ಅವಳಿಗೆ ತವರು ಮನೆ ನೆನಪಿಗೆ ಮತ್ತು ಅಕ್ಕನೇ ಆಸ್ತಿ ತಿಂದಳು ಅನ್ನಿಸಬಾರದೆಂದು ಆಕಿಗೆ ೩೦ ತೊಲೆ ಬಂಗಾರ ಕೊಟ್ಟಿನಿ'' ಎಂದು ಸುಳ್ಳು ಹೇಳುತ್ತಿದ್ದಳು. ನಿರಾತಂಕವಾಗಿ ತಂದೆಯಿಂದ ಮತ್ತು ತಾಯಿಯಿಂದ ಬಂದ ಆಸ್ತಿಗಳನ್ನು ತನ್ನ ಹೆಸರಿಗೆ ಮಾಡಿಕೊಂಡಿದ್ದಳು.

ಆದರೆ ತಂಗಿಗೆ ಈ ಎಲ್ಲಾ ವಿಷಯ ತಿಳಿದಿರಲಿಲ್ಲ. ವಾಸ್ತವದಲ್ಲಿ ಗುರುಶಾಂತವ್ವ ಬಂದ ಬೆಳೆಯಲ್ಲಿ ಸ್ವಲ್ಪಬೆಳೆಯನ್ನು ತಂಗಿಗೆ (ಅಂಬಾಬಾಯಿಗೆ) ಕೊಡುತ್ತಿದ್ದಳು. ಬೆಳೆ ಕೂಡ ಒಂದು ವರ್ಷ ಕೊಟ್ಟರೆ ಮತ್ತೊಂದು ವರ್ಷ ಬೆಳೆ ಬೆಳೆದಿಲ್ಲವೆಂದು ಕೊಡುತ್ತಿರಲಿಲ್ಲ. ಅಂಬಾಬಾಯಿ ಇದರ ಬಗ್ಗೆ ತಲೆಕೆಡಿಸಿಕೊಂಡಿರಲಿಲ್ಲ. ಅಕ್ಕನು ಮಾಡಿದ ಮೋಸದ ವಿಷಯ ತಿಳಿದ ನಂತರ ಅಂಬಾಬಾಯಿ ಅಕ್ಕನಲ್ಲಿಗೆ ಬಂದು ತನಗೂ ಆಸ್ತಿಯಲ್ಲಿ ಪಾಲಿರುವುದೆಂದು ಹೇಳಿದಾಗ ''ಆಸ್ತಿಯೆಲ್ಲಾ ನನ್ನ ಹೆಸರಿನಲ್ಲಿದೆ. ತವರು ಮನೆಯಲ್ಲಿದ್ದುಕೊಂಡು ತಂದೆ-ತಾಯಿಯನ್ನು ನೋಡಿಕೊಂಡಿರುವೆನು. ನಿನಗೆ ಆಸ್ತಿಯಲ್ಲಿ ಪಾಲುಕೊಡಲು ಆಗುದಿಲ್ಲ'' ಎಂದು ಹೇಳಿದಳು. ಆಗ ಇನ್ನೂ ಅಂಬಾಬಾಯಿಯ ಮಕ್ಕಳು ಚಿಕ್ಕವರಿದ್ದ ಕಾರಣ ಅವಳು ಆಸ್ತಿ ವಿಚಾರದಲ್ಲಿ ಮುಂದುವರೆಯಲಿಲ್ಲ. ಅಂತೆಯೇ ಹಾಗರಗಿಯಲ್ಲಿ ಪತಿಯ ಆಸ್ತಿ ಇರುವುದರಿಂದ ತವರು ಮನೆಯ ಆಸ್ತಿಗೆ ಆಸೆ ಪಡಲಿಲ್ಲ. ಅಂಬಾಬಾಯಿಯ ಮಕ್ಕಳು ದೊಡ್ಡವರಾದ ನಂತರ ಅವರ ಒತ್ತಾಯದ ಮೇರೆಗೆ ಅಕ್ಕ ಗುರುಶಾಂತವ್ವಳ ವಿರುದ್ಧ ದಾವೆ ಸಂಖ್ಯೆ ಓ.ಎಸ್. ೨೬೪/೯೮ ರಲ್ಲಿ ಗುಲಬರ್ಗಾದ ಎರಡನೆ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದಲ್ಲಿ ೧೯೯೮ರಲ್ಲಿ ದಾವೆ ಹೂಡಿದಳು.

**ದಾವೆಯ ವಿವರ:** ಪ್ರತಿಯೊಂದು ಆಸ್ತಿಯಲ್ಲಿ ಅಂದರೆ ತಂದೆಯ ಆಸ್ತಿಯಲ್ಲಿ ಮತ್ತು ತಾಯಿಯ ಆಸ್ತಿಯಲ್ಲಿ $^{1}/_{2}$ ಭಾಗದಷ್ಟು ಆಸ್ತಿ ತನ್ನ ಪಾಲಿಗೆ ಸೇರಬೇಕು ಎಂದು ದಾವೆ ಹೂಡಿದಳು ಅಂಬಾಬಾಯಿ.

ನ್ಯಾಯಾಲಯದಲ್ಲಿ ಅಕ್ಕ ಆಸ್ತಿ ಕೊಡುವುದಿಲ್ಲ ಎಂದು ವಾದಿಸಿದರೆ ತಂಗಿ ಪ್ರತಿಯೊಂದು ಆಸ್ತಿಯಲ್ಲಿ $^{1}/_{2}$ ಪಾಲು ತನಗೆ ಸೇರಬೇಕೆಂದು ವಾದಿಸಿದಳು. ಕೋರ್ಟಿನಲ್ಲಿ ವಿಚಾರಣೆಗೆ ಕರೆದಾಗಲೆಲ್ಲ ಹೋಗಬೇಕಾಗುತ್ತಿತ್ತು. ಆಗ ''ಗುರುಶಾಂತವ್ವ ತನ್ನ ಮಕ್ಕಳಿಗೆ ಕಳಿಸಿ ನಮಗೆ ಅಂಜಿಸ್ತಿದ್ದಳು. ಎಷ್ಟಲಾಗ ಹೋಡದರು ನಿಮಗೆ ನಾ ಆಸ್ತಿ ಕೊಡಲ್ಲ ಕೋರ್ಟಿಗೆ ಹ್ಯಾಂಗ ಹೋಗತಿರಿ ನಾನು ನೋಡತೀನಿ'' ಎನ್ನುತ್ತಿದ್ದಳು. ಆದರೆ ಸುಧೀರ್ಘ ವಿಚಾರಣೆಯ ನಂತರ ೩೦.೦೩.೨೦೦೫ರಂದು 'ಸಮಸ್ತ ಆಸ್ತಿಯಲ್ಲಿ $^{1}/_{2}$ ಭಾಗ ಅಂಬಾಬಾಯಿ ಪಾಲುದಾರಳು' ಎಂದು ನ್ಯಾಯಾಲಯ ತೀರ್ಪು ನೀಡಿತು. ಆದರೆ ನ್ಯಾಯಾಲಯದ ತೀರ್ಪಿನ ಮೇಲೆ ಗುರುಶಾಂತವ್ವ ತಂಗಿ ಅಂಬಾಬಾಯಿಗೆ ಆಸ್ತಿಯಲ್ಲಿ ಪಾಲು ಕೊಡದೇ ಬೆಂಗಳೂರಿನ ಹೈಕೋರ್ಟಿಗೆ ಅಪೀಲು ಸಲ್ಲಿಸಿದ್ದಾಳೆ. ತದನಂತರ ಸ್ವಲ್ಪ ದಿನಗಳಲ್ಲಿಯೇ ಗುರುಶಾಂತವ್ವ ತೀರಿಕೊಂಡಳು. ಹೈಕೋರ್ಟು ಇನ್ನೂ ಯಾವುದೇ ತೀರ್ಪು ನೀಡಿಲ್ಲ.

ಈ ಪ್ರಕರಣದಲ್ಲಿ ಓರ್ವ ಮಹಿಳೆ (ಅಂಬಾಬಾಯಿ) ಗೆ ತನ್ನ ಮಕ್ಕಳ ಸಹಾಯದಿಂದ ಕಾನೂನಿನ ಮೊರೆ ಹೋಗಿದ್ದಾಳೆ. ಹಾಗೆಯೇ ನ್ಯಾಯಾಲಯ ಕೂಡ ಆಕೆಗೆ ಸಮಾನ ಆಸ್ತಿಹಕ್ಕನ್ನು ನೀಡಲು ಆಕೆಯ ಅಕ್ಕ ಗುರುಶಾಂತವ್ವಳಿಗೆ ಆದೇಶ ನೀಡಿದೆ. ಆದರೆ ಆಕೆ ಹೈಕೋರ್ಟಿಗೆ ಅಪೀಲು ಹೋಗಿದ್ದರಿಂದಾಗಿ ಆಸ್ತಿಯು ಇನ್ನೂ ಅಂಬಾಬಾಯಿಯ ಕೈ ಸೇರಿಲ್ಲ. ಆಸ್ತಿಗೆ ಸಂಬಂಧಿಸಿದ ಬಹುತೇಕ ಪ್ರಕರಣಗಳು ನಮ್ಮ ಎಲ್ಲಾ ನ್ಯಾಯಾಲಯಗಳಲ್ಲಿ ಧೂಳು ತಿನ್ನುತ್ತಾ ಕೂತಿರುವುದನ್ನು ಜನಸಾಮಾನ್ಯರು ಬಲ್ಲರು. ಇಂದಿನ ಕಾಲದಲ್ಲಿ ದುಡ್ಡಿದ್ದವನು ಕಾನೂನನ್ನು ತಿರುಚಿ ಹಿಂದಿನ ಬಾಗಿಲಿನಿಂದ ತನಗೇ ಪೂರಕವಾದ ರೀತಿಯಲ್ಲಿ ಕಾನೂನನ್ನು ಪಡೆಯಲು ಸಾಧ್ಯ. ಇಂತಹ ಅನೇಕ

ಘಟನೆಗಳು ನಮ್ಮ ದೇಶದಲ್ಲಿ ನಡೆದಿರುವುದನ್ನು ಬಹುಮಾಧ್ಯಮಗಳ ಮೂಲಕ ತಿಳಿಯುತ್ತೇವೆ. ನ್ಯಾಯಾಲಯಗಳ ವಿಳಂಬ ನೀತಿಯಿಂದಾಗಿ ಪ್ರಕರಣಗಳಲ್ಲಿನ ವಾದಿ ಅಥವಾ ಪ್ರತಿವಾದಿ, ಸಾಕ್ಷಿದಾರರು ಹೀಗೆ ಯಾರಾದರೊಬ್ಬರು ಮರಣ ಹೊಂದಿರುತ್ತಾರೆ. ಮೃತನಾದ ನಂತರ ಅವರ ಪಾಲಿಗೆ ಪೂರಕವಾದ ನ್ಯಾಯ ದೊರಕಿದರೆ ಏನು ಪ್ರಯೋಜನ? ಈ ಬಗ್ಗೆ ನಮ್ಮ ಕಾನೂನು ತಜ್ಞರು ಆಲೋಚಿಸಬೇಕಿದೆ! ಮಹಿಳೆಯರಿಗಾಗಿನ ಸರ್ಕಾರದ ಅನೇಕ ಯೋಜನೆಗಳೂ ಕೂಡ ಇದೇ ರೀತಿಯ ಹಾದಿ ಹಿಡಿದಿವೆ. ಕೆಲಮಟ್ಟದ ನ್ಯಾಯಾಲಯಗಳ ತೀರ್ಪು ಸರಿಯಾಗಿದ್ದರೂ ವಾದಿ ಅಥವಾ ಪ್ರತಿವಾದಿ ಹೈಕೋರ್ಟ್‌ಗೆ ಅಪೀಲು ಹೋಗುವುದರಿಂದ ಹತ್ತಾರು ವರ್ಷಗಳು ನಷ್ಟವಾಗುತ್ತವೆ. ಸಾವಿರಾರು, ಲಕ್ಷಾಂತರ ಹಣ ಖರ್ಚಾಗುತ್ತವೆ ವಿನಃ ತಕ್ಷಣದ ನಿಜವಾದ ತೀರ್ಪು ಬರುವುದೇ ಇಲ್ಲ. ಇದರ ಬಗ್ಗೆ ಸರಕಾರಗಳಾದರೂ ಯೋಚಿಸಬೇಕಿದೆ. ಮಹಿಳೆಯರ ಆಸ್ತಿಹಕ್ಕು, ಅತ್ಯಾಚಾರ, ಶೋಷಣೆಗಳಿಗೆ ಸಂಬಂಧಪಟ್ಟ ಪ್ರಕರಣಗಳನ್ನು ನಿಗದಿತ ಸಮಯದಲ್ಲಿ ಮುಗಿಸುವಂಥ ವ್ಯವಸ್ಥೆ ಮಾಡಬೇಕಿದೆ.

### ೪.೨. ಪಂಚಾಯತಿಗೆ ಸಂಬಂಧಿಸಿದ ಪ್ರಕರಣಗಳು

### ಪ್ರಕರಣ - ಒಂದು

ಗುಲಬರ್ಗಾ ಜಿಲ್ಲೆಯ ಅಫಜಲಪೂರ ತಾಲೂಕಿನ ಭೀಮಬಾಯಿಯ ತವರುಮನೆ ಅದೇ ತಾಲೂಕಿನ ನಂದರ್ಗಾ ಗ್ರಾಮ. ಇವಳ ಪತಿಯ ಹೆಸರು ಶಾಣಪ್ಪ. ಶಾಣಪ್ಪನಿಗೆ ಒಬ್ಬ ತಮ್ಮ ಮಾತ್ರ ಇದ್ದ, ಅಕ್ಕ-ತಂಗಿಯರು ಇರಲಿಲ್ಲ. ಅಫಜಲಪೂರದಲ್ಲಿ ಪತಿಯ ಸ್ವಂತ ಮನೆಯಿದ್ದು, ಆ ಮನೆಯಲ್ಲಿ ಭೀಮಬಾಯಿ, ಆಕೆಯ ಪತಿ, ಅತ್ತೆ, ಮಾವ, ಮೈದುನ ವಾಸವಾಗಿದ್ದರು. ಮೈದುನನಿಗೆ ಇನ್ನು ಮದುವೆ ಆಗಿರಲಿಲ್ಲ. ಭೀಮಬಾಯಿ ಶಾಲೆ ಕಲಿತವಳಲ್ಲ. ಮನೆಯ ಕೆಲಸದ ಜೊತೆ ಹೊಲದ ಕೆಲಸವನ್ನು ಮಾಡುತ್ತಿದ್ದಳು. ಶಾಣಪ್ಪ ಮತ್ತು ಆತನ ತಮ್ಮ ಇಬ್ಬರು ಒಕ್ಕಲುತನ ಮಾಡುತ್ತಿದ್ದರು. ಮನೆಯ ಮುಂದೆ ಒಂದು ಚಿಕ್ಕ ಕಿರಾಣಿ ಅಂಗಡಿಯನ್ನು ಇಟ್ಟುಕೊಂಡು ಮಾವ ನೋಡಿಕೊಳ್ಳುತ್ತಿದ್ದ. ಒಂದು ದಿನ ಶಾಣಪ್ಪ ತೊಗರಿ ಹೊಲಕ್ಕೆ ಔಷಧಿ ಸಿಂಪಡಿಸುವಾಗ ಔಷಧಿಯ ಗಾಳಿ ಸೇವಿಸಿ ಅನಾರೋಗ್ಯದಿಂದ ಬಳಲಿ ತೀರಿಕೊಂಡನು. ಶಾಣಪ್ಪ ತೀರಿಕೊಂಡಾಗ ಇವನಿಗೆ ಎರಡು-ವರ್ಷದ ಮಗಳಿದ್ದಳು. ಚಿಕ್ಕ ವಯಸ್ಸಿನ ಭೀಮಬಾಯಿ ಪತಿ ತೀರಿಕೊಂಡ ಬಳಿಕ ತನ್ನ ಮಗಳನ್ನು ಕರೆದುಕೊಂಡು ಹೋಗಿ ತವರು ಮನೆಯಲ್ಲಿಯೇ ಉಳಿದಳು. ಎರಡು-ಮೂರು ವರ್ಷಗಳಾದ ಮೇಲೆ ತವರು ಮನೆಯಲ್ಲಿ ಜೀವನ ಸಾಗಿಸುವುದು ಭೀಮಬಾಯಿಗೆ ಕಷ್ಟವಾಯಿತು. ಕಾರಣ ಇವಳ ತಂದೆ-ತಾಯಿ ತೀರಿಕೊಂಡಿದ್ದರು ಮತ್ತು ಅಣ್ಣ-ತಮ್ಮಂದಿರ ಮದುವೆಯು ಆಗಿತ್ತು. ಅತ್ತಿಗೆಯರ ಜೊತೆ ವಿಧವೆ ಭೀಮಬಾಯಿ ಬದುಕುವುದು ಕಷ್ಟವಾದುದರಿಂದ ಪತಿ ಶಾಣಪ್ಪನ ಪಾಲಿಗೆ ಬರುವ ಆಸ್ತಿಯನ್ನು ಕೇಳಬೇಕೆಂದು ನಿರ್ಧರಿಸಿದಳು. ಅಂತೆಯೇ ಮಾವನಿಗೆ ತನ್ನ ಪತಿಗೆ ಬರುವ ಪಾಲಿನ ಆಸ್ತಿಯನ್ನು ಕೇಳಿದಳು. ಮಾವನು ಆಸ್ತಿಯನ್ನು ಕೊಡಲು ನಿರಾಕರಿಸಿದನು. ಆಗ ಭೀಮಬಾಯಿ ಊರಿನ ಪಂಚಾಯತಿಯನ್ನು ಸೇರಿಸಿದಳು. ಪಂಚಾಯತಿಯ ಮುಖಂಡರೂ ಕೂಡ ಭೀಮಬಾಯಿಯ ಕೋರಿಕೆಯನ್ನು ಒಪ್ಪಿ ಆಕೆಗೆ ಆಸ್ತಿಯಲ್ಲಿ ಪಾಲುಕೊಡಬೇಕೆಂದು ಹೇಳಿದರು. ಆದರೆ ಭೀಮಬಾಯಿಯ ಮಾವನ ಮನೆಯವರು ಆಸ್ತಿಯನ್ನು ಕೊಡಲು ನಿರಾಕರಿಸಿದರು.

ಭೀಮಬಾಯಿಗೆ ಒಬ್ಬಳು ಹೆಣ್ಣು ಮಗಳು ಇದ್ದುದರಿಂದ ಅವರ ಜೀವನ ಸುಗಮವಾಗಿ ಸಾಗಲು ಆಕೆಯ ಅಣ್ಣ-ತಮ್ಮಂದಿರು ತಮ್ಮ ಆಸ್ತಿಯಲ್ಲಿರುವ ಬಂಜರು ಭೂಮಿಯಲ್ಲಿ ೪ ಎಕರೆ ಜಮೀನನ್ನು ಕೊಟ್ಟರು. ಭೀಮಬಾಯಿ

ತವರು ಊರಲ್ಲಿ ಒಂದು ಬಾಡಿಗೆ ಮನೆ ಹಿಡಿದು ಅಣ್ಣ-ತಮ್ಮಂದಿರು ಕೊಟ್ಟಂಥ ಜಮೀನಿನಲ್ಲಿ ವ್ಯವಸಾಯ ಮಾಡಿಕೊಂಡು ಜೀವನ ನಡೆಸುತ್ತಿದ್ದಾಳೆ.

ತನ್ನ ಪತಿಯ ಮನೆಯವರು ಆಸ್ತಿ ಕೊಡದೇ ಇದ್ದುದಕ್ಕೆ ಕೋರ್ಟಿನಲ್ಲಿ ದಾವೆ ಹೂಡಬೇಕಾಗಿತ್ತು ಎಂಬ ಪ್ರಶ್ನೆಗೆ ''ಕೋರ್ಟಿನಲ್ಲಿ ದಾವೆ ಹಾಕಲು ಹಣ ಬೇಕಾಗುವುದು. ಅಷ್ಟೊಂದು ಹಣ ಖರ್ಚುಮಾಡುವ ತಾಕತ್ತು ನನ್ನಲ್ಲಿಲ್ಲ. ನನ್ನೆಲ್ಲಾ ಕೆಲಸಗಳನ್ನು ಬಿಟ್ಟು ಕೋರ್ಟು ಕಚೇರಿ ಎಂದು ಓಡಾಡಬೇಕಾಗತ್ತಾದ. ನಾನು ಹೆಣ್ಣು ಮಗಳಾಗಿರುವುದರಿಂದ ಒಬ್ಬಕೀಗೆ ಕೋರ್ಟು ಕಚೇರಿಗೆ ಅಡ್ಡಾಡಲು ಕಷ್ಟ. ಅಣ್ಣ-ತಮ್ಮಂದಿರು ತಮ್ಮ ಕೆಲಸ ಬಿಟ್ಟು ಬಾ ಅಂದರೆ ಎಷ್ಟು ಸಲ ಬರಲಿಕ್ಕ ಆಗತಾದ ಒಂದೆರಡು ಸಲ ಬರುತ್ತಾರ ಅಷ್ಟೇ. ಮುಂದೆ ನನಗೆ ಕಷ್ಟ ಆಗತ್ತಾದ. ಅದರಾಗ, ನಮ್ಮದು ಸಂಪ್ರದಾಯಸ್ಥ ಕುಟುಂಬ ಅದ. ಹೆಣ್ಣು ಮಕ್ಕಳು ಮನೆಬಿಟ್ಟು ಹೊರಗೆ ಹೋಗದಿಲ್ಲ. ಹೋಗುವುದು ಬಹಳ ಅಪರೂಪ. ಅದರಾಗ ಕೋರ್ಟು ಕಚೇರಿಗೆ ಹೋದರ ಮನೆ ಮರ್ಯಾದೆ ಹೋಗತಾದ ಗಂಡನ ಮನೆಯವರು ಚೆನ್ನಾಗಿರಲಿ, ನನಗೆ ಮತ್ತು ನನ್ನ ಮಗಳಿಗೆ ಬದುಕಲಿಕ್ಕ ನನ್ನ ತವರು ಮನೆಯವರು ಹೊಲ ಕೊಟ್ಟಾರ ಅಷ್ಟೇ ಸಾಕು'' ಎಂದು ಮಾರ್ಮಿಕವಾಗಿ ಉತ್ತರ ನೀಡುತ್ತಾಳೆ.

ಈ ಪ್ರಕರಣವನ್ನು ಗಮನಿಸಿದಾಗ ಗುಲಬರ್ಗಾ ಜಿಲ್ಲೆಯ ಬಹುತೇಕ ಗ್ರಾಮೀಣ ಅಥವಾ ನಗರ ಪ್ರದೇಶಗಳ ಮಹಿಳೆಯರು ಶಿಕ್ಷಣದ ಕೊರತೆಯಿಂದಿರುವುದು ಮತ್ತು ಅಜ್ಞಾನ ಪ್ರದರ್ಶಿಸುವುದನ್ನು ಕಾಣಬಹುದು. ಪ್ರಕರಣದ ಭೀಮಬಾಯಿಗೆ ತನಗೆ ಪತಿಯ ಪಾಲಿನ ಆಸ್ತಿ ಕೊಡದ ಮಾವನ ಮೇಲೆ ನ್ಯಾಯಾಲಯದಲ್ಲಿ ದಾವೆ ಹೂಡಲು ಆರ್ಥಿಕ ಸ್ಥಿತಿ ಅಡ್ಡ ಬಂದಿದೆ. ದಾವೆ ಹಾಕಲು ಸಾಧ್ಯವಾಗದ ಪರಿಸ್ಥಿತಿಯಿಂದ ಊರಿನ ಪಂಚಾಯಿತಿ ಸೇರಿಸಿ ತನ್ನ ಹಕ್ಕನ್ನು ಪ್ರತಿಪಾದಿಸಿದ್ದಾಳೆ. ಆದರೆ ಇಲ್ಲಿ ಪಂಚಾಯಿತಿಯ ಮೂಲಕ ಪ್ರಕರಣ ಬಗೆ ಹರಿಯದಿರುವುದನ್ನು ಗಮನಿಸಬೇಕು. ಇಲ್ಲಿ ಭೀಮಬಾಯಿಗೆ ಪತಿಯ ಮನೆಯವರು ಆಸ್ತಿ ಕೊಡದಿದ್ದರೂ ತವರು ಮನೆಯವರು ಶ್ರೀಮಂತರಾಗಿರುವುದರಿಂದ ಸ್ವಲ್ಪ ಭೂಮಿಯನ್ನು ಕೊಟ್ಟಿದ್ದಾರೆ. ಆದರೆ ತವರು ಮನೆಯವರು ಬಡವರಾದಂಥ ಸಂದರ್ಭದಲ್ಲಿ ಈ ಮಹಿಳೆಯ ಸ್ಥಿತಿ ಹೇಳತೀರದು. ಇಲ್ಲಿ ಭೀಮಬಾಯಿಗೆ ತವರಿನ ಮನೆಯವರು ಬೆಂಬಲವಾಗಿ ನಿಂತು ಅವಳಿಗೆ ಭೂಮಿ ಕೊಟ್ಟಿದ್ದರೂ ಕೂಡ ಅದು ಬಂಜರು ಭೂಮಿಯಿದೆ. ತವರಿನವರು ಕೂಡ ಹೆಸರಿಗೆ ಮಾತ್ರ ಭೂಮಿಯನ್ನು ಕೊಟ್ಟಿದ್ದಾರೆ. ಕಾರಣ ಅವಳು ಹೆಣ್ಣು ಮಗಳು ಎಷ್ಟಾದರೂ ಅವಳು ಪರರ ವಸ್ತು. ಇಂದಿಲ್ಲ ನಾಳೆ ತನ್ನ ಪತಿಯ ಮನೆಗೆ ಹಿಂದಿರುಗಿದರೆ ಆ ಭೂಮಿ ಅವಳ ಪತಿಯ ಮನೆಗೆ ಸೇರುತ್ತದೆ ಎನ್ನುವುದಕ್ಕಾಗಿ ಅವಳಿಗೆ ಬಂಜರು ಭೂಮಿಯನ್ನು ಕೊಡಲಾಗಿದೆ. ಹೆಣ್ಣು ಮಕ್ಕಳಿಗೆ ಪತಿಯ ಮನೆಯಲ್ಲಿ ಆಶ್ರಯ ಇರದ ಕಾರಣ ತವರು ಮನೆಗೆ ಬಂದರೆ ತವರಿನಲ್ಲಿ ಕೆಲವೊಂದು ಬಾರಿ ಹೆಸರಿಗೆ ಮಾತ್ರ ಆಶ್ರಯ ನೀಡಲಾಗುವುದು. ಒಟ್ಟಿನಲ್ಲಿ ಇಂಥ ಮಹಿಳೆಯರ ಸ್ಥಿತಿ ತುಂಬಾ ಚಿಂತಾಜನಕವಾದಂಥದ್ದಾಗಿದೆ.

**ಪ್ರಕರಣ - ಎರಡು**

ಗುಲಬರ್ಗಾ ತಾಲೂಕಿನ ಉದನೂರ ಗ್ರಾಮದ ಮಹಾದೇವಮ್ಮನ ವಿವಾಹ ಅದೇ ತಾಲೂಕಿನ ನಂದಿಕೂರ ಗ್ರಾಮದ ಕೃಷಿಕ ಗುರುಪಾದಪ್ಪನ ಜೊತೆ ನಡೆಯಿತು. ವಿವಾಹವಾದ ಎಂಟು ವರ್ಷಗಳ ನಂತರ ಪತಿ ಗುರುಪಾದಪ್ಪನು ಮರಣ ಹೊಂದಿದನು. ಪತಿಯ ಮರಣದ ನಂತರ ಅತ್ತೆ-ಮಾವನ ಕಾಟ ತಾಳಲಾರದೆ ಮಹಾದೇವಮ್ಮ ತನ್ನ ಇಬ್ಬರು ಹೆಣ್ಣು ಮಕ್ಕಳ ಜೊತೆ ತನ್ನ ತವರು ಮನೆಯಾದ ಉದನೂರ ಗ್ರಾಮವನ್ನು ಸೇರಿದಳು. ತವರು ಮನೆಯವರು ಬಡವರಾಗಿರುವುದರಿಂದ ಅಲ್ಲಿಯೂ ಆಕೆಯ ಜೀವನ ಕಷ್ಟಕರವಾಗಿತ್ತು. ಅದರಲ್ಲೂ ತನಗೆ ಇಬ್ಬರು ಹೆಣ್ಣು

ಮಕ್ಕಳು ಇರುವುದರಿಂದ ಪತಿಯ ಮನೆಯ ಆಸ್ತಿ ಕೇಳಬೇಕೆಂದು ಯೋಚಿಸಿ ಒಂದು ದಿನ ಮಾವನ ಮನೆಗೆ ಹೋಗಿ ತನ್ನ ಪತಿಯ ಪಾಲಿಗೆ ಬರುವ ಆಸ್ತಿಯನ್ನು ಕೊಡಿ ಎಂದು ಮಾವನಿಗೆ ಕೇಳಿದಳು. ಅದಕ್ಕೆ ಮಾವ ಒಪ್ಪದ ಕಾರಣ ''ನಿಮ್ಮ ಮೊಮ್ಮಕ್ಕಳಿಗೆ ಸಾಕಲು ಜೀವನಾಂಶವಾದರೂ ಕೊಡಿ ಎಂದು ಕೇಳಿದಳು'' ಅದಕ್ಕೂ ಮಾವ ಒಪ್ಪಲಿಲ್ಲ.

''ನಿನ್ನ ಗಂಡ ತೀರಿಕೊಂಡಿದ್ದಾನ. ನೀನು ನನಗೆ ಸಂಬಂಧವಿಲ್ಲ. ಭೂಮಿಯಾಗಲೀ, ಜೀವನಾಂಶವಾಗಲೀ ನಾವು ನಿನಗೆ ಕೊಡಲ್ಲ'' ಎಂದು ಮಾವ ಖಡಾಖಂಡಿತವಾಗಿ ಹೇಳಿದ. ಮಹಾದೇವಮ್ಮನಿಗೆ ನ್ಯಾಯಾಲಯಕ್ಕೆ ಹೋಗಿ ಪ್ರಶ್ನಿಸುವ ಸಾಮರ್ಥ್ಯವಿಲ್ಲದ ಕಾರಣ ಪಂಚಾಯತಿಯನ್ನು ಸೇರಿಸಿದಳು. ಪಂಚರ ಮಾತಿಗೂ ಮಹಾದೇವಮ್ಮಳ ಮಾವ ಒಪ್ಪಲಿಲ್ಲ. ಅಂತಿಮವಾಗಿ ''ಮಹಾದೇವಮ್ಮನಿಗೆ ಇಬ್ಬರು ಮೈದುನರು ಇರುವುದರಿಂದ ಅವರ ಮದುವೆ ಆಗುವವರೆಗೂ ಭೂಮಿಯನ್ನು ಹಂಚುವುದಿಲ್ಲ'' ಎಂದನು. ''ಅಲ್ಲಿಯವರೆಗೂ ಅವಳು ಹೇಗೆ ಬದುಕಬೇಕು ಅವಳನ್ನು ಮತ್ತು ಇಬ್ಬರು ಮಕ್ಕಳನ್ನು ನಿಮ್ಮ ಮನೆಯಲ್ಲಿಯೇ ಇಟ್ಟುಕೊಳ್ಳಿ'' ಎಂಬ ಪಂಚರ ಪಶ್ನೆಗೆ ಮಹಾದೇವಮ್ಮಳ ಮಾವ ''ಅವಳು ಪಂಚಾಯತಿಯವರೆಗೂ ಬಂದಿರುವಳು, ನಮ್ಮ ಮನೆಯ ಮರ್ಯಾದೆ ತೆಗೆದಿರುವಳು. ಇಂಥಕಿಗಿ ನಮ್ಮ ಮನೆಯಲ್ಲಿ ಜಾಗ ಇಲ್ಲ '' ಎಂದನು. ಇದಕ್ಕುತ್ತರವಾಗಿ ಪಂಚರು ''ಭೂಮಿಯನ್ನು ಹಂಚುವವರೆಗಾದರೂ ಅವಳ ಜೀವನ ಸಾಗಬೇಕಲ್ಲ ಅದಕ್ಕ ಭತ್ತವಾದರೂ ಕೊಡಿ'' ಎಂದರು. ಆದರೆ ಮಹಾದೇವಮ್ಮಳ ಮಾವ ಭತ್ತ ಕೊಡಲು ಒಪ್ಪಲಿಲ್ಲ. ಕೊನೆಗೆ ತನ್ನ ಇಬ್ಬರು ಮಕ್ಕಳು ಮದುವೆಯಾಗುವರೆಗೆ ತಿಂಗಳಿಗೆ ೩೦೦/- ರೂ ಗಳನ್ನು ಕೊಡುವುದಾಗಿ ಒಪ್ಪಿದ. ಹಾಗೆಯೇ ತನ್ನ ಮಕ್ಕಳ ಮದುವೆಯಾದ ಮೇಲೆ ಅವಳಿಗೆ ಬರುವ ಮೂರು ಎಕರೆ ಭೂಮಿಯನ್ನು ಕೊಡುವುದಾಗಿ ಒಪ್ಪಿಕೊಂಡನು.

ಈಗ ಮಹಾದೇವಮ್ಮ ತಿಂಗಳಿಗೆ ೩೦೦/- ರೂ ಗಳನ್ನು ಮಾವನಿಂದ ಪಡೆಯುತ್ತಿದ್ದಾಳೆ. ತನ್ನ ತವರು ಮನೆಯಲ್ಲಿಯೇ ಇದ್ದುಕೊಂಡು ಕೂಲಿ ಕೆಲಸಕ್ಕೆ ಹೋಗಿ ತನ್ನ ಮಕ್ಕಳನ್ನು ಮತ್ತು ತಂದೆ-ತಾಯಿಯರನ್ನು ಸಾಕುತ್ತಾ ಜೀವನ ಸಾಗಿಸುತ್ತಿದ್ದಾಳೆ. ಮಹಾದೇವಮ್ಮಳ ತಂದೆ-ತಾಯಿಗೆ ಒಬ್ಬಳೆ ಮಗಳು. ಇವರು ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದರು. ಈಗ ವೃದ್ಧರಾದ ಕಾರಣ ಕೂಲಿ ಮಾಡಲು ಆಗುತ್ತಿಲ್ಲ. ಹೀಗಾಗಿ ತನ್ನ ಮಕ್ಕಳ ಜೊತೆ ತಂದೆ-ತಾಯಿಯನ್ನು ಸಾಕುವ ಜವಾಬ್ದಾರಿ ಇವಳ ಮೇಲೆಯೇ ಬಿದ್ದಿದೆ.

ಈ ಪ್ರಕರಣದಲ್ಲಿ ''ತನ್ನ ಮಗ ಸತ್ತ ನಂತರ ಸೊಸೆಗೂ ನಮಗೂ ಸಂಬಂಧವಿಲ್ಲ'' ಎನ್ನುವ ಹೇಳಿಕೆಯ ಹಿಂದಿರುವ ಆಶಯವನ್ನು ಸೂಕ್ಷ್ಮವಾಗಿ ಗಮನಿಸಬೇಕಾದುದು ಅತ್ಯಗತ್ಯ. ಜಗತ್ತಿನಲ್ಲಿ ಸಂಪ್ರದಾಯದ ಮೂಲಕ 'ಜನ್ಮ ಜನ್ಮದ ಅನುಬಂಧ' ಎಂದು ಉದ್ಘರಿಸುತ್ತಾ ಮದುವೆ ಮಾಡಿ ದಾಂಪತ್ಯ ಜೀವನ ನಡೆಸುವಂತೆ ಮಾಡುವ ಕ್ರಮ ಒಂದು ಕಡೆಯಾದರೆ, ಕುಂಟು ನೆಪಗಳನ್ನು ನೀಡಿ ಸಂಬಂಧವಿಲ್ಲದ ರೀತಿಯಲ್ಲಿ ಅಮಾನವೀಯತೆ ಮೆರೆದು ಮನೆಯಿಂದ ಹೊರಗಟ್ಟುವುದು, ಬೆಂಕಿ ಹಚ್ಚಿಕೊಳ್ಳುವುದು, ಉಪವಾಸ, ದೈಹಿಕ ಹಿಂಸೆ ನೀಡುವುದು ಮತ್ತೊಂದು ಕಡೆ. ಇದು ಭಾರತದ ಬಹುತೇಕ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುವ ವಾಸ್ತವ ಸಂಗತಿಗಳು.

ಈ ಪ್ರಕರಣವನ್ನು ನೋಡಿದಾಗ ಮಹಾದೇವಮ್ಮಳ ಗಂಡ ಗುರುಪಾದಪ್ಪನ ಸಾವು ಆಕಸ್ಮಿಕ. ಅದನ್ನೇ ಕಾರಣವಾಗಿಟ್ಟುಕೊಂಡು ಸಂಬಂಧವನ್ನು ನಿರಾಕರಿಸುವುದು. ಹಾಗೆಯೇ ಪಂಚಾಯತಿಯನ್ನು ಸೇರಿಸಿ ಮರ್ಯಾದೆ ತೆಗೆದಿರುವುದರಿಂದ ತಮ್ಮ ಮನೆಯಲ್ಲಿ ಸೊಸೆಗೆ ಸ್ಥಳವಿಲ್ಲ ಎಂದು ಮೂಢನಂಬಿಕೆಗಳ ಸರಮಾಲೆಯನ್ನೇ ಹೊತ್ತುಕೊಂಡು ಹೆಣ್ಣು ಮಕ್ಕಳನ್ನು ಬೀದಿಗೆ ತಳ್ಳುವಂಥ ಸ್ಥಿತಿಯನ್ನು ನೋಡಬಹುದು. ಗುಲಬರ್ಗಾದಂಥ

ಹಿಂದುಳಿದ ಜಿಲ್ಲೆಯ ಅಂಕಿ-ಅಂಶಗಳ ಪ್ರಕಾರ ಜನಸಂಖ್ಯೆ ಮಾತ್ರ ಏರುಗತಿಯಲ್ಲಿದ್ದರೆ ಅಭಿವೃದ್ಧಿ, ಮೂಲಭೂತ ಸೌಕರ್ಯ, ತಿಳುವಳಿಕೆ, ಜ್ಞಾನ ಇಳಿಕೆ ಗತಿಯಲ್ಲಿರುವುದನ್ನು ಕಾಣಬಹುದು. ಸರ್ಕಾರದ ಯೋಜನೆಗಳು ಕಟ್ಟಕಡೆಯ ಪ್ರಜೆಗೂ ಸಿಗದಿರುವುದೇ ಇದಕ್ಕೆಲ್ಲ ಕಾರಣ. ೨೧ ನೇ ಶತಮಾನದಲ್ಲಿಯೂ ಮಹಿಳೆಯನ್ನು ಈ ರೀತಿಯ ಅಮಾನವೀಯತೆಯಿಂದ ನೋಡುವುದು ನಮ್ಮ ಸಮಾಜಕ್ಕೆ ಕಳಂಕ ತರುವಂಥದ್ದು ಎಂದು ಜನಸಾಮಾನ್ಯರು ತಿಳಿದರಷ್ಟೇ ಇಂತಹ ಪ್ರಕರಣಗಳು ಮರುಕಳಿಸದು ಎಂದು ಹೇಳಬಹುದು.

**ಪ್ರಕರಣ - ಮೂರು**

ವಸಂತ ಗುಲಬರ್ಗಾ ತಾಲೂಕಿನ ಹಾವನೂರ ಗ್ರಾಮದ ನಿವಾಸಿ. ಆತನ ಪತ್ನಿ ಇಂದುಮತಿ. ಆಕೆಯ ತವರು ಮನೆ ಅಫಜಲಪೂರ ತಾಲೂಕು. ವಸಂತ ಇಂದುಮತಿ ದಂಪತಿಗಳಿಗೆ ಮೂವರು ಹೆಣ್ಣು ಮಕ್ಕಳು ಹುಟ್ಟಿದ ನಂತರ ಅನಾರೋಗ್ಯದಿಂದ ಇಂದುಮತಿ ಸಾವನ್ನಪ್ಪಿದಳು. ಹಾಗಾಗಿ ವಸಂತನಿಗೆ ತನ್ನ ಮಕ್ಕಳನ್ನು ಬೆಳೆಸುವುದು ಕಷ್ಟವಾಯಿತು. ತನ್ನ ಅತ್ತೆ (ಇಂದುಮತಿಯ ತಾಯಿ) ಪುತಳಾಬಾಯಿಯನ್ನು ಕರೆದುಕೊಂಡು ಬಂದು ತನ್ನ ಮನೆಯಲ್ಲಿ ರಿಸಿಕೊಂಡನು.

ಚಿಕ್ಕ ವಯಸ್ಸಿನವನಾದ ವಸಂತ ಹೆಂಡತಿ ತೀರಿದ ಕೆಲವು ವರ್ಷಗಳ ನಂತರ ವಸಂತ ಸಾವಿತ್ರಿ ಎಂಬಾಕೆಯನ್ನು ಮರು ವಿವಾಹವಾದನು. ಸಾವಿತ್ರಿಗೂ ತನ್ನ ಅತ್ತೆ ಪುತಳಾಬಾಯಿಗೂ ಮನೆಯಲ್ಲಿ ಹೊಂದಾಣಿಕೆಯಾಗದೇ ಇದ್ದಾಗ ವಸಂತ ತನ್ನ ಎರಡನೆ ಹೆಂಡತಿ ಜೊತೆ ಬೇರೆ ಮನೆಮಾಡಿದ. ಮದುವೆಯಾಗಿ ಒಂದು ವರ್ಷದೊಳಗೆ ಮಕ್ಕಳ ಭವಿಷ್ಯದ ಬಗ್ಗೆಯೂ ಯೋಚಿಸದೆ ಹೆಂಡತಿಯ ಮಾತು ಕೇಳಿ ಬೇರೆ ಮನೆಮಾಡಿದ. ಮೂವರು ಹೆಣ್ಣು ಮಕ್ಕಳು (ಪುತಳಾಬಾಯಿ) ಅಜ್ಜಿಯ ಆಶ್ರಯದಲ್ಲಿಯೇ ಬೆಳೆದರು. ತಂದೆಯಾದವನು ಮಕ್ಕಳ ಯೋಗಕ್ಷೇಮ, ಶಿಕ್ಷಣದ ಬಗ್ಗೆ ಒಂದು ದಿನವು ವಿಚಾರಿಸಲು ಬರಲಿಲ್ಲ. ಮಕ್ಕಳ ಯೋಗಕ್ಷೇಮ ಮತ್ತು ವಿದ್ಯಾಭ್ಯಾಸವನ್ನು ಅಜ್ಜಿ ಮತ್ತು ಸೋದರ ಮಾವಂದಿರು ನೋಡಿಕೊಂಡರು. ಅಜ್ಜಿ ಪುತಳಾಬಾಯಿ ಮತ್ತು ಸೋದರ ಮಾವಂದಿರು ಸೇರಿ ದೊಡ್ಡ ಮಗಳಿಗೆ ೧೬ವರ್ಷ ತುಂಬುತ್ತಲೇ ಸಂಬಂಧಿಕರಲ್ಲಿಯೇ ಕೊಟ್ಟು ಮದುವೆ ಮಾಡಿದರು. ತಂದೆ ಕೇವಲ ಅತಿಥಿಯಾಗಿ ಬಂದು ಮದುವೆ ಮುಗಿಸಿಕೊಂಡು ಹೋದನು. ಮಗಳ ಮದುವೆಯ ಯಾವುದೇ ಜವಾಬ್ದಾರಿಯನ್ನು ಆತ ಹೊತ್ತುಕೊಳ್ಳಲಿಲ್ಲ. ಇನ್ನು ಇಬ್ಬರು ಹುಡುಗಿಯರು ವಿದ್ಯಾಭ್ಯಾಸ ಮಾಡುತ್ತಲಿದ್ದಾರೆ.

ಇಲ್ಲಿಯವರೆಗೂ ತನ್ನ ತಂದೆ ತಮ್ಮ ಬಗ್ಗೆ ಯಾವುದೇ ರೀತಿಯ ಯೋಗಕ್ಷೇಮ ವಿಚಾರಿಸಲಿಲ್ಲ. ಎರಡನೆ ತಾಯಿಯ (ಮಲತಾಯಿ) ಮಕ್ಕಳ ಬಗ್ಗೆಯೇ ಯೋಚಿಸುತ್ತಿರುವರು. ನಾವು ಅವರ ಮಕ್ಕಳಲ್ಲವೆ? ನಮ್ಮನ್ನು ನೋಡಿಕೊಳ್ಳುವುದು ಅವರ ಕರ್ತವ್ಯ ಎಂದು ಇಬ್ಬರು ಹೆಣ್ಣು ಮಕ್ಕಳು ಯೋಚಿಸಿ ತಂದೆಯಲ್ಲಿಗೆ ಬಂದು ''ನಮ್ಮ ವಿದ್ಯಾಭ್ಯಾಸ ಮತ್ತು ಯೋಗಕ್ಷೇಮವೆಲ್ಲ ನೀವೆ ನೋಡಿಕೊಳ್ಳಿ, ಎಷ್ಟು ದಿನ ಅಂತ ಅಜ್ಜಿ ಮಾವಂದಿರ ಸಹಾಯ ಪಡೆಯುವುದು. ತಂದೆ-ತಾಯಿ ಇದ್ದು ಇಲ್ಲದವರ ಹಾಗೆ ಬದುಕತ್ತಾ ಇದ್ದಿವಿ. ನಮಗ ತಂದೆ-ತಾಯಿ ಜೊತೆ ಇರಬೇಕು ಅನ್ನಿಸ್ತದ'' ಎಂದಿದ್ದಕ್ಕೆ ವಸಂತ ''ನಿಮಗ ನನ್ನ ಜೊತೆ ಇಟ್ಟಕೊಳ್ಳಲಿಕ್ಕ ಆಗಲ್ಲ. ನಿಮ್ಮಿಂದನೆ ನಾವಿಬ್ಬರು ಮನಿ ಬಿಟ್ಟು ಬೇರೆ ಮನಿ ಮಾಡಿವಿ. ಈಗ ಮತ್ತ ನಿಮಗ ನಮ್ಮ ಜೊತೆ ಇಟ್ಟಕೊಂಡರ ದೀನಾಲು ಮನೆಯಲ್ಲಿ ರಾದ್ಧಾಂತ ಆಗತ್ತದ. ಮನೆಯಲ್ಲಿ ನೆಮ್ಮದಿನೆ ಹೊಂಟಹೊಗತ್ತಾದ ನೀವು ಅಜ್ಜಿ ಜೊತಿನೆ ಹೋಗಿ ಇರಿ'' ಎಂದು ಹೇಳಿದನು. ಅದಕ್ಕೆ ಇಬ್ಬರು ಮಕ್ಕಳು ''ನೀವು ನಮ್ಮಗ ಜೊತೆಯಲ್ಲಿ ಇಟ್ಟಕೊಳ್ಳದಿಲ್ಲ ಅಂದರ ನಮ್ಮ ವಿದ್ಯಾಭ್ಯಾಸದ ಖರ್ಚು, ನಮ್ಮ ಯೋಗಕ್ಷೇಮ ಮತ್ತು ಮುಂದೆ ನಮ್ಮಿಬ್ಬರ ಮದುವೆಯ ಖರ್ಚು ನೀವೆ ನೋಡಕೊಳ್ಳಬೇಕು.

ಅಕ್ಕನ ಮದುವೆ ಅಂತು ಮಾವಂದಿರು ಮಾಡಿದರು. ನಮ್ಮಿಬ್ಬರ ಖರ್ಚಾದರೂ ನೀವು ನೋಡಕೊಳ್ಳಿ'' ಎಂದರು. ಅದಕ್ಕೆ ವಂಸತ ಸಿಟ್ಟಿಗೆದ್ದು ದೊಡ್ಡವರ ಜೊತೆ ಹೀಗಾ ಮಾತನಾಡದು ''ನಿಮಗೆ ನಾನು ಯಾವುದೇ ಖರ್ಚು ಕೊಡದಿಲ್ಲ ಹೋಗಿ'' ಎಂದನು. ಇಬ್ಬರು ಹೆಣ್ಣು ಮಕ್ಕಳು ಅದು ಹೇಗೆ ಖರ್ಚು ಕೊಡಲ್ಲ ಕೋರ್ಟಿಗೆ ಹೋಗುತ್ತೇವೆ ಎಂದು ಹೇಳಿ ಮನೆಗೆ ಬಂದರು. ಅಜ್ಜಿಗೆ ತಂದೆಯ ಮನೆಯಲ್ಲಿ ನಡೆದ ವಿಷಯವೆಲ್ಲಾ ಹೇಳಿ ನಾವು ಮೂವರು ಹೆಣ್ಣು ಮಕ್ಕಳು ಸೇರಿ ''ನಮ್ಮನ್ನು ನೋಡಿಕೊಳ್ಳಬೇಕು ಇಲ್ಲ ಆಸ್ತಿಯಲ್ಲಿ ಪಾಲು ಕೊಡಬೇಕು ಎಂದು ತಂದೆಯ ಮೇಲೆ ದಾವೆ ಹಾಕುತ್ತೇವೆ'' ಎಂದರು. ಆಗ ಅಜ್ಜಿ ಮತ್ತು ಮಾವಂದಿರು ತಡೆಹಿಡಿದರು. ನಂತರ ಮೂವರು ಹೆಣ್ಣು ಮಕ್ಕಳು ಮತ್ತು ದೊಡ್ಡ ಮಗಳ ಗಂಡ (ಅಳಿಯ) ಸೇರಿ ಸಂಬಂಧಿಕರಲ್ಲಿ ಹಿರಿಯರ ಮೂಲಕ ತಂದೆಯ ಹೊಲದಲ್ಲಿ ಅರ್ಧ ಪಾಲು ಕೊಡಬೇಕು ಅಥವಾ ಮಕ್ಕಳನ್ನು ನೋಡಿಕೊಳ್ಳಬೇಕು ಎಂದು ವಸಂತನಿಗೆ ಹೇಳಿಸಿದರು. ಅದನ್ನು ಒಪ್ಪದ ವಸಂತ ''ನನಗೆ ಇಬ್ಬರು ಗಂಡು ಮಕ್ಕಳಿದ್ದಾರೆ ಅದಕ್ಕೆ ಹೊಲದಲ್ಲಿ ಪಾಲು ಕೊಡುವುದಿಲ್ಲ. ಇಬ್ಬರು ಹೆಣ್ಣು ಮಕ್ಕಳ ಮದುವೆಯ ಖರ್ಚನ್ನು ನೋಡಿಕೊಳ್ಳುತ್ತೇನೆ'' ಎಂದು ಹೇಳಿದನು. ಮತ್ತೇ ಅವರ ಯೋಗಕ್ಷೇಮವನ್ನು ಯಾರು ನೋಡಿಕೊಳ್ಳಬೇಕು ಎಂದಾಗ ''ಇದುವರೆಗೆ ಅವರ ಅಜ್ಜಿ ಮಾವಂದಿರೆ ನೋಡಿಕೊಂಡಿದ್ದಾರೆ. ಮದುವೆ ಆಗುವವರೆಗೆ ಅವರೆ ನೋಡಿಕೊಳ್ಳಲಿ'' ಎಂದು ಹೇಳಿದನು. ಇಬ್ಬರು ಹೆಣ್ಣು ಮಕ್ಕಳೇ ಇರುವುದರಿಂದ ಅಜ್ಜಿ ಮತ್ತು ಮಾವಂದಿರೆ ನೋಡಿಕೊಳ್ಳಬೇಕಾಯಿತು. ಒಂದು ವೇಳೆ ಅವರ ತಂದೆಯಲ್ಲಿಗೆ ಬಲವಂತವಾಗಿ ಮಕ್ಕಳನ್ನು ಕಳಿಸಿದರೆ ವಸಂತ ಈ ಮಕ್ಕಳಿಗೆ ಎಲ್ಲಿ ಬೀದಿಗೆ ತಳ್ಳುವನೋ ಎಂದು ಹೇದರಿ ಅಜ್ಜಿಯೇ ನೋಡಿಕೊಳ್ಳುತ್ತಿರುವಳು.

ಈ ಪ್ರಕರಣವನ್ನು ನೋಡಿದಾಗ ತಂದೆ ಬಲತಾಯಿ ಮಕ್ಕಳ ಪಾಲಿಗೆ ಇದ್ದೂ ಇಲ್ಲದವರ ಹಾಗಿದ್ದಾರೆ. ವಸಂತನ ಮೊದಲ ಪತ್ನಿಯ ಮೂವರು ಹೆಣ್ಣು ಮಕ್ಕಳು ಚಿಕ್ಕಂದಿನಿಂದಲೇ ಅಜ್ಜಿ ಮತ್ತು ಸೋದರ ಮಾವಂದಿರ ಆಶ್ರಯದಲ್ಲಿಯೇ ಬೆಳೆದರು. ವಯಸ್ಕರಾದಾಗ ತಮ್ಮ ಯೋಗಕ್ಷೇಮ ನೋಡಿಕೊಳ್ಳದ ತಂದೆಯ ಬಳಿ ಆಸ್ತಿಯಲ್ಲಿ ಪಾಲು ಕೇಳಿರುವುದು ಸಮಯೋಚಿತವಾಗಿದೆ. ಕಾನೂನಿನ ಮೂಲಕ ಪ್ರಯತ್ನಿಸಲು ಹೋದರೆ ಹಿರಿಯರು ಅಡ್ಡಿಪಡಿಸಿದರು. 'ಭಾವನಾತ್ಮಕ ಸಂಬಂಧ', 'ಮರ್ಯಾದೆಯ ಪ್ರಶ್ನೆ' ಗಳನ್ನು ಮುಂದಿಟ್ಟು ಮಕ್ಕಳು ತಂದೆಯ ವಿರುದ್ಧ ದಾವೆ ಹೂಡಲು ಅಡ್ಡಿಪಡಿಸಿದರು. ಅದರ ಬದಲಾಗಿ ಪಂಚಾಯತಿಯ ಮೂಲಕ ಬಗೆಹರಿಸಲು ಸಲಹೆ ನೀಡಿದರು.

ಇಲ್ಲಿ ಓರ್ವ ತಂದೆಗೆ ತನ್ನ ಮಕ್ಕಳೆ ಭಾರವಾಗಿರುವುದನ್ನು ಕಾಣಬಹುದು. ಸಮಾಜದ ವ್ಯವಸ್ಥೆಯಲ್ಲಿ ಮಕ್ಕಳ ಯೋಗಕ್ಷೇಮ, ಶಿಕ್ಷಣ, ಮದುವೆ ಬಗ್ಗೆ ನೋಡಿಕೊಳ್ಳುವುದು ತಂದೆ-ತಾಯಿಯರ ಜವಾಬ್ದಾರಿ, ಅದು ಕರ್ತವ್ಯವೂ ಹೌದು. ಇಲ್ಲಿ ಹೆಣ್ಣು ಮಕ್ಕಳು ಶಿಕ್ಷಣವನ್ನು ಪಡೆದಿರುವುದರಿಂದ ಕಾನೂನಿನ ಬಗ್ಗೆ ಮತ್ತು ತಮ್ಮ ಹಕ್ಕುಗಳ ಬಗ್ಗೆ ಅರಿತಿರುವುದರಿಂದ ತಂದೆಗೆ ಆಸ್ತಿ ಕೇಳಿರುವರು. ತಂದೆ ಇದಕ್ಕೆ ಒಪ್ಪಲಿಲ್ಲ. ಒಂದು ವೇಳೆ ಅಜ್ಜಿಯು ಈ ಹೆಣ್ಣುಮಕ್ಕಳ ಯೋಗಕ್ಷೇಮ ನೋಡದೆ ಕೈ ಬಿಟ್ಟಿದ್ದರೆ ಈ ಹೆಣ್ಣು ಮಕ್ಕಳು ಬೀದಿಗೆ ಬೀಳುವ ಪರಿಸ್ಥಿತಿ ಇತ್ತು. ಮಕ್ಕಳು ತಮ್ಮ ಹಕ್ಕನ್ನು ಕೇಳಿದಾಗ ನಿರಾಕರಿಸಿ ''ನಿಮ್ಮ ಮದುವೆಯ ಖರ್ಚನ್ನು ಮಾತ್ರ ಕೊಡುತ್ತೇನೆ'' ಎಂದು ವಾದಮಾಡಿದ್ದಾನೆ ವಸಂತ. ಆದರೆ ಇಲ್ಲಿ 'ಸಂಬಂಧ', 'ಮರ್ಯಾದೆ' ಗಳನ್ನು ಎತ್ತಿ ಅವರನ್ನು ಹಾಗೆಯೇ ಬಿಡಲಾಗಿದೆ.

## ಪ್ರಕರಣ-ನಾಲ್ಕು

ನಾಗಮ್ಮ ಮತ್ತು ಸಾಹೇಬಗೌಡ ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಸನ್ನತ್ತಿ ಗ್ರಾಮದವರು. ನಾಗಮ್ಮಳ ತವರುಮನೆ ಗುಲಬರ್ಗಾದ ಬಿದ್ದಾಪೂರ ಕಾಲೊನಿ ಇವಳ ತವರು ಮನೆಯವರು ಶ್ರೀಮಂತರಾಗಿದ್ದರೂ ಕೂಡ ಇವಳು ಶಿಕ್ಷಣವನ್ನು ಪಡೆದಿರಲಿಲ್ಲ. ತವರಿನವರು ಶ್ರೀಮಂತರಾಗಿರುವುದರಿಂದ ಸನ್ನತ್ತಿಯ ಸಾಹೇಬಗೌಡನು ಶ್ರೀಮಂತ ಕುಟುಂಬದವನೆ ಆಗಿದ್ದ. ಸಾಹೇಬಗೌಡ ಮತ್ತು ಆತನ ತಮ್ಮ ಅಂಬಣ್ಣ ಇಬ್ಬರೆ ಅಣ್ಣ-ತಮ್ಮಂದಿರು ನಾಗಮ್ಮಳ ಮದುವೆಯಾಗಿ ಒಂದು ವರ್ಷದ ನಂತರ ಆಕೆಯ ಅತ್ತೆ-ಮಾವ ತೀರಿದ್ದರು. ಸಾಹೇಬಗೌಡನಿಗೂ ಮತ್ತು ಅಂಬಣ್ಣನಿಗೂ ಒಟ್ಟಿಗೆ ಮದುವೆಯಾಗಿತ್ತು. ಆದರೆ ನಾಗಮ್ಮಳಿಗೆ ಮದುವೆಯಾಗಿ ಆರು ವರ್ಷಕ್ಕೆ ಪತಿಯಾದ ಸಾಹೇಬಗೌಡ ಅನಾರೋಗ್ಯಕ್ಕೆ ತುತ್ತಾಗಿ ತೀರಿಕೊಂಡನು. ಈ ಸಂದರ್ಭದಲ್ಲಿ ನಾಗಮ್ಮ ಮೂರು ತಿಂಗಳ ಗರ್ಭಿಣಿಯಾಗಿದ್ದಳು. ಪತಿ ಸಾಹೇಬಗೌಡ ತೀರಿಕೊಂಡ ನಂತರ ನಾಗಮ್ಮಳ ಅಣ್ಣನು ಗರ್ಭಿಣಿಯಾಗಿದ್ದ ಇವಳನ್ನು ತವರು ಮನೆಗೆ ಕರೆದುಕೊಂಡು ಬಂದನು. ತವರುಮನೆಯಲ್ಲಿಯೇ ನಾಗಮ್ಮ ಹೆಣ್ಣು ಮಗಳಿಗೆ ಜನ್ಮನೀಡಿದಳು. ಅಲ್ಲಿಯವರೆಗೂ ನಾಗಮ್ಮಳ ಪತಿಯ ಮನೆಯವರಾರೂ ನಾಗಮ್ಮಳ ತವರು ಮನೆಯ ಕಡೆ ಸುಳಿಯಲಿಲ್ಲ. ನಾಗಮ್ಮಳ ಅಣ್ಣ ಶ್ರೀಮಂತನಿದ್ದರೂ ಜಿಪುಣ ಸ್ವಭಾವವುಳ್ಳವನಾಗಿದ್ದ. ತಂಗಿಯನ್ನು ಸಾಕುವ ಭಾರ ತನ್ನ ಮೇಲೆ ಬೀಳುತ್ತದೆ ಎಂದು ಯೋಚಿಸುತ್ತಲೇ ಜನಿಸಿದ ಮಗುವಿಗೆ ಮೂರು ತಿಂಗಳಾಗುತ್ತಲೇ ನಾಗಮ್ಮಳ ಪತಿಯ ಮನೆ ಸನ್ನತ್ತಿಗೆ ತಾಯಿ ಮಗಳನ್ನು ಕರೆದುಕೊಂಡು ಬಂದು ಬಿಟ್ಟುಹೋದ. ನಾಗಮ್ಮಳ ಮಗಳು ಕಾವೇರಿ ತನ್ನ ಚಿಕ್ಕಪ್ಪನ ಮಕ್ಕಳ ಜೊತೆ ಬೆಳೆದಳು. ಇವಳಿಗೆ ಮೂರನೆ ತರಗತಿಯವರೆಗೆ ಮಾತ್ರ ಶಾಲೆಗೆ ಕಳಿಸಲಾಗಿತ್ತು. ಕಾರಣ ಹೆಣ್ಣು ಮಗಳು ಓದಿ ಮಾಡುವುದೇನಿದೆ ಮನೆಯಲ್ಲಿಯೇ ಇರಲಿ ಎಂದು.

ನಾಗಮ್ಮಳ ಪತಿ ಸಾಹೇಬಗೌಡನಿಗೆ ಸೇರಿದ ಭೂಮಿಯನ್ನೆಲ್ಲಾ ಆತನ ತಮ್ಮ ಅಂಬಣ್ಣ ತನ್ನ ಹೆಸರಿಗೆ ಮಾಡಿಕೊಂಡಿದ್ದನು. ನಾಗಮ್ಮ ಮತ್ತು ಆಕೆಯ ಮಗಳು ಕಾವೇರಿ ಅಂಬಣ್ಣನ ಮನೆಯಲ್ಲಿ ಹಿಂಸೆಯನ್ನು ಅನುಭವಿಸಬೇಕಾಗಿ ಬಂತು. ನಾಗಮ್ಮಳಿಗೆ ತವರುಮನೆಯಲ್ಲಿಯೂ ಇರಲಾಗದೆ ಇತ್ತ ಗಂಡನ ಮನೆಯಲ್ಲಿಯೂ ಇರಲಾಗದ ಪರಿಸ್ಥಿತಿ ಉಂಟಾಯಿತು. ಊರಿನ ಜನರ ಕೋಪಕ್ಕೆ ಗುರಿಯಾಗದಂತೆ ನಾಗಮ್ಮ ಮತ್ತು ಕಾವೇರಿಯನ್ನು ತನ್ನ ಮನೆಯಲ್ಲಿ ಇಟ್ಟುಕೊಂಡಿದ್ದ ಅಂಬಣ್ಣ. ಕಾವೇರಿ ಮದುವೆಯ ವಯಸ್ಸಿಗೆ ಬಂದಾಗ ನಿರ್ಗತಿಕಳಾಗಿದ್ದ ನಾಗಮ್ಮ ತನ್ನ ಮೈದುನನಿಗೆ ''ನನ್ನ ಗಂಡನಿಗೆ ಬಂದಂಥ ಹೊಲ ನೀನೆ ನೋಡಕೊಂತಾ ಇದ್ದಿ ಅದಕ್ಕ ನನ್ನ ಮಗಳ ಮದಿ ಖರ್ಚ ನೀನೆ ನೋಡಕೋಬೇಕು ಎಂದು ಹೇಳಿದಳು.'' ಮೈದುನ ನಾಗಮ್ಮಳ ಮಾತಿಗೆ ಒಪ್ಪಲಿಲ್ಲ.ನಾಗಮ್ಮಳ ಪತಿ ಮತ್ತು ಮೈದುನನಿಗೆ ಸೇರಿ ಒಟ್ಟು ೬೦ ಎಕ್ರೆ ಜಮೀನು ಮತ್ತು ದೊಡ್ಡದೊಂದು ಮನೆ ಇದೆ. ಅದರಲ್ಲಿ ಅರ್ಧ ಪಾಲಾದರೆ ನಾಗಮ್ಮಳಿಗೆ ೩೦ ಎಕ್ರೆ ಜಮೀನು ಮತ್ತು ೧/೨ ಮನೆ ಬರಬೇಕಿತ್ತು. ಆದರೆ ಎಲ್ಲಾ ಮೈದುನನೆ ಅನುಭವಿಸುತ್ತಿದ್ದ. ಮಗಳಿಗೆ ಮದುವೆಮಾಡಲು ಹಣಕೊಡುವುದಿಲ್ಲ ಎಂದನು.

ನಾಗಮ್ಮ ತವರು ಮನೆಗೆ ಬಂದು ತನ್ನ ಅಣ್ಣನನ್ನು ಕರೆದುಕೊಂಡು ಸನ್ನತ್ತಿಗೆ ಬಂದು ಊರಿನಲ್ಲಿ ಪಂಚಾಯತಿಯನ್ನು ಸೇರಿಸಿದಳು. ''ತನ್ನ ಪತಿಯ ಪಾಲಿಗೆ ಬಂದ ಹೊಲವನ್ನು ಕೊಡಬೇಕು, ಅಥವಾ ಮಗಳು ಕಾವೇರಿಯ ಮದುವೆಯ ಖರ್ಚನ್ನಾದರೂ ಕೊಡಬೇಕು. ಒಂದು ವೇಳೆ ಗಂಡುಮಗು ಹುಟ್ಟಿದ್ದರೆ ಪಾಲು ಕೊಡದೇ ಇರುತ್ತಿದ್ದಿರಾ?'' ಎಂದು ಪಂಚಾಯತಿಯ ಮುಂದೆ ಪ್ರಶ್ನೆ ಹಾಕಿದಳು. ನಾಗಮ್ಮಳ ಪ್ರಶ್ನೆಗೆ ಉತ್ತರಿಸುತ್ತಾ ಅಂಬಣ್ಣ ''ನಿನ್ನ ಮಗಳು ಹೊಟ್ಟೆಯಲ್ಲಿ ಮೂಡುತ್ತಲೇ ತಂದೆಯನ್ನು ನುಂಗಿರುವಳು. ಅದಲ್ಲದೆ ಅವಳು ಹೆಣ್ಣುಮಗಳು

ಅದಕ್ಕ ಅವಳಿಗೆ ಭೂಮಿ ಕೊಡುವುದಿಲ್ಲ. ಆಕೆಯ ಮದುವೆಯ ಖರ್ಚನ್ನು ಕೊಡುತ್ತೇನೆ. ಅಣ್ಣನ ಹೆಂಡತಿಯಾಗಿರುವುದರಿಂದ ನಾಗಮ್ಮಳನ್ನು ಮನೆಯಲ್ಲಿ ಇಟ್ಟುಕೊಂಡು ಸಾಕುತ್ತೇನೆ. ಇವಳಿಗೆ ವರ್ಷಕ್ಕೆ ಎರಡು ಜೊತೆ ಬಟ್ಟೆ ಕೊಡಿಸುತ್ತೇನೆ'' ಎಂದು ಹೇಳಿದನು. ಇದಕ್ಕೆ ನಾಗಮ್ಮಳು ಒಪ್ಪಿಕೊಂಡಳು. ತನ್ನ ಸುಖಕ್ಕಿಂತ ಮಗಳ ಭವಿಷ್ಯ ಮುಖ್ಯ. ಅವಳ ಮದುವೆಯಾದರೆ ಸಾಕು ಎಂದು ಹೇಳಿದಳು. ನಂತರ ಕಾವೇರಿ ಮದುವೆಯೂ ನಡೆಯಿತು. ತವರು ಮನೆಯವರ ಸರಿಯಾದ ಬೆಂಬಲವಿಲ್ಲದಿದ್ದರೆ ತನ್ನ ಪತಿಯ ಆಸ್ತಿಗೆ ನಾಗಮ್ಮ ಹಕ್ಕುದಾರಳಾಗುತ್ತಿದ್ದಳು. ಆದರೆ ಯಾವ ಆಸ್ತಿಯೂ ಅವಳಿಗೆ ದಕ್ಕಲಿಲ್ಲ. ಪ್ರಸ್ತುತ ನಾಗಮ್ಮ ಪತಿಯ ಮನೆಯಲ್ಲಿಯೇ ಕೂಲಿ ಆಳಿಗಿಂತ ಹೀನಾಯ ಸ್ಥಿತಿಯಲ್ಲಿ ಬದುಕುತ್ತಿದ್ದಾಳೆ.

ಕ್ಷೇತ್ರ ಕಾರ್ಯದಲ್ಲಿ ಕಂಡುಕೊಂಡಂತೆ ಗುಲಬರ್ಗಾದ ಗ್ರಾಮೀಣ ಪ್ರದೇಶಗಳಲ್ಲಿ ಮದುವೆ ಮತ್ತು ಕೂಲಿಕೆಲಸ, ಅಡುಗೆ ಕೆಲಸ, ಮಕ್ಕಳನ್ನು ಹೆತ್ತು ಸಲಹುವುದು ಇವು ಮಾತ್ರ ಮಹಿಳೆಯರಿಗೆ ಮೀಸಲಾದ ಕೆಲಸಗಳು. ಇದರ ಮುಂದೆ ಯಾವುದೇ ಹಕ್ಕು, ಒಡೆತನ, ಅನುಭವ ಬೇಕಾಗಿಲ್ಲ ಎಂಬುದು ಸಮಾಜ ವ್ಯವಸ್ಥೆಯ ನಿರ್ಣಯಗಳು ಎಂದು ಹೇಳಬಹುದು. ಹಾಗಾಗಿ ''ಮಗಳ ಮದುವೆಯಾದ ನಂತರ ನಾನು ಹೇಗಿದ್ದರೂ ಪರವಾಗಿಲ್ಲ ನನ್ನ ಮಗಳು ಚೆನ್ನಾಗಿದ್ದರೆ ಸಾಕು'' ಎಂಬ ಉದಾರ ಮನೋಭಾವನೆ ಬಹುತೇಕ ಹೆಣ್ಣು ಮಕ್ಕಳಲ್ಲಿ ಮಡುಗಟ್ಟಿದೆ. ಈ ಪ್ರಕರಣದಲ್ಲಿ ನಾಗಮ್ಮಳದು ಒಂದು ರೀತಿಯ ಹತಾಶ ಮನೋಭಾವನೆ ಎಂದೂ ಹೇಳಬಹುದು.

ಪತ್ನಿ ಗರ್ಭಿಣಿಯಾಗಿದ್ದಾಗ ಪತಿಯ ಮರಣ ಆಕಸ್ಮಿಕ, ಕಾಕತಾಳೀಯವಾಗಿರುತ್ತದೆ ಅಥವಾ ಅನಾರೋಗ್ಯ, ಅಪಘಾತಗಳಾಗಿರುತ್ತವೆ. ಅದನ್ನೇ ಮುಂದಿಟ್ಟುಕೊಂಡು ಹೊಟ್ಟೆಯಲ್ಲಿನ ಮಗುವಿನ ಮೇಲೆ ಆಪಾದಿಸುವುದು ಎಷ್ಟು ಸರಿ? ಮಗಳನ್ನು ಅಮಂಗಲೆ ಎಂಬ ಪಟ್ಟ ಕಟ್ಟುವುದು ಸಮಂಜಸವೇ? ಸಮಾಜದ ವ್ಯವಸ್ಥೆಯಲ್ಲಿರುವ ಪೊಳ್ಳು ನಂಬಿಕೆಗಳು ಜನರಿಂದ ದೂರವಾಗಬೇಕಾಗಿದೆ. ನಾಗಮ್ಮಳಿಗೆ ಪತಿಯ ಮನೆಯಲ್ಲೇ ಇದ್ದು ಪತಿಯ ಆಸ್ತಿ ಇದ್ದು, ಶ್ರೀಮಂತಿಕೆ ಇದ್ದರೂ ಅವಳಿಗೆ ಅನುಭವಿಸುವ ಹಕ್ಕಿಲ್ಲದಂತಾಗಿದೆ. ಸರ್ಕಾರ ಮಹಿಳೆಯರಿಗೆ ಅನುಕೂಲವಾಗುವಂತಹ ಕಾಯ್ದೆ ಕಾನೂನುಗಳು ಜಾರಿಗೆ ತಂದರೂ ಅದರ ಬಗ್ಗೆ ಮಹಿಳೆಯರಿಗೆ ಅರಿವಿಲ್ಲದಾಗಿದೆ. ಬಹುತೇಕ ಗ್ರಾಮೀಣ ಪ್ರದೇಶದ ಮಹಿಳೆಯರು ಅದರ ಪ್ರಯೋಜನ ಪಡೆಯುವುದು ಅವಶ್ಯಕವಾಗಿದೆ.

**ಪ್ರಕರಣ - ಐದು**

ಭೀಮಸೇನ ಗುಲಬರ್ಗಾ ಜಿಲ್ಲೆಯ ಅಫಜಲಪೂರ ತಾಲೂಕಿನ ಜೇವರ್ಗಿ ಗ್ರಾಮದವನು. ಈತ ಊರಿನ ಸಾಹುಕಾರ. ಈತನು ಮದುವೆಯಾಗಿ ಮೂರು ಹೆಣ್ಣು ಮಕ್ಕಳನ್ನು ಪಡೆದಿದ್ದನು. ಮೂರು ಹೆಣ್ಣುಮಕ್ಕಳನ್ನು ಹೆತ್ತು ಪತ್ನಿಯು ತೀರಿಕೊಂಡಿದ್ದಳು. ಅನಕ್ಷರಸ್ಥನಾದ ಈತ ತನ್ನ ಮೂವರು ಹೆಣ್ಣು ಮಕ್ಕಳನ್ನೂ ಕೂಡ ಶಾಲೆಗೆ ಕಳಿಸಲಿಲ್ಲ. ಹಾಗಾಗಿ ಅವರು ಅನಕ್ಷರಸ್ಥರಾಗಿಯೇ ಉಳಿದರು. ಅಪಾರವಾದ ಆಸ್ತಿಯ ಮಾಲೀಕರಾದ ಭೀಮಸೇನನಿಗೆ ಗಂಡು ಮಕ್ಕಳಿಲ್ಲ ಎನ್ನುವ ಕೊರಗು ಇತ್ತು. ಈ ಕೊರಗನ್ನು ನೀಗಿಸಲು ಭೀಮಸೇನ ಇಟಾಬಾಯಿ ಎಂಬಾಕೆಯನ್ನು ಎರಡನೆ ಮದುವೆ ಮಾಡಿಕೊಂಡನು. ಈತನ ಮದುವೆಯ ಸಂದರ್ಭಕ್ಕಾಗಲೇ ಮೊದಲನೇ ಹೆಂಡತಿಯ ಇಬ್ಬರು ಹೆಣ್ಣು ಮಕ್ಕಳಿಗೆ ಮದುವೆ ಆಗಿತ್ತು. ಎರಡನೆ ಹೆಂಡತಿಯಿಂದ ಇಬ್ಬರು ಹೆಣ್ಣು ಮಕ್ಕಳನ್ನು ಮತ್ತು ಇಬ್ಬರು ಗಂಡು ಮಕ್ಕಳನ್ನು ಪಡೆದನು ಭೀಮಸೇನ. ಮೊದಲನೆ ಹೆಂಡತಿಯ ಕೊನೆಯ ಮಗಳಿಗೆ ಮದುವೆಯ ವಯಸ್ಸು ಆಗಿದ್ದರು ಇನ್ನೂ ಮದುವೆಯಾಗಿರಲಿಲ್ಲ. ಕಾರಣ ಅವಳು ನೋಡಲು ಸುಂದರಿಯಾಗಿದ್ದರೂ ಪೋಲಿಯೋಕ್ಕೊಳಗಾಗಿ ಕಾಲು ಕುಂಟುತ್ತಿದ್ದಳು. ಅವಳನ್ನು ಮದುವೆ ಮಾಡಿಕೊಳ್ಳಲು ಬಂದವರೆಲ್ಲಾ ಕಾಲು ಸರಿಯಾಗಿಲ್ಲ ಎಂದು

ಹಿಂತಿರುಗುತ್ತಿದ್ದರು. ಮಗಳಿಗೆ ಮದುವೆಯಾಗದಿರುವ ಸಮಸ್ಯೆಯನ್ನು ಕಂಡು ತಂದೆ ಭೀಮಸೇನ 'ತನ್ನ ಮಗಳನ್ನು ಮದುವೆ ಆಗುವವರಿಗೆ ತನ್ನ ನಾಲ್ಕು ಎಕರೆ ಭೂಮಿಯನ್ನು ವರದಕ್ಷಿಣೆಯ ರೂಪದಲ್ಲಿ ಕೊಡುತ್ತೇನೆ' ಎಂದು ಹೇಳಿದನು.

ಕೆಲ ದಿನಗಳ ನಂತರ ಮಹಾರಾಷ್ಟ್ರದ ದೊಂಡ ಗ್ರಾಮದವನೊಬ್ಬ ಇವಳನ್ನು ಮದುವೆಯಾದನು. ಸುವರ್ಣ (ಭೀಮಸೇನನ ಕೊನೆಯ ಮಗಳು)ಳ ಪತಿಯು ಮಹಾರಾಷ್ಟ್ರದಲ್ಲಿರುವುದರಿಂದ ವರದಕ್ಷಿಣೆ ರೂಪದಲ್ಲಿ ಬಂದ ಹೊಲವನ್ನು ಸುವರ್ಣಳ ತಂದೆ ಭೀಮಸೇನನೇ ನೋಡಿಕೊಳ್ಳುತ್ತಿದ್ದನು. ವರ್ಷದಲ್ಲಿ ಇಂತಿಷ್ಟು ಹಣವನ್ನು ಕೊಡುತ್ತಿದ್ದನು. ಕೆಲವು ವರ್ಷಗಳ ನಂತರ ಸುವರ್ಣಳ ಪತಿಯು ಮಾವನಲ್ಲಿಗೆ ಬಂದು ''ನನಗೆ ವರದಕ್ಷಿಣೆಯಾಗಿ ಬಂದಂಥ ಭೂಮಿಯನ್ನು ಮಾರಾಟ ಮಾಡಿ ಆ ಹಣದಿಂದ ತನ್ನ ಊರಿನಲ್ಲಿಯೇ (ಮಹಾರಾಷ್ಟ್ರ) ಒಂದು ಹೊಲವನ್ನು ಖರೀದಿ ಮಾಡುತ್ತೇನೆ. ಅದಕ್ಕೆ ಈ ಹೊಲವನ್ನು ಮಾರಾಟ ಮಾಡಿಸಿಕೊಡಿ. ನೀವಾದರೂ ತೆಗೆದುಕೊಳ್ಳಿ ಅಥವಾ ಊರಿನಲ್ಲಿ ಯಾರಿಗಾದರೂ ಮಾರಿ ಹಣ ಕೊಡಿ'' ಎಂದು ಮಾವನಿಗೆ ಹೇಳಿದನು. ಅಳಿಯನ ಮಾತಿಗೆ ಭೀಮಸೇನನು ಒಪ್ಪಲಿಲ್ಲ. ನಂತರ ಮಗಳು ಸುವರ್ಣ ಬಂದು ತನ್ನ ಅಪ್ಪನಲ್ಲಿ ವಿಚಾರಿಸಿದಾಗಲೂ ''ನನಗೆ ಇಬ್ಬರು ಗಂಡು ಮಕ್ಕಳಿದ್ದಾರೆ, ಇಷ್ಟು ದಿನಗಳವರೆಗೆ ಆ ಹೊಲದಲ್ಲಿ ಬೆಳೆದ ಬೆಳೆಯನ್ನು ಕೊಟ್ಟಿರುವೆನು. ಹಾಗಾಗಿ ಹೊಲವನ್ನು ಕೊಡುವುದಿಲ್ಲ'' ಎಂದು ಭೀಮಸೇನ ಹೇಳಿದನು. ಅದಕ್ಕೆ ಸುವರ್ಣ ''ನಿನಗೆ ಗಂಡ ಮಕ್ಕಳು ಇದ್ದರ ಇನ್ನ ೪೦ ಎಕರೆ ಭೂಮಿ ಅದ ಮತ್ತು ಒಂದು ಮನಿ ಅದ ನಿನ್ನ ಆಸ್ತಿಯಲ್ಲಿ ನಾನೇನು ಪಾಲ ಕೇಳ್ತಾ ಇಲ್ಲ. ನನ್ನ ಮದಿದಾಗ ವರದಕ್ಷಿಣೆ ಅಂತ ಭೂಮಿ ಕೊಟ್ಟಿದಿ ಅಲ್ಲ ಅದು ಮಾರಲಿಕ್ಕ ಯಾಕ ಅಡ್ಡಿ ಬರತ್ತಿದಿ. ಹಣ ತಗೊಂಡು ಗಂಡನ ಮನಿಗೆ ನಾ ಹೋಗಲಿಲ್ಲ ಅಂದರ ನನ್ನ ಗಂಡನ ಮನಿಯವರು ನನಗ ತ್ರಾಸ ಕೊಡತಾರ ಅದಕ್ಕ ಹೊಲ ತಗೊಂಡು ಹಣ ಕೊಡು ಇಲ್ಲ ಬ್ಯಾರೆಯವರಿಗೆ ಮಾರತಿನಿ'' ಎಂದು ಹೇಳಿದಳು. ಒಟ್ಟಿನಲ್ಲಿ ಭೀಮಸೇನ ಹೊಲವನ್ನು ಖರೀದಿಸಲು ಒಪ್ಪಲಿಲ್ಲ ಮತ್ತು ಬೇರೆಯವರಿಗೆ ಮಾರಲು ಬಿಡಲಿಲ್ಲ.

ಆಗ ಸುವರ್ಣ ತನ್ನ ಊರಿನ ಪ್ರಮುಖರನ್ನು ಸೇರಿಸಿ ''ಹೊಲವನ್ನು ವರದಕ್ಷಿಣೆ ರೂಪದಲ್ಲಿ ನನ್ನ ತಂದೆ ನನಗೆ ಕೊಟ್ಟಾರ. ಅದು ಈಗ ನಾನು ಮಾರಬೇಕು ಅಂತಾ ಇದ್ದಿನಿ ನನ್ನ ಅಪ್ಪ ಅದಕ್ಕ ಒಪ್ಪಿಕ್ಕೊಳ್ಳುತ್ತಾ ಇಲ್ಲ'' ಎಂದು ಪಂಚರ ಮುಂದೆ ಹೇಳಿದಳು. ಊರಿನ ಪ್ರಮುಖರು ಭೀಮಸೇನನಿಗೆ ತಿಳಿಹೇಳಿ ಹೊಲವನ್ನು ಮಾರಲು ಅವಕಾಶ ಮಾಡಿಕೊಟ್ಟರು. ಹಾಗೆಯೇ ಹೊಲವನ್ನು ತಾನೇ ಖರೀದಿಸಿ ಅದರ ಹಣವನ್ನು ಮಗಳು ಸುವರ್ಣಗಳಿಗೆ ಕೊಟ್ಟನು. ಸುವರ್ಣ ಮತ್ತು ಆಕೆಯ ಪತಿ ಆ ಹಣದಿಂದ ತನ್ನ ಊರಾದ ಮಹಾರಾಷ್ಟ್ರದ ದೊಂಡದಲ್ಲಿ ಹೊಲವನ್ನು ಖರೀದಿಸಿ ಜಂಟಿ ಒಡೆತನವನ್ನು ಹೊಂದಿದ್ದಾರೆ.

ಈ ಪ್ರಕರಣದಲ್ಲಿ ಆಸ್ತಿ ಹೆಣ್ಣು ಮಕ್ಕಳಿಗೆ ಸೇರುತ್ತದೆ ಎನ್ನುವ ಕಾರಣಕ್ಕೆ ಭೀಮಸೇನ ಮರುಮದುವೆಯಾಗಿ ಗಂಡು ಮಕ್ಕಳನ್ನು ಪಡೆದ. ಅಲ್ಲದೆ ಅವನಿಗೆ ಅಪಾರವಾದ ಆಸ್ತಿ ಇದ್ದರು ವರದಕ್ಷಿಣೆಯಾಗಿ ಕೊಟ್ಟಿದ್ದ ಭೂಮಿಯ ಮೇಲೂ ಕಣ್ಣಿಟ್ಟಿದ್ದನು. ಸುವರ್ಣ ಪಂಚಾಯತಿಯ ಮೂಲಕ ವರದಕ್ಷಿಣೆಯಾಗಿ ಕೊಟ್ಟಿರುವ ಭೂಮಿಯನ್ನು ಪಡೆದು ತಂದೆಗೆ ಮಾರಿ ಹಣವನ್ನು ಪಡೆದು ತನ್ನ ಊರಲ್ಲೆ ಭೂಮಿಯನ್ನು ಖರೀದಿಸಿರುವಳು. ಸುವರ್ಣ ಅಂಗವಿಕಲೆಯಾಗಿರುವುದರಿಂದ ಆಸ್ತಿಯ ಆಸೆ ತೋರಿಸಿ ಭೀಮಸೇನ ಅವಳಿಗೆ ಮದುವೆ ಮಾಡಿದ ನಂತರ ಆಸ್ತಿಯನ್ನು ಕೊಡಲು ನಿರಾಕರಿಸಿದ. ಪಂಚಾಯತಿಯ ಮೂಲಕ ಸುವರ್ಣ ತನ್ನ ಸಮಸ್ಯೆಯನ್ನು ಬಗೆಹರಿಸಿಕೊಂಡಿರುವಳು.

## ಪ್ರಕರಣ - ಆರು

ಅಂಜನಾ ಮತ್ತು ಮಹಾಂತೇಶ ಗುಲಬರ್ಗಾ ತಾಲೂಕಿನ ಕಮಲಾಪುರ ಗ್ರಾಮದಲ್ಲಿ ವಾಸಿಸುತ್ತಿದ್ದರು. ಅಂಜನಾಳ ತವರುಮನೆ ಚಿಂಚೋಳಿ ತಾಲೂಕಿನ ರಟಗಲ ಗ್ರಾಮ. ಈ ದಂಪತಿಗಳಿಗೆ ೧೦ ವರ್ಷದ ಮಗಳು ಇದ್ದಾಳೆ. ಅಂಜಿನಾಳಿಗೆ ಗಂಡು ಮಕ್ಕಳಾಗದ ಕಾರಣ ಮಹಾಂತೇಶ ತಂದೆ-ತಾಯಿಯ ಒತ್ತಾಯದ ಮೇರೆಗೆ ಎರಡನೆ ಮದುವೆ ಮಾಡಿಕೊಂಡನು. ಈತನು ೧೧ನೇ ತರಗತಿಯವರೆಗೆ ಓದಿದ್ದರೂ ೨೫ ಎಕರೆ ಜಮೀನು ಮತ್ತು ೨ ಮನೆ ಇರುವುದರಿಂದ ಅದನ್ನೆ ನೋಡಿಕೊಳ್ಳುತ್ತಿದ್ದ. ಈತನ ಇಬ್ಬರು ಹೆಂಡಂದಿರು ಅನಕ್ಷರಸ್ಥರಾಗಿರುವುದರಿಂದ ಗೃಹಿಣಿಯರಾಗಿದ್ದರು. ಆಸ್ತಿಯ ವಾರಸುದಾರರು ಬೇಕೆಂದು ಎರಡನೆ ಮದುವೆ ಆದನು. ಹಾಗಾಗಿ ಇಬ್ಬರೂ ಹೆಂಡತಿಯರ ಜೊತೆ ಇದ್ದನು. ಆದರೆ ಇಬ್ಬರೂ ಹೆಂಡತಿಯರು ದಿನಂಪ್ರತಿ ಜಗಳವಾಡುತ್ತಿದ್ದರಿಂದ ಮಹಾಂತೇಶ ಮೊದಲನೆ ಹೆಂಡತಿಯನ್ನು (ಅಂಜನಾ) ಮನೆಯಿಂದ ಹೊರ ಹಾಕಿದ. ಅಂಜನಾ ತನ್ನ ಮಗಳ ಜೊತೆ ತನ್ನ ತವರು ಮನೆಯಲ್ಲಿ ಉಳಿದಿದ್ದಳು. ನಂತರ ನಾಲ್ಕು ವರ್ಷಗಳಾದರೂ ಮಹಾಂತೇಶ ಅಂಜನಾಳನ್ನಾಗಲೀ, ತನ್ನ ಮಗಳನ್ನಾಗಲೀ ವಿಚಾರಿಸಲು ಬರಲಿಲ್ಲ. ಅಂಜನಾಳ ತವರು ಮನೆ ಪರಿಸ್ಥಿತಿ ಗಂಭೀರವಾಗಿರುವುದರಿಂದ ತಂಗಿಯ ಗಂಡ ಅವಳನ್ನು ಕರೆದುಕೊಂಡು ಹೋಗದೆ ಇರುವುದನ್ನು ಕಂಡು ಅಂಜನಾಳ ಅಣ್ಣ-ತಮ್ಮಂದಿರು ಒಂದೆರಡು ಸಲ ಅವಳನ್ನು ಪತಿಯ ಮನೆಗೆ ತಂದು ಬಿಟ್ಟರು. ಆದರೂ ಮಹಾಂತೇಶ ಈಕೆಯನ್ನು ಮನೆಯಿಂದ ಹೊರಗಟ್ಟಿದ. ಇದನ್ನು ಕಂಡು ಅಂಜನಾಳ ಅಣ್ಣ-ತಮ್ಮಂದಿರು ಪತಿ ಮಹಾಂತೇಶನಿಂದ ಆಸ್ತಿ ಅಥವಾ ಜೀವನಾಂಶವನ್ನು ಕೇಳು ಎಂಬುದಾಗಿ ಒತ್ತಾಯಿಸಿದರು. ಹಾಗಾಗಿ ಅಂಜನಾ ಪತಿಯಲ್ಲಿಗೆ ಬಂದು ''ನನ್ನನ್ನು ನಿನ್ನ ಮನೆಯಲ್ಲಿ ಇಟ್ಟಕೋ ಇಲ್ಲ ಅಂದರ ನನಗ ಮತ್ತ ನನ್ನ ಮಗಳ ಜೀವನಕ್ಕ ಆಸ್ತಿ ಅಥವಾ ಜೀವನಾಂಶವನ್ನಾದರು ಕೊಡಿ'' ಎಂದು ಕೇಳಿದಳು. ಆದರೆ ಮಹಾಂತೇಶ ''ಆಸ್ತಿ ಅಥವಾ ಜೀವನಾಂಶ ಯಾವುದು ಕೊಡದಿಲ್ಲ ನಿನಗ ನನ್ನ ಜೊತೆ ಇಟ್ಟುಕೊಳ್ಳಲು ಆಗೋಲ್ಲ, ಗಂಡ ಮಗನಿಗೆ ಹಡದಿದ್ದರ ನಾ ಮತ್ತೊಂದು ಮದಿ ಆಗತ್ತಿದಿಲ್ಲ. ಇದಕ್ಕೆಲ್ಲ ನೀನೆ ಕಾರಣ ನನಗೆನು ನೀ ಸಂಬಂಧನೆ ಇಲ್ಲ'' ಎಂದು ಹೇಳಿದ. ಅದಕ್ಕೆ ಅಂಜನಾ ''ನೀನು ಆಸ್ತಿ ಕೊಡದಿಲ್ಲ ಅಂದರ ನಾನು ನ್ಯಾಯಾಲಯಕ್ಕೆ ಹೋಗತ್ತಿನಿ ಎಂದು ಹೇಳಿ'' ತವರು ಮನೆಗೆ ಬಂದಳು.

ಅಸಹಾಯಕಳಾದ ಅಂಜನಾಳಿಗೆ ಕೋರ್ಟು ಕಛೇರಿ ಅಂತ ಅಲೆಯಬೇಕಾದರೆ ಹಣದ ಅವಶ್ಯಕತೆ ಇತ್ತು. ತವರಿನವರು ತುಂಬಾ ಬಡವರಾದ ಕಾರಣ ಕೋರ್ಟಿಗೆ ಹೋಗಿ ದಾವೆ ಹಾಕುವುದು ಅವಳಿಗೆ ಸಾಧ್ಯವಿರಲಿಲ್ಲ. ಅದಕ್ಕೆ ಅಂಜನಾ ಅಣ್ಣ-ತಮ್ಮಂದಿರ ಸಹಾಯದಿಂದ ಊರಿನ ಪಂಚಾಯತಿಯನ್ನು ಸೇರಿಸಿದಳು. ಪಂಚಾಯತಿಯ ಪ್ರಮುಖರು ಅಂಜನಾಳ ಮಾತನ್ನು ಪುರಸ್ಕರಿಸಿದರು. ಪಂಚರು ಮಹಾಂತೇಶನಿಗೆ ಆಸ್ತಿಯಲ್ಲಿ ಅರ್ಧಪಾಲನ್ನು ಕೊಡು ಅಥವಾ ಜೀವನಾಂಶವನ್ನಾದರೂ ಕೊಡಬೇಕು ಎಂದು ಹೇಳಿದರು. ಭೂಮಿಯನ್ನು ಕೊಡಲು ಒಪ್ಪದ ಮಹಾಂತೇಶ ಮಗಳ ಹೆಸರಿನಲ್ಲಿ ಬ್ಯಾಂಕಿನಲ್ಲಿ ಒಂದು ಲಕ್ಷ ರೂಪಾಯಿಗಳನ್ನು ಇಡುವುದಾಗಿ ಹೇಳಿದ. ಅದರಲ್ಲೂ ಈ ಹಣ ಆಕೆಯ ಮದುವೆಯ ಸಂದರ್ಭದಲ್ಲಿ ಅನುಕೂಲವಾಗಲಿ ಎಂದು ಹೇಳಿದ. ಹಾಗೆಯೇ ಮಗಳ ವಿದ್ಯಾಭ್ಯಾಸಕ್ಕಾಗಿ ಮತ್ತು ಅಂಜನಾಳ ಜೀವನಕ್ಕಾಗಿ ಪ್ರತಿ ತಿಂಗಳು ೫೦೦ ರೂಗಳನ್ನು ಕೊಡುತ್ತೇನೆ ಎಂದು ಒಪ್ಪಿಕೊಂಡ. ಅಂಜನಾ ಕೂಡ ಆತನ ಮಾತಿಗೆ ಒಪ್ಪಿಗೆ ನೀಡಿದಳು. ನನಗೆ ಗಂಡು ಮಕ್ಕಳು ಇಲ್ಲದ ಕಾರಣ ಭೂಮಿ ಪಡೆದು ವ್ಯವಸಾಯ ಮಾಡಲು ಕಷ್ಟವಾಗುತ್ತದೆ. ಹಾಗಾಗಿ ಹಣದ ರೂಪದಲ್ಲಿಯೇ ಕೊಟ್ಟರೆ ಒಳ್ಳೆಯದು ಎಂದು ಅಭಿಪ್ರಾಯ ವ್ಯಕ್ತಪಡಿಸಿದಳು.

ಪ್ರಸ್ತುತ ಪ್ರಕರಣದಲ್ಲಿ ಮಹಾಂತೇಶ ಪಂಚಾಯತಿಯಲ್ಲಿ ಪಂಚರ ಒತ್ತಡಕ್ಕೆ ಮಣಿದು ಅಲ್ಪ ಸ್ವಲ್ಪ ದುಡ್ಡು ಕೊಟ್ಟಿರುವನು. ಈ ಪ್ರಕರಣದಲ್ಲಿ ಮಹಾಂತೇಶ ಮೊದಲನೇ ಹೆಂಡತಿ ಇದ್ದಾಗಲೂ ಎರಡನೆ ಮದುವೆ ಮಾಡಿಕೊಳ್ಳುತ್ತಾನೆ. ಮೊದಲ ಹೆಂಡತಿ-ಮಗಳನ್ನು ಮನೆಯಿಂದ ಹೊರಹಾಕಿ ನೆಮ್ಮದಿಯ ಜೀವನ ಮಾಡುತ್ತಾನೆ. ಪಂಚಾಯತಿಯ ಮೂಲಕ ಅಂಜನಾ ಜೀವನಾಂಶವಾಗಿ ತಿಂಗಳಿಗೆ ಕೇವಲ ೫೦೦.೦೦ರೂ ಪಡೆಯುತ್ತಿದ್ದಾಳೆ. ಆದರೆ ಆಸ್ತಿಪಾಲು ಕೊಡಲು ಮಹಾಂತೇಶ ನಿರಾಕರಿಸಿರುವುದನ್ನು ಕಾಣಬಹುದು. ಮಗಳ ಮದುವೆಗೆ ೧ ಲಕ್ಷ ರೂ ಕೊಡುವುದಾಗಿ ಮಾತು ಕೊಡುತ್ತಾನೆ.

ಸಕಾರಣವಿಲ್ಲದೆ ಮನಸ್ಸಿಗೆ ಬಂದಂತೆ ಎರಡನೆ ಮದುವೆಯಾಗುವುದು ಅಪರಾಧವಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದರ ಬಗ್ಗೆ ಸಮಾಜ ಯಾಕೆ ಪ್ರಶ್ನಿಸುವುದಿಲ್ಲ? ಈ ನಿಟ್ಟಿನಲ್ಲಿ ಕಾನೂನು ಕ್ರಮ ಜರುಗಿಸುವಂತಹ ಕಟ್ಟುನಿಟ್ಟಿನ ಕಾನೂನುಗಳು ಬೇಕಾಗಿವೆ.

**ಪ್ರಕರಣ - ಏಳು**

ಬಸವಂತರಾಯ-ಬಸಮ್ಮ ದಂಪತಿಗಳು ಗುಲಬರ್ಗಾ ತಾಲೂಕಿನ ನಾಗೂರ ಗ್ರಾಮದವರು. ಬಸವಂತರಾಯ ಊರಿನ ಗೌಡರಾಗಿದ್ದರು. ೨೦ ಎಕರೆ ಜಮೀನನ್ನು ಹೊಂದಿದ್ದು, ಇದರಲ್ಲಿ ಎಂಟು ಎಕರೆ ನೀರಾವರಿ ಭೂಮಿ ಇದ್ದರೆ ಇತರೆ ೧೨ ಎಕರೆ ಒಣ ಭೂಮಿಯಿದೆ. ಒಣ ಭೂಮಿಯಲ್ಲಿಯು ಚೆನ್ನಾಗಿ ಬೆಳೆ ಬೆಳೆಯುತ್ತಾರೆ. ಮತ್ತು ಎರಡು ವಾಸದ ಮನೆಗಳಿವೆ. ಬಸಮ್ಮ ಊರಿನ ಗೌಡರ ಪತ್ನಿಯಾಗಿರುವುದರಿಂದ ಮನೆವಾರ್ತೆಯನ್ನೇ ನಿಭಾಯಿಸುತ್ತಿದ್ದಳು. ಬಸಮ್ಮನ ತವರುಮನೆ ಗುಲಬರ್ಗಾ. ಈ ದಂಪತಿಗೆ ಒಬ್ಬ ಹೆಣ್ಣುಮಗಳು ಮತ್ತು ಇಬ್ಬರು ಗಂಡು ಮಕ್ಕಳು ಇರುವರು. ಮಗಳಿಗೆ ಮತ್ತು ದೊಡ್ಡ ಮಗನಿಗೆ ಮದುವೆ ಮಾಡಿದ್ದರು. ಮದುವೆಯಾದ ದೊಡ್ಡಮಗ ಮಹಾದೇವಪ್ಪನಿಗೆ ಮೂವರು ಮಕ್ಕಳಿದ್ದಾರೆ. ಒಬ್ಬಳು ಹೆಣ್ಣು ಮಗಳು ಮತ್ತು ಇಬ್ಬರು ಗಂಡು ಮಕ್ಕಳು. ಮಹಾದೇವಪ್ಪನ ಪತ್ನಿಯು ಶಿಕ್ಷಣವನ್ನು ಪಡೆದಿರಲಿಲ್ಲ. ಮನೆಯ ಕೆಲಸವನ್ನು ಮಾಡಿಕೊಂಡು ಸುಖವಾಗಿದ್ದರು. ಇವರಿಗೆ ಮಕ್ಕಳಾದ ಕೆಲವೆ ವರ್ಷಗಳಲ್ಲಿ ಮಹಾದೇವಪ್ಪ ಊರಿನ ಚೇರ್‌ಮನ್ ಆದ. ಚೇರ್‌ಮನ್ ಆದಾಗಿನಿಂದ ಮಹಾದೇವಪ್ಪ ಕುಡಿತವನ್ನು ಪ್ರಾರಂಭಿಸಿದ. ಹೊಲ-ಮನೆ, ಹೆಂಡತಿ-ಮಕ್ಕಳ ಬಗ್ಗೆ ಯೋಚಿಸದೆ ಸದಾ ಕುಡಿದುಕೊಂಡೆ ಇರುತ್ತಿದ್ದ. ಮಹಾದೇವಪ್ಪನ ಪತ್ನಿ ದಿನಾಲು ಪತಿಯ ಜೊತೆ ಕುಡಿತ ನಿಲ್ಲಿಸು ಎಂದು ಜಗಳವಾಡುತ್ತಿದ್ದಳು. ಅವಳ ಮಾತು ಕೇಳದೇ ಹೋದ ಮಹಾದೇವಪ್ಪ ಕೊನೆಗೆ ಇದನ್ನೆಲ್ಲಾ ಸಹಿಸದ ಆತನ ಪತ್ನಿ ಜೀವನದಲ್ಲಿ ಜಿಗುಪ್ಸೆಗೊಂಡು ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡಳು. ಸೊಸೆಯ ಮೇಲೆ ಪ್ರಾಣವೇ ಇಟ್ಟಿದ್ದ ಮಾವ ಬಸವಂತರಾಯ ಸೊಸೆಯ ಸಾವಿನ ನಂತರ ಹಾಸಿಗೆ ಹಿಡಿದರು. ಅವರ ಇಪ್ಪತ್ತು ಎಕರೆ ಜಮೀನನ್ನು ಮತ್ತು ಎರಡು ಮನೆಗಳನ್ನು ತನ್ನ ಇಬ್ಬರು ಗಂಡು ಮಕ್ಕಳಿಗೆ ಹಂಚಿ ೧೯೯೮ರಲ್ಲಿ ತೀರಿಕೊಂಡರು.

ಚಿಕ್ಕವಯಸ್ಸಿನಲ್ಲಿಯೇ ಪತ್ನಿಯನ್ನು ಕಳೆದುಕೊಂಡು ಮಕ್ಕಳನ್ನು ನೋಡಿಕೊಳ್ಳಲು ಕಷ್ಟಪಡುತ್ತಿರುವ ಮಹಾದೇವಪ್ಪನನ್ನು ಕಂಡು ಆತನ ಬಂಧುಗಳು ಆತನಿಗೆ ಮತ್ತೊಂದು ಮದುವೆ ಮಾಡಿದರು. ಮಹಾದೇವಪ್ಪನ ಎರಡನೆ ಹೆಂಡತಿ ಮಕ್ಕಳ ಜೊತೆ ಸರಿಯಾಗಿ ಹೊಂದಿಕೊಳ್ಳದೇ ತನ್ನ ಪತಿ ಮಹಾದೇವಪ್ಪನನ್ನು ಕರೆದುಕೊಂಡು ಗುಲಬರ್ಗಾಕ್ಕೆ ಬಂದಳು. ಮಹಾದೇವಪ್ಪ ಗುಲಬರ್ಗಾದಲ್ಲಿ ಮೆಡಿಕಲ್ ಕಾಲೇಜ್ ಲೇಡಿಸ್ ಹಾಸ್ಟೆಲ್‌ನ ಗೇಟ್ ಕಾಯುವ (ಸೆಕ್ಯೂರಿಟಿ ಗಾರ್ಡ್) ಕೆಲಸಕ್ಕೆ ಸೇರಿಕೊಂಡನು. ಮಹಾದೇವಪ್ಪ ತನ್ನ ಮೂವರು ಮಕ್ಕಳು, ವೃದ್ಧತಾಯಿ

ಮತ್ತು ತಮ್ಮನ ಕಡೆ ಗಮನ ಹರಿಸಲೇಇಲ್ಲ. ಹಾಗೆಯೇ ಹೊಲದಿಂದ ಬಂದ ಫಸಲನ್ನು ತಾನೇ ಪಡೆದುಕೊಂಡ. ತಾಯಿ ಬಸಮ್ಮಳಿಗೆ ಜೀವನ ಮಾಡಲು ದುಸ್ತರವಾದಾಗ ಮಗ ಮಹಾದೇವಪ್ಪನ ಮೂವರು ಚಿಕ್ಕ ಮಕ್ಕಳ ಜೊತೆ ತನ್ನ ತವರುಮನೆ ಗುಲಬರ್ಗಾಕ್ಕೆ ಬಂದು ಉಳಿದಳು. ಆಕೆಯ ಒಬ್ಬ ತಮ್ಮ ಅಕ್ಕ (ಬಸಮ್ಮ)ನನ್ನು ನೋಡಿಕೊಂಡರೆ ಇನ್ನೋರ್ವ ತಮ್ಮ ಆಕೆಯ ಮೊಮ್ಮಕ್ಕಳನ್ನು ನೋಡಿಕೊಂಡರು. ಮಹಾದೇವಪ್ಪನ ತಮ್ಮ ಅಣ್ಣಾರಾವನಿಗೆ ಮದುವೆಯಾಗಿರಲಿಲ್ಲ. ಆತನು ಸೋದರಮಾವನ ಮನೆ ಹಾಗೂ ಊರು ಹೀಗೆ ಸ್ವಲ್ಪದಿನ ಅಲ್ಲಿ ಇಲ್ಲಿ ಅಡ್ಡಾಡಿಕೊಂಡಿದ್ದ. ಅಣ್ಣಾರಾವನಿಗೆ ಕಾಮಾಲೆ ರೋಗ ಬಂದು ಸರಿಯಾಗಿ ಚಿಕಿತ್ಸೆ ಮಾಡದೇ ೨೦೦೬ರಲ್ಲಿ ತೀರಿಕೊಂಡನು.

ಮಹಾದೇವಪ್ಪ ತಮ್ಮನ ಸಾವಿನ ನಂತರ ಆತನ ಜಮೀನನ್ನು ಕೂಡ ತನ್ನದಾಗಿಸಿಕೊಳ್ಳಲು ಪ್ರಯತ್ನಿಸಿದ. ಆಗ ತಾಯಿ ಬಸಮ್ಮ ''ನಿನ್ನ ಇಬ್ಬರು ಗಂಡು ಮಕ್ಕಳ ಹೆಸರಿಗೆ ಹೊಲ ಮಾಡಿಕೊಡು, ಮಗಳಿಗೂ ಮದುವೆ ಮಾಡು, ನನಗೆ ವಯಸ್ಸಾಗಿರುವುದರಿಂದ ನಿನ್ನ ಮನೆಗೆ ನನ್ನನ್ನು ಕರೆದುಕೊಂಡು ಹೋಗು'' ಎಂದು ಮಗ ಮಹಾದೇವಪ್ಪನಲ್ಲಿ ಹೇಳಿದಳು. ತಾಯಿಯ ಯಾವುದೇ ಮಾತಿಗೂ ಮಗ ಮಹಾದೇವಪ್ಪ ಒಪ್ಪಿಗೆ ನೀಡಲಿಲ್ಲ. ಅದಕ್ಕೆ ಬಸಮ್ಮ ''ಕೋರ್ಟಿಗೆ ಹೋದರೆ ನನ್ನ ಮನೆಯ ಮಾನ ಮರ್ಯಾದೆ ಹರಾಜಾಗುತ್ತದ. ಮಗನ ವಿರುದ್ಧನೇ ದಾವೆ ಹೂಡಿದಂಗ ಆಗತ್ತಾದ. ತಾಯಿಯಾದವಳು ಎಂದಿಗೂ ತನ್ನ ಮಗನ ವಿರುದ್ಧ ನಿಲ್ಲುದಿಲ್ಲ'' ಎಂಬ ಮನಸ್ಥಿತಿಯಿಂದ ಬಸಮ್ಮ ಯೋಚಿಸಿ ನಂತರ ತನ್ನ ಬಂಧುಗಳಲ್ಲಿಯೇ ಪಂಚಾಯತಿ ಸೇರಿಸಿದಳು. ಭೂಮಿಯ ದಾಖಲೆ ಪತ್ರಗಳೆಲ್ಲಾ ಮಹಾದೇವಪ್ಪನ ಹತ್ತಿರವೇ ಇದ್ದು, ಆತ ತನ್ನ ತಾಯಿ, ಮಕ್ಕಳಿಗೆ ಭೂಮಿ ಕೊಡಲು ನಿರಾಕರಿಸಿದ. ನಾಲ್ಕು ಜನರ ಹೆಸರಿನಲ್ಲಿ ತಲಾ ಒಂದೊಂದು ಲಕ್ಷ ರೂ ಗಳನ್ನು ಬ್ಯಾಂಕಿನಲ್ಲಿ ಇಡು ಎಂಬ ಪಂಚರ ಮಾತನ್ನೂ ಧಿಕ್ಕರಿಸಿದ. ಕೊನೆಗೆ ನಿನ್ನ ತಮ್ಮನ ಹೊಲವನ್ನೆಲ್ಲಾ ನಿನ್ನ ತಾಯಿಯ ಹೆಸರಿಗೆ ಮಾಡು ನಿನ್ನ ಮೂವರು ಮಕ್ಕಳ ಜವಾಬ್ದಾರಿಯನ್ನು ಅವಳೇ (ಬಸಮ್ಮ) ತೆಗೆದುಕೊಳ್ಳುತ್ತಾಳೆ ಎಂದು ಹೇಳಿದಾಗ ಪಂಚರ ಈ ಮಾತಿಗೆ ಮಹಾದೇವಪ್ಪ ಒಪ್ಪಿಕೊಂಡು ತಮ್ಮನ ಹೆಸರಿನಲ್ಲಿದ್ದ ಹತ್ತು ಎಕರೆ ಜಮೀನನ್ನು ತಾಯಿಯ ಹೆಸರಿಗೆ ಮಾಡಿದ.

ಬಸಮ್ಮ ಗುಲಬರ್ಗಾದಲ್ಲಿ ಬಾಡಿಗೆ ಮನೆಯನ್ನು ಹಿಡಿದು ತನ್ನ ಪಾಲಿಗೆ ಬಂದ ಹೊಲವನ್ನು ಗುತ್ತಿಗೆಗೆ ಕೊಟ್ಟು ಬಂದ ಹಣದಲ್ಲಿ ಜೀವನ ಸಾಗಿಸುತ್ತಿದ್ದಾಳೆ. ತನ್ನ ಮರಣದ ನಂತರ ಹೊಲವನ್ನು ಇಬ್ಬರು ಗಂಡು ಮೊಮ್ಮಕ್ಕಳಿಗೆ ಹಂಚುವುದಾಗಿ ಮತ್ತು ಮೊಮ್ಮಗಳಿಗೆ ವರದಕ್ಷಿಣೆ ಕೊಟ್ಟು ಮದುವೆ ಮಾಡುವುದಾಗಿ ಹೇಳುತ್ತಾಳೆ. ಪ್ರಸ್ತುತ ಮೊಮ್ಮಕ್ಕಳ ಜೊತೆ ಗುಲ್ಬರ್ಗಾದಲ್ಲಿ ವಾಸವಾಗಿದ್ದಾಳೆ.

ಪತ್ನಿಯನ್ನು ಕಿರುಕುಳ ನೀಡಿ ಆಕೆಗೆ ಆತ್ಮಹತ್ಯೆ ಮಾಡಿಸುವಲ್ಲಿ ಸಫಲರಾದ ಪುರುಷರಿಗೆ ಕೊರತೆಯೇನೂ ಇಲ್ಲ. ಈ ಪ್ರಕರಣದಲ್ಲಿ ಮಹಾದೇವಪ್ಪ ತನ್ನ ಹೆಂಡತಿ ಜೊತೆ ಜಗಳವಾಡಿ ಆಕೆಯ ಸಾವಿಗೆ ಕಾರಣಕರ್ತನಾಗಿದ್ದಾನೆ. ಆದರೆ ಯಾವುದೇ ಕಾನೂನಿನಾತ್ಮಕ ಶಿಕ್ಷೆಯನ್ನು ಪಡೆಯದೇ ಸುಲಭವಾಗಿ ಎರಡನೆ ಮದುವೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಮೊದಲ ಹೆಂಡತಿಯಿಂದ ಪಡೆದ ಮಕ್ಕಳನ್ನು ನೋಡಿಕೊಳ್ಳದೇ ಅಮಾನವೀಯತೆ ಮೆರೆಯುತ್ತಾನೆ. ಆತ್ಮಹತ್ಯೆ ಮಾಡಿಕೊಂಡ ಆತನ ಪತ್ನಿಯ ತವರು ಮನೆಯವರು ಎಚ್ಚೆತ್ತುಕೊಳ್ಳಲೇ ಇಲ್ಲ. ಹಾಗಾದರೆ ಸ್ತ್ರೀಯರ ಜೀವಕ್ಕೆ ಬೆಲೆ ಇಲ್ಲವೆ? ಅದರ ಬಗ್ಗೆ ಪ್ರಶ್ನಿಸುವ ಹಕ್ಕು ಯಾರಿಗಿಲ್ಲದೇ ಹೋಯಿತೇ ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಒಟ್ಟಾರೆಯಾಗಿ ಈ ಮೊದಲು ಗಮನಿಸಿದ ನ್ಯಾಯಾಲಯಕ್ಕೆ ಸಂಬಂಧಿಸಿದ ಪ್ರಕರಣವಾಗಿರಬಹುದು ಅಥವಾ ಪಂಚಾಯತಿಗೆ ಸಂಬಂಧಿಸಿದ ಪ್ರಕರಣಗಳಾಗಿರಬಹುದು, ಮಹಿಳೆಯರು ಪುರುಷರ ಸಹಾಯದಿಂದಲೇ ನ್ಯಾಯ ಪಡೆದಿರುವುದನ್ನು ಕಾಣುತ್ತೇವೆ. ಹೆಚ್ಚಿನ ಸಂಖ್ಯೆಯ ಹೆಣ್ಣು ಮಕ್ಕಳು ಊರಿನ ನ್ಯಾಯ ಪಂಚಾಯತಿಯನ್ನೇ ಅವಲಂಬಿಸಿರುವುದು ಕಂಡುಬರುತ್ತದೆ. ಕೆಲವೇ ಕೆಲವು ಧೈರ್ಯವಂತ ಮಹಿಳೆಯರು ನ್ಯಾಯಾಲಯದ ಮೆಟ್ಟಿಲೇರಿ ನ್ಯಾಯವನ್ನು ಪಡೆದಿದ್ದಾರೆ.

ಪ್ರಸಕ್ತ ಕಾಲವೂ ಕೂಡ ಧನಿಕರ ಪರವಾಗಿರುವುದನ್ನು ಅನೇಕ ಪ್ರಕರಣಗಳಿಂದ, ಪ್ರತಿದಿನ ಮಾಧ್ಯಮಗಳಿಂದ ತಿಳಿದುಕೊಳ್ಳುತ್ತಿದ್ದೇವೆ. ಹಳ್ಳಿಗಳ ಮಹಿಳೆಯರಿಗೆ ನ್ಯಾಯಾಲಯದ ಮೊರೆ ಹೋಗಲು ಸಾಕಷ್ಟು ಹಣದ ಅವಶ್ಯಕತೆಯಿದೆ. ಕೂಲಿ ಕೆಲಸ ಮಾಡುವ ಅಥವಾ ಹತ್ತು ಇಪ್ಪತ್ತು ಎಕರೆ ಜಮೀನು ಹೊಂದಿರುವ (ಒಣ ಪ್ರದೇಶ, ಮಳೆಯಾಶ್ರಿತ ವ್ಯವಸಾಯ) ರೈತ ಮಹಿಳೆಯರಿಗೆ ಇಂದು ನ್ಯಾಯಾಲಯದ ನ್ಯಾಯ ಗಗನಕುಸುಮವಾಗಿರುವುದು ಕಟುಸತ್ಯ. ಜೊತೆಗೆ ಬಹುಸಂಖ್ಯಾತ ಹಳ್ಳಿಗಾಡಿನ ಮಹಿಳೆಯರಿಗೆ ಹಾಗೂ ಅಲ್ಪಸಂಖ್ಯಾತ ನಗರ ಪ್ರದೇಶದ ಹೆಣ್ಣು ಮಕ್ಕಳಿಗೆ ಮರ್ಯಾದೆಯ ಪ್ರಶ್ನೆ ಎದುರಾಗುವುದರಿಂದ ನ್ಯಾಯಾಲಯ, ಪಂಚಾಯತಿಗಳಿಂದ ದೂರವೇ ಉಳಿದು ನರಕ ಸದೃಶ ಜೀವನದಿಂದ ಬಳಲುತ್ತಿದ್ದಾರೆ. ಕಾನೂನಿನ ಮೂಲಕ 'ನಮ್ಮ ಹಕ್ಕನ್ನು ಪಡೆಯುವುದು' ಎಂಬ ಮನೋಭಾವನೆಯನ್ನು ಬಿಟ್ಟು 'ನಮ್ಮ ಹಣೆ ಬರಹ' ಎಂದು ತಿಳಿಯುವುದು ಎಲ್ಲಾ ಹಳ್ಳಿಗಳಲ್ಲಿ ಕಂಡುಬರುತ್ತದೆ.

ಈ ಅಧ್ಯಾಯದಲ್ಲಿ ಗಮನಿಸಿದ ಅನೇಕ ಪ್ರಕರಣಗಳು ಇಂದಿಗೂ ನ್ಯಾಯಾಲಯಗಳ ವಿಚಾರಣೆಯಲ್ಲಿವೆ. ಕೆಲವು ಬಾರಿ ವಾದಿ - ಪ್ರತಿವಾದಿಗಳು ಮರಣ ಹೊಂದಿದರೂ ಪ್ರಕರಣಗಳು ಅಂತ್ಯ ಕಂಡಿಲ್ಲ. ಸಂವಿಧಾನದ ಮೂಲಕ ಮಹಿಳೆಯರಿಗೆ ಅನೇಕ ರೀತಿಯ ಕಾನೂನುಗಳು ಜಾರಿಯಾದರೂ ಸಹ ಅವು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳ್ಳುತ್ತಿಲ್ಲ. ಪುರುಷ ಕೇಂದ್ರಿತ ಸಮಾಜದಲ್ಲಿ ಮಹಿಳೆ ಸಬಲಳು, ಆಕೆಗೂ ಆಸ್ತಿ ಹಕ್ಕು ಬೇಕು, ಆಕೆಯೂ ಭೂಮಿಯನ್ನು ಪಡೆದು ಅನುಭವಿಸಲು ಶಕ್ತಳು ಎಂಬ ಮನೋಭಾವ ಇನ್ನು ಬೆಳೆದಿಲ್ಲ. ಅಧ್ಯಯನದ ಮೂಲಕ ಈ ಹೇಳಿಕೆಗೆ ಆಧಾರ ದೊರೆಯುತ್ತದೆ. ಕುಟುಂಬದಲ್ಲಿ ಗಂಡು ಮಕ್ಕಳಿಲ್ಲ ಎಂಬ ಕಾರಣದಿಂದ, ಗಂಡ ಸತ್ತಿದ್ದಾನೆ ಎಂಬ ಕಾರಣದಿಂದ, ಅಂಗವಿಕಲತೆಯಾದ ಕಾರಣದಿಂದ ವರದಕ್ಷಿಣೆ ರೂಪದಲ್ಲಿ ಬರುವ ಆಸ್ತಿ, ಹೀಗೆ ಈ ಎಲ್ಲಾ ಕಾರಣಗಳಿಂದ ಮಹಿಳೆಯರು ಆಸ್ತಿಯ ಹಕ್ಕನ್ನು ಪಡೆದಿರುವರು ಹೊರತಾಗಿ ಕಾನೂನಿನ ಪ್ರಕಾರ ಆಸ್ತಿಯಲ್ಲಿ ತಾನು ಪುರುಷನಷ್ಟೇ ಸರಿಸಮಾನ ಪಾಲುದಾರಳು ಎಂದು ಆಸ್ತಿ ಪಡೆಯದೆ ಇರುವುದನ್ನು ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವಾಗಿದೆ.

* * *

## ಪಂಚವಾರ್ಷಿಕ ಯೋಜನೆಗಳು: ಭೂ ಒಡೆತನ ಮತ್ತು ಮಹಿಳೆ

ಭಾರತವು ಬ್ರಿಟೀಷರ ದಾಸ್ಯದಿಂದ ಮುಕ್ತಗೊಂಡ ಮೇಲೆ ದೇಶದ ಸರ್ಕಾರಗಳು ಶೀಘ್ರ ಆರ್ಥಿಕಾಭಿವೃದ್ಧಿ ಮತ್ತು ಸಾಮಾಜಿಕ ಬದಲಾವಣೆಯನ್ನು ಸಾಧಿಸುವ ದೃಷ್ಟಿಯಿಂದ ಹಲವು ಯೋಜನೆಗಳನ್ನು ಜಾರಿಗೆ ತರುತ್ತಲೇ ಬಂದಿವೆ. ಹೀಗೆ ರೂಪಿತಗೊಂಡ ಯೋಜನೆಗಳಲ್ಲಿ ಐದು ವರ್ಷಗಳ ಕಾಲಾವಧಿಯ ಸಮಗ್ರ ಅಭಿವೃದ್ಧಿ ಯೋಜನೆಯನ್ನು ಪಂಚವಾರ್ಷಿಕ ಯೋಜನೆಗಳೆಂದೂ, ಪ್ರತಿವರ್ಷದ ಯೋಜನೆಯನ್ನು ವಾರ್ಷಿಕ ಯೋಜನೆಯೆಂದು ಕರೆಯಲಾಗಿದೆ. ಇದುವರೆಗೆ ಅಂತಹ ಹತ್ತು ಪಂಚವಾರ್ಷಿಕ ಯೋಜನೆಗಳನ್ನು ಮತ್ತು ಕೆಲವು ವಾರ್ಷಿಕ ಅಭಿವೃದ್ಧಿ ಯೋಜನೆಗಳನ್ನು ಪೂರ್ಣಗೊಳಿಸಿ ಈಗ ಹನ್ನೊಂದನೆಯ ಪಂಚವಾರ್ಷಿಕ ಯೋಜನೆಯು ಸಿದ್ಧಗೊಂಡಿದೆ.

ನಿರ್ಮಲಾ ಬುಚ್ ಹೇಳುವಂತೆ - ''ಭಾರತದಲ್ಲಿ ಮಹಿಳೆಯರನ್ನು ಕೇವಲ ಸಮಾಜ ಕಲ್ಯಾಣ ಘಟಕವಾಗಿ ಪರಿಭಾವಿಸಿಕೊಳ್ಳಲಾಗಿದೆ ವಿನಃ ಅಭಿವೃದ್ಧಿಯ ಘಟಕವಾಗಿಯಲ್ಲ. ಮಹಿಳೆಯರ ಬದುಕು ದುಡಿಮೆ ಕುರಿತಂತೆ ಆರ್ಥಿಕ ಕಾರ್ಯಕ್ರಮಗಳು, ಯೋಜನೆಗಳು 'ಕಲ್ಯಾಣವಾದಿ' ನೆಲೆಯಿಂದ ಪ್ರಾರಂಭಿಸಿ, ಸಮಾನತೆ ನೆಲೆಯನ್ನು ಹಾದು ಇಂದು 'ಸಬಲೀಕರಣ'ದ ಹಂತಕ್ಕೆ ಬಂದು ನಿಂತಿವೆ. ಆದರೆ ಸ್ವಾತಂತ್ರ್ಯ ನಂತರ ಭಾರತದ ಅಭಿವೃದ್ಧಿ ಕಾರ್ಯಕ್ರಮಗಳ ಮೂಲದಲ್ಲಿದ್ದ ಮಹಿಳೆಯರನ್ನು ಕುರಿತ ಧೋರಣೆಯು ಕಲ್ಯಾಣವಾದಿಯಾಗಿತ್ತು ಎಂಬುದು ಸ್ಪಷ್ಟ.'' (ಉದ್ಧೃತ: ಚಂದ್ರಶೇಖರ ಟಿ.ಆರ್., ೨೦೦೧, ಪು ೧೮೩) ಈ ಪಂಚವಾರ್ಷಿಕ ಯೋಜನೆಗಳು 'ಕಲ್ಯಾಣ ರಾಜ್ಯ' ವನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿವೆ. ಈ ಯೋಜನೆಗಳಲ್ಲಿ ಮಹಿಳೆಯರನ್ನು ಸಮಾಜ ಕಲ್ಯಾಣದ ಅಂಗವಾಗಿ ಪರಿಭಾವಿಸಿಕೊಳ್ಳಲಾಗಿದೆಯೇ ಹೊರತಾಗಿ ಅಭಿವೃದ್ಧಿಯ ಅಂಗವಾಗಿ ಪರಿಭಾವಿಸಿಲ್ಲ.

ಭಾರತದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಮಧ್ಯಮ ವರ್ಗದ ಜನರನ್ನು ಗಮನದಲ್ಲಿಟ್ಟುಕೊಂಡು ರೂಪುಗೊಂಡಿರುವುದರಿಂದ ಮಹಿಳೆಯರನ್ನು ಕುರಿತ ಅಭಿವೃದ್ಧಿ ಕಾರ್ಯಕ್ರಮಗಳು, 'ಕಲ್ಯಾಣವಾದಿ' ಧೋರಣೆಯನ್ನು ತಳೆದವು. ಅಲ್ಲದೆ 'ಸಾಮಂತವಾದಿ-ಪುರುಷಶಾಹಿ' ಚೌಕಟ್ಟಿನಲ್ಲಿ ಮಹಿಳೆಯರ ಅಭಿವೃದ್ಧಿಯನ್ನು ಸಾಧಿಸಲು ಕಲ್ಯಾಣವಾದಿ ಧೋರಣೆಯಿಂದ ಮಾತ್ರ ಸಾಧ್ಯವಾಗಿತ್ತು. 'ಸಾಮಂತವಾದಿ-ಪುರುಷಶಾಹಿ' ಚೌಕಟ್ಟಿನಲ್ಲಿ ಅಂದರೆ ಪುರುಷರ ಅಧೀನದಲ್ಲಿಯೇ ಮಹಿಳೆಯರ ಅಭಿವೃದ್ಧಿಯಾಗಲು ಸಾಧ್ಯ. ಮಹಿಳೆಯರನ್ನು ಪುರುಷರಿಂದ ಬೇರ್ಪಡಿಸಿ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಿಲ್ಲ ಎಂದು ತಿಳಿಯಲಾಗಿತ್ತು. ಆದ್ದರಿಂದ ಐವತ್ತರ

ದಶಕದಲ್ಲಿ ಅಂದಿನ ಪ್ರಧಾನಮಂತ್ರಿ ನೆಹರೂ ಕೂಡ 'ಮಹಿಳೆಯರ ಪ್ರಧಾನ ಜವಾಬ್ದಾರಿಯೆಂದರೆ ಕುಟುಂಬವನ್ನು ಸಮರ್ಥವಾಗಿ ಸಂಭಾಳಿಸಿಕೊಂಡು ಹೋಗುವುದು' ಎಂದು ಹೇಳಿರುವುದನ್ನು ಗಮನಿಸಬಹುದು. ಮಹಿಳೆಯರನ್ನು ಕುರಿತ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವಾಗ ಸರಕಾರವು ಈ ಧೋರಣೆಯನ್ನು ಅನುಸರಿಸಿದೆ. ಸರಕಾರವು ರೂಪಿಸುತ್ತಿರುವ ಅಭಿವೃದ್ಧಿ ಯೋಜನೆಗಳು 'ಲಿಂಗ ನಿರಪೇಕ್ಷ' ಸ್ವರೂಪದಲ್ಲಿ ಅನುಷ್ಠಾನಗೊಂಡಿರುವುದರಿಂದ ದೇಶದ ಒಟ್ಟು ದುಡಿಮೆಗಾರರಲ್ಲಿ ಶೇ. % ರಷ್ಟು ಮಹಿಳೆಯರಿದ್ದರೂ ಅವರನ್ನು ದುಡಿಮೆಗಾರರೆಂದು ಪರಿಗಣಿಸದೆ ಕೇವಲ ತಾಯಿ, ಗೃಹಿಣಿ, ಹೆಂಡತಿ ಎಂದರೇ ವಿನಃ ಅಭಿವೃದ್ಧಿಯಲ್ಲಿ ಅವರ ಪಾಲನ್ನು ಪರಿಗಣಿಸಲಿಲ್ಲ. ''ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸುವುದು ಮತ್ತು ಅವರ ಅಭಿವೃದ್ಧಿ ಕುರಿತಂತೆ ಉಗ್ರವಾದ ಮತ್ತು ಸಂಘರ್ಷವಾದಿ ನೆಲೆಯುಳ್ಳ ಸಲಹೆ ಸೂಚನೆಗಳು ಭಾರತದಲ್ಲಿ ೧೯೩೯-೪೦ ರಷ್ಟು ಹಿಂದೆಯೇ ರಾಷ್ಟ್ರಮಟ್ಟದಲ್ಲಿ ಮಂಡಿತವಾಗಿದ್ದವು.'' (ಉದ್ಧೃತ: ಚಂದ್ರಶೇಖರ ಟಿ.ಆರ್. ೨೦೦೧, ಪು ೧೯೩)

೧೯೩೯-೪೦ ರಲ್ಲಿ ಕಾಂಗ್ರೆಸ್ ಪಕ್ಷದ ಉಪಸಮಿತಿಯು ಸಿದ್ಧಪಡಿಸಿದ್ದ ವರದಿಯಲ್ಲಿ ಮಹಿಳೆಯರ ಅಂದಿನ ಸ್ಥಿತಿಗತಿ ಕುರಿತ ಚರ್ಚೆಗೆ ಅವಕಾಶ ನೀಡಲಾಗಿತ್ತು. ಈ ವರದಿಗಳು ಸಮಾಜದಲ್ಲಿರುವ ಕೆಳವರ್ಗದ ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡಿತ್ತು. ಆದರೆ ಉಗ್ರ ವಿಚಾರಗಳಿಂದ ಕೂಡಿದ್ದ ಈ ವರದಿಯು ಸ್ವಾತಂತ್ರ್ಯ ನಂತರ ಅಭಿವೃದ್ಧಿ ಯೋಜನೆಗಳಿಗೆ ತಳಹದಿಯಾಗದೇ ಹೋಯಿತು. ಮಧ್ಯಮ ವರ್ಗದ ಹಿತಾಸಕ್ತಿಗಳಿಂದ ಪ್ರೇರಿತವಾಗಿದ್ದ ಕಾಂಗ್ರೆಸ್ ಸರ್ಕಾರವು ಸಂಘರ್ಷವಾದಿ-ಪರಿವರ್ತನಶೀಲ ಕಾರ್ಯಕ್ರಮಗಳನ್ನು ರೂಪಿಸದೇ ಪಂಚವಾರ್ಷಿಕ ಯೋಜನೆಗಳಲ್ಲಿ 'ಕಲ್ಯಾಣವಾದಿ' ನಿಲುವನ್ನು ಆಧರಿಸಿ ಕಾರ್ಯಕ್ರಮವನ್ನು ರೂಪಿಸಿಕೊಂಡು ಬಂದಿತು. ಪಂಚವಾರ್ಷಿಕ ಯೋಜನೆಗಳು ಮಹಿಳೆಯರನ್ನು ಕೇವಲ ಅನುಭೋಗದ ಘಟಕವೆಂದೇ ರೂಪಿಸಿತೇ ಹೊರತು ಉತ್ಪಾದನಾ ಘಟಕವಾಗಿ ಪರಿಗಣಿಸಲಿಲ್ಲ. ಮಹಿಳೆಯರು ಅಭಿವೃದ್ಧಿಯ ಮೂಲದ್ರವ್ಯವೆಂದು ೧೯೩೯-೪೦ ರಲ್ಲಿಯೇ ಸಮಿತಿಯು ತನ್ನ ವರದಿಯಲ್ಲಿ ಹೇಳಿದ್ದರೂ ೧೯೫೦ರ ನಂತರ ಯೋಜನೆಗಳನ್ನು ರೂಪಿಸುವಾಗ ಅವರನ್ನು ಅನುಭೋಗದ ಘಟಕವೆಂದು ಪರಿಗಣಿಸಿ ಕಲ್ಯಾಣವಾದಿ ಕಾರ್ಯಕ್ರಮಗಳ ಫಲಾನುಭವಿಗಳನ್ನಾಗಿ ಮಾಡಿತು. ಸ್ಕಾರಲೆಟ ಎಪಿಸ್ಟೀನ್ ಹೇಳುವಂತೆ ''ಭಾರತದಲ್ಲಿ ಇಂದಿಗೂ ಮಹಿಳೆಯರ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಯೋಜನೆಗಳ ನಿರ್ವಹಣೆಯ ಜವಾಬ್ದಾರಿಯು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಕೈಗಾರಿಕಾ ಸಚಿವಾಲಯ ನಿರ್ವಹಣೆಯಲ್ಲ. ಸಮಾಜ ಕಲ್ಯಾಣ ಸಚಿವಾಲಯದ ವಶದಲ್ಲಿದೆ.'' (ಉದ್ಧೃತ: ಚಂದ್ರಶೇಖರ ಟಿ.ಆರ್., ೨೦೦೧, ಪು ೧೯೨)

ಜನತೆಯನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಸಬಲೀಕರಿಸಬೇಕೆಂಬ ಉದ್ದೇಶದಿಂದ ಅನೇಕ ಯೋಜನೆಗಳು ಜಾರಿಗೊಂಡಿವೆ ಮತ್ತು ಜಾರಿಗೊಳ್ಳುತ್ತಿವೆ. ಅಂತೆಯೇ ಸರ್ಕಾರ ಮಹಿಳೆಯರ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಅವುಗಳನ್ನು ಪಂಚವಾರ್ಷಿಕ ಯೋಜನೆಗಳ ಮೂಲಕ ಜಾರಿಗೊಳಿಸಲಾಗುತ್ತಿದೆ. ಇದುವರೆಗೂ ಜಾರಿಗೊಂಡಂಥ ಹತ್ತು ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಯಾವ ಯಾವ ಯೋಜನೆಗಳಲ್ಲಿ ಪ್ರಸ್ತಾಪಿಸಿದೆ? ಈ ಪ್ರಸ್ತಾಪನೆಯ ಹಿಂದಿರುವ ಉದ್ದೇಶಗಳೇನು? ಈವರೆಗೂ ಜಾರಿಯಾದ ಯೋಜನೆಗಳು ಮಹಿಳಾ ಭೂ ಒಡೆತನಕ್ಕೆ ಎಷ್ಟರಮಟ್ಟಿಗೆ ಒತ್ತು ಕೊಟ್ಟಿವೆ ಎಂಬುದನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

### ೫.೧. ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಭೂ ಒಡೆತನಕ್ಕೆ ನೀಡಿದ ಪ್ರಾತಿನಿಧ್ಯ

**ಪ್ರಥಮ ಪಂಚವಾರ್ಷಿಕ ಯೋಜನೆ (೧೯೫೧-೧೯೫೬)**

ಪ್ರಥಮ ಪಂಚವಾರ್ಷಿಕ ಯೋಜನೆಯು 'ಕಲ್ಯಾಣ ರಾಜ್ಯ' ವನ್ನು ಸ್ಥಾಪಿಸುವ ಘನ ಉದ್ದೇಶವನ್ನು ಹೊಂದಿತ್ತು. ಆದುದರಿಂದಲೇ ಈ ಯೋಜನೆಯಲ್ಲಿ ಮಹಿಳಾ ಕಲ್ಯಾಣವನ್ನು ಸಮಾಜ ಕಲ್ಯಾಣದ ಅಂಗವಾಗಿ ಪರಿಭಾವಿಸಿಕೊಂಡು ಅಂತಹ ಕಾರ್ಯಕ್ರಮಗಳ ನಿರ್ವಹಣೆಯ ಜವಾಬ್ದಾರಿಯನ್ನು ಸ್ವಯಂ ಸೇವಾ ಸಂಸ್ಥೆಗಳಿಗೆ ನೀಡಿತು. ಇದರಿಂದ ಅಭಿವೃದ್ಧಿ ನೀತಿಯಲ್ಲಿ ಮಹಿಳೆಯರ ಪಾಲು ಕುರಿತು ಯಾವುದೇ ಉಲ್ಲೇಖಗಳಿಲ್ಲ. ಈ ಯೋಜನೆಯಲ್ಲಿ ಮಹಿಳೆಯು ಕುಟುಂಬದಲ್ಲಾಗಲಿ ಮತ್ತು ಸಮಾಜದಲ್ಲಾಗಲಿ ಹೊಂದಿರುವ ಸ್ಥಾನಮಾನ ಮತ್ತು ಕರ್ತವ್ಯಗಳೂ ಹಾಗೂ ಜವಾಬ್ದಾರಿಗಳನ್ನು ಆಧರಿಸಿ ಸಾಮಾಜಿಕ ಸ್ವಾಸ್ಥ್ಯವನ್ನು ನಿರ್ಧರಿಸಲಾಗಿದೆ. ಸ್ವಯಂಸೇವಾ ಸಂಸ್ಥೆಗಳಿಗೆ ಜವಾಬ್ದಾರಿಯನ್ನು ನೀಡುವುದರಿಂದ ಅಪಾರ ಸಂಖ್ಯೆಯಲ್ಲಿ ಸಾಮಾಜಿಕ ಶಾಸನಗಳನ್ನು ರೂಪಿಸಲಾಯಿತು. ಇವುಗಳಲ್ಲಿ ಹಿಂದೂ ಮಹಿಳೆಯರಿಗೆ ವಿವಾಹ ಸಂದರ್ಭದಲ್ಲಿ ಮತ್ತು ಅನುವಂಶಿಕವಾಗಿ ಆಸ್ತಿ ಹೊಂದುವಾಗ ರಕ್ಷಣೆಯನ್ನು ಕಲ್ಪಿಸಿಕೊಟ್ಟಿತು. ಅಲ್ಲದೆ ವಿಧವೆಯರಿಗೆ, ನಿರ್ಗತಿಕರಿಗೆ ಮತ್ತು ನಿರಾಶ್ರಿತ ಮಹಿಳೆಯರಿಗೆ ಉದ್ಯೋಗ ಅವಕಾಶ ದೊರಕಿಸಿದವು. ಅಂಗವಿಕಲ ಮಹಿಳೆಯರಿಗೂ ಕೂಡ ಆರ್ಥಿಕ ಚಟುವಟಿಕೆಗಳಲ್ಲಿ ಪ್ರೇರೇಪಿಸುವಂತೆ ಮಾಡಿದವು.

''ಸ್ವಾತಂತ್ರ್ಯದ ನಂತರ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ರಾಷ್ಟ್ರದ ಅಭಿವೃದ್ಧಿಗಾಗಿ ಯೋಜನಾ ಆಯೋಗವನ್ನು ರಚಿಸಬೇಕೆಂದು ಭಾರತ ಸರ್ಕಾರಕ್ಕೆ ಶಿಫಾರಸ್ಸು ಮಾಡಿತು. ರಾಷ್ಟ್ರೀಯ ಯೋಜನೆಯೊಂದಿಗೆ ಭೂ ಸುಧಾರಣೆಯನ್ನು ಸೇರಿಸಬೇಕೆಂದು ತಿಳಿಸಿತು.'' (ಅನಂತರಾಮಯ್ಯ.ಎನ್., ೧೯೯೩, ಪು ೨೫) ಭೂ ಸುಧಾರಣೆಯ ಮೂಲಕ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಯನ್ನು ತರಲು ಈ ಯೋಜನೆಯಲ್ಲಿ ಗುರಿಯನ್ನು ಹಾಕಿಕೊಂಡಿತು. ಕೃಷಿ ರಂಗದಲ್ಲಿ ದಕ್ಷತೆಯನ್ನು ಹೆಚ್ಚಾಗಿ ಕೃಷಿ ಉತ್ಪನ್ನಗಳು ಮತ್ತು ಆಹಾರ ಧಾನ್ಯಗಳನ್ನು ಹೆಚ್ಚಿಸಲು ಹಾಗೂ ಸಾಮಾಜಿಕ ಬದಲಾವಣೆಗಾಗಿ ಸಂಪತ್ತು ಮತ್ತು ಆದಾಯಗಳಲ್ಲಿಯ ಅಸಮಾನತೆಯನ್ನು ತೊಡೆದು ಹಾಕುವುದು, ಮುಂತಾದ ಗುರಿಗಳನ್ನು ಈ ಯೋಜನೆಯು ಹಾಕಿಕೊಂಡಿತು. ಯೋಜನಾ ಆಯೋಗವು ಭೂ ನೀತಿಯಲ್ಲಿ ''ರಾಷ್ಟ್ರೀಯ ಅಭಿವೃದ್ಧಿಯಲ್ಲಿ ಭೂ ಒಡೆತನ ಮತ್ತು ಉಳುಮೆಯು ಬಹುಶಃ ಮೂಲಭೂತ ಸಮಸ್ಯೆಯಾಗಲಿದೆ ಎಂದು ಹೇಳಿತು.'' (ಅನಂತರಾಮಯ್ಯ. ಎನ್., ೧೯೯೩, ಪು ೨೫) ಕಾರಣ ಭೂ ನೀತಿಯ ರೂಪುರೇಷೆಗಳಲ್ಲಿ ಭೂಮಿಯ ಬಗ್ಗೆ ಇರುವ ವಿವಿಧ ಆಸಕ್ತಿಗಳೆಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟೀಷ್ ಸರ್ಕಾರವು ಭೂ ಒಡೆತನದ ಹಕ್ಕುಗಳನ್ನು ಸೂಕ್ತ ರೀತಿಯಲ್ಲಿ ನೀಡದೆ, ಸುಲಭವಾಗಿ ಹೆಚ್ಚಿನ ಕಂದಾಯವನ್ನು ಪಡೆಯುವ ದೃಷ್ಟಿಯಿಂದ ಮಧ್ಯವರ್ತಿಗಳು, ದೊಡ್ಡ ಭೂಮಾಲೀಕರು, ಸಣ್ಣ ಹಾಗೂ ಮಧ್ಯಮ ಮಾಲೀಕರ ಹತ್ತಿರವೇ ಭೂಮಿ ಇರುವುದರಿಂದ ಉಳಿದವರು ಗೇಣಿದಾರರಾಗಿ, ಕೂಲಿಯಾಳುಗಳಾಗಿ ದುಡಿಯುವ ಪರಿಸ್ಥಿತಿಯಿತ್ತು. ಆದರೆ ಸ್ವಾತಂತ್ರ್ಯದ ನಂತರ ಬ್ರಿಟೀಷ್ ಸರ್ಕಾರವು ದೇಣಿಗೆಯಾಗಿ ಬಿಟ್ಟು ಹೋದಂತಹ ಈ ಪದ್ಧತಿಯಿಂದ ಭಾರತ ಸರ್ಕಾರದ ಬಡತನ ನಿರ್ಮೂಲನೆ, ಗ್ರಾಮೀಣ ಬೆಳವಣಿಗೆ, ಆರೋಗ್ಯಕರವಾದ ಸಮಾಜ ನಿರ್ಮಾಣ ಮಾಡುವ ಯೋಜನೆಗಳು ನಿರೀಕ್ಷಿತ ಫಲಿತಾಂಶ ನೀಡದ ಕಾರಣ ಭೂ ಸುಧಾರಣಾ ನೀತಿಯ ಮೂಲಕ ಈ ಮೇಲಿನ ಪದ್ಧತಿಯನ್ನು ರದ್ದುಗೊಳಿಸಿ ಕೃಷಿ ಉತ್ಪಾದನೆಗೆ ಹೆಚ್ಚಿನ ಆದ್ಯತೆಯನ್ನು ನೀಡಲು ಪ್ರಯತ್ನಿಸಲಾಯಿತು. ಹೀಗಾಗಿ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಪುರುಷರಿಗೇ ಭೂಮಿಯಿರದ ಸಂದರ್ಭದಲ್ಲಿ ಮಹಿಳಾ ಭೂ ಒಡೆತನದ ವಿಷಯ ಪ್ರಸ್ತಾಪವಾಗದೇ ಉಳಿಯಿತು.

**ಎರಡನೆಯ ಪಂಚವಾರ್ಷಿಕ ಯೋಜನೆ (೧೯೫೬-೧೯೬೧)**

ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯರ ಅಭಿವೃದ್ಧಿ ಕುರಿತು ಹೊಸ ಉದ್ದೇಶವೇನನ್ನೂ ಮಂಡಿಸಲಿಲ್ಲ. ಆದರೆ ಮಹಿಳೆಯರ ಆರೋಗ್ಯ ಮತ್ತು ಶಿಶುವಿನ ಆರೋಗ್ಯದ ಕುರಿತು ಚರ್ಚಿಸಲಾಯಿತು. ಯೋಜನೆಯ ಮುಖಾಂತರ ಮಹಿಳಾ ಮಂಡಳಿಗಳನ್ನು ಸ್ಥಾಪಿಸಿ, ಮಂಡಳಿಗಳ ಮೂಲಕ ಮಹಿಳೆಯರಿಗೆ ಹೊಲಿಗೆಯನ್ನು ಕಲಿಸಿ ಆ ಮೂಲಕ ಅವರು ಆರ್ಥಿಕವಾಗಿ ಸಬಲರಾಗುವಂತೆ ಅನುಕೂಲ ಮಾಡಿಕೊಟ್ಟಿತು. ಹಾಗೆಯೇ ತಂದೆ-ತಾಯಿಯರಿಗೆ ಶಿಕ್ಷಣ ನೀಡುವ ಮೂಲಕ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವಂತೆ ಉತ್ತೇಜಿಸಲಾಯಿತು. ಇದರ ಜೊತೆಗೆ ಮಹಿಳೆಯರಿಗೆ ತೋಟಗಾರಿಕೆಗಳಲ್ಲಿ ತರಬೇತಿಯನ್ನು ನೀಡಲಾಯಿತು. ಆದರೆ ಅವಳು ತೋಟಗಾರಿಕೆಯ ಕೆಲಸವನ್ನು ಮಾಡಲು ಹೇಗೆ ಸಮರ್ಥಳೋ ಹಾಗೆಯೇ ಭೂಮಿಯ ಒಡೆತನ ಹೊಂದಲು ಸಮರ್ಥಳು ಎಂದು ಯೋಚಿಸಲಿಲ್ಲ. ಒಟ್ಟಿನಲ್ಲಿ ಅವಳು ಮನೆಯಲ್ಲಿಯೇ ಇದ್ದುಕೊಂಡು ಕೆಲಸ ಮಾಡುವಂತಹ ಕಾರ್ಯಕ್ರಮವನ್ನೇ ಸರಕಾರವು ಹಮ್ಮಿಕೊಂಡಿದೆಯೇ ಹೊರತಾಗಿ ಅವಳಿಗೆ ಅಧಿಕಾರ ನೀಡುವ ಯಾವುದೇ ಕಾರ್ಯಕ್ರಮವನ್ನು ಜಾರಿಗೊಳಿಸುವಲ್ಲಿ ವಿಫಲವಾಯಿತು.

ಕೃಷಿ ಅಭಿವೃದ್ಧಿಗಾಗಿ ಭೂ ಸುಧಾರಣಾ ನೀತಿಯನ್ನು ಜಾರಿಗೆ ತಂದು ಆ ಮೂಲಕ ಯೋಜನೆಯಲ್ಲಿ ಭೂ ಸುಧಾರಣೆಯ ಕುರಿತು ಹಾಕಿಕೊಂಡಿರುವ ಗುರಿಗಳು ಇಂತಿವೆ. ''ಭಾರತದ ಕೃಷಿ ವ್ಯವಸ್ಥೆಯಲ್ಲಿರುವ ಲೋಪದೋಷಗಳನ್ನು ಸರಿಪಡಿಸಿಕೊಂಡು ಕೃಷಿ ಉತ್ಪನ್ನಕ್ಕೆ ಹೆಚ್ಚು ಒತ್ತು ಕೊಡುವುದು. ಕೃಷಿಯ ಅರ್ಥವ್ಯವಸ್ಥೆಯನ್ನು ವಿಕಾಸಗೊಳಿಸುವುದು. ೧೯೫೫ರಲ್ಲಿ ಸ್ಥಾಪಿಸಲಾದ ಭೂ ಸುಧಾರಣಾ ಸಮಿತಿಯು ಮಾಡಿರುವ ಸಲಹೆಯ ಮೇರೆಗೆ ಯೋಜನಾ ಆಯೋಗವು ಜಮೀನ್ದಾರಿ, ಗೇಣಿದಾರಿ ಪದ್ಧತಿಯನ್ನು ನಿರ್ಮೂಲನ ಮಾಡಲು ಮತ್ತು ಗೇಣಿದಾರಿ ಪದ್ಧತಿಯನ್ನು ತಪ್ಪಿಸಲು ತೀವ್ರ ಗಮನ ಕೊಡಬೇಕೆಂದು ಹೇಳಲಾಯಿತು. ಅಲ್ಲದೆ ಭೂ ಹಿಡುವಳಿಗಳ ಮೇಲೆ ಮಿತಿಯನ್ನು ಹೇರಬೇಕೆಂದು ಹಾಗೂ ಗೇಣಿದಾರರನ್ನು ತಮ್ಮ ಜಮೀನುಗಳಿಂದ ಖಾಲಿ ಮಾಡಿಸಿ ಗೈರು ಹಾಜರಾಗಿರುವ ಭೂ ಮಾಲೀಕರ ವಿರುದ್ಧ ಕ್ರಮ ತೆಗೆದುಕೊಳ್ಳುವುದು, ಗ್ರಾಮೀಣ ಬಡವರಿಗೆ ಸಮಾನ ಅವಕಾಶವನ್ನು ನೀಡಲು ಭೂ ಮಿತಿ ಕಾಯ್ದೆಯನ್ನು ಕಠಿಣವಾಗಿ ಅನುಷ್ಠಾನಗೊಳಿಸಬೇಕೆಂದು ಯೋಜಿಸಲಾಯಿತು.'' (ಅನಂತರಾಮಯ್ಯ. ಎನ್., ೧೯೯೩, ಪು ೨೬) ಆದರೆ ಈ ಎಲ್ಲಾ ಗುರಿಗಳಿದ್ದರೂ ನಿರೀಕ್ಷಿತ ಗುರಿ ತಲುಪಲು ಅಸಾಧ್ಯವಾಯಿತು ಎಂದು ಹೇಳಬೇಕು. ಈ ಮೊದಲು ಪ್ರಸ್ತಾಪಿಸಿದಂತೆ ಯೋಜನೆಯ ಉದ್ದೇಶಗಳು, ಗುರಿಗಳು ಮಹತ್ವವನ್ನು ಹೊಂದಿದ್ದರೂ ಸಮರ್ಪಕವಾಗಿ ಕಾರ್ಯಗತಗೊಂಡರೆ ಮಾತ್ರ ಸಾರ್ಥಕವಾಗುತ್ತದೆ. ಆದರೆ ಅವು ಸಮರ್ಪಕವಾಗಿ ದೇಶದ ಮೂಲೆ ಮೂಲೆಗೂ ತಲುಪುವುದು ಅತ್ಯಗತ್ಯ. ಕೇಂದ್ರ ಸರಕಾರದ ಬಹುತೇಕ ಯೋಜನೆಗಳೂ ಇಂದಿಗೂ ಬಡವರನ್ನು, ಮಧ್ಯಮ ವರ್ಗದವರನ್ನು ತಲುಪುವುದೇ ಇಲ್ಲ. ಮಹಿಳಾ ಕಲ್ಯಾಣಕ್ಕೆ ಸಂಬಂಧಿಸಿದ ಬಹುತೇಕ ಯೋಜನೆಗಳನ್ನು ರೂಪಿಸಿ, ಜಾರಿಗೆ ತರುವವರು ಪುರುಷರೇ ಆಗಿದ್ದಾರೆ. ನಿಷ್ಠಾವಂತ, ಮಹಿಳಾ ಅಭಿವೃದ್ಧಿ ಬಗ್ಗೆ ಹೆಚ್ಚಿನ ಕಾಳಜಿಯನ್ನು ಹೊಂದಿರುವಂಥ ಅಧಿಕಾರಿಗಳ ಕೊರತೆಯಿಂದಲೇ ಯೋಜನೆಗಳು ತಮ್ಮ ಗುರಿಯನ್ನು ತಲುಪಲು ವಿಫಲವಾಗಿವೆ. ಹೀಗಾಗಿ ಮಹಿಳೆಯರು ಸಮಾನವಾದ ಅವಕಾಶಗಳಿಂದ ವಂಚಿತರಾಗಿದ್ದಾರೆ.

**ಮೂರನೆಯ ಪಂಚವಾರ್ಷಿಕ ಯೋಜನೆ (೧೯೬೧-೧೯೬೬)**

ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಕೃಷಿ ಅಭಿವೃದ್ಧಿಗೆ ಹೆಚ್ಚು ಆದ್ಯತೆಯನ್ನು ನೀಡಲಾಗಿತ್ತು. ಈ ಯೋಜನೆಯಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ತಾಯಿ ಮತ್ತು ಮಗುವಿನ ಆರೋಗ್ಯ

ಹಾಗೂ ಬಾಲಕಿಯರ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡಲಾಯಿತು. ಭೂ ಸುಧಾರಣೆ ಕುರಿತು ಮೊದಲಿನ ಎರಡು ಯೋಜನೆಗಳಲ್ಲಿ ರೂಪಿಸಿರುವ ರೂಪುರೇಷೆಗಳು ಯಶಸ್ವಿಯಾಗದ ಕಾರಣ ಈ ಯೋಜನೆಯಲ್ಲಿ ಮೊದಲಿನ ರೂಪುರೇಷೆಗಳನ್ನೇ ಪುನರುಚ್ಚರಿಸಲಾಗಿದೆ. ಸಮಾಜದಲ್ಲಿರುವ ಶೋಷಣೆಯನ್ನು ನಿರ್ಮೂಲನ ಮಾಡುವುದರ ಜೊತೆಗೆ ಕೃಷಿ ವ್ಯವಸ್ಥೆಯಲ್ಲಿರುವ ಅಂಕುಡೊಂಕುಗಳನ್ನು ಸರಿಪಡಿಸಿ ಸಾಮಾಜಿಕ ನ್ಯಾಯವನ್ನು ತರಲು ಪ್ರಯತ್ನಿಸುವುದು ಪ್ರಮುಖ ಉದ್ದೇಶವಾಗಿತ್ತು. ೧೯೭೦ ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವು ರಾಯ ಘಡದಲ್ಲಿ ನಡೆಯಿತು. ಈ ಅಧಿವೇಶನದಲ್ಲಿ ಪಾಸು ಮಾಡಿದ ಗೊತ್ತುವಳಿಗಳನ್ನು ನೋಡಿದಾಗ ''ಕೃಷಿಯಲ್ಲಿ ಗಣನೀಯ ವಿಕಾಸವನ್ನು ಸಾಧಿಸಬೇಕೆಂದರೆ ಭೂ ಸುಧಾರಣೆಯನ್ನು ದೇಶದಾದ್ಯಂತ ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕು. ಇದರಲ್ಲಿ ಯಾವುದೇ ರೀತಿಯ ನಿಧಾನವನ್ನು ತೋರಬಾರದೆಂದು ಹೇಳಿತು.'' (ಅನಂತರಾಮಯ್ಯ.ಎನ್., ೧೯೯೩, ಪು ೨೭) ಇಲ್ಲಿಯೂ ಕೂಡ ಭೂ ಸುಧಾರಣ ನೀತಿಯು ಕೃಷಿ ಉತ್ಪನ್ನದ ವಿಕಾಸಕ್ಕಾಗಿಯೆ ಶ್ರಮಿಸಿತ್ತೇ ಹೊರತಾಗಿ ಕೃಷಿ ಭೂಮಿಯ ಒಡೆತನದ ಬಗ್ಗೆ ಮೌನವಾಗಿರುವುದು ಗಮನಿಸಬೇಕಾದ ಅಂಶ.

**ನಾಲ್ಕನೆಯ ಪಂಚವಾರ್ಷಿಕ ಯೋಜನೆ (೧೯೬೯-೧೯೭೪)**

ಈ ಯೋಜನೆಯ ಅವಧಿಯಲ್ಲಿ ಹಿಂದಿನ ಯೋಜನೆಯ ಕಾರ್ಯಕ್ರಮಗಳನ್ನೇ ಮುಂದುವರೆಸಲಾಗಿದೆ. ಬಾಲಕಿಯರ ಶಿಕ್ಷಣದ ಮಹತ್ವ ಕುರಿತು ಮತ್ತು ಸರ್ಕಾರವು ಅನಾಥ ಹೆಣ್ಣು ಮಕ್ಕಳನ್ನು ನೋಡಿಕೊಳ್ಳುವ ಸಂಸ್ಥೆಗಳನ್ನು ಮತ್ತು ವೇಶ್ಯಾವಾಟಿಕೆಯಿಂದ ತಪ್ಪಿಸಿಕೊಂಡು ಬಂದ ಮಹಿಳೆಯರ ಪುನರ್ವಸತಿ ಬಗ್ಗೆ ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ಈ ಯೋಜನೆಯಲ್ಲಿ ಭೂ ಸುಧಾರಣೆಯ ಉದ್ದೇಶಗಳು ಮತ್ತು ಮಸೂದೆಗಳಲ್ಲಿರುವ ಅಂತರಗಳನ್ನು ಚರ್ಚಿಸಲಾಯಿತು. ಭೂ ಮಾಲೀಕರು ತಮ್ಮ ಭೂಮಿಯನ್ನು ಮಾರಾಟ ಮಾಡಿರುವುದನ್ನು ಗಮನಿಸಿತು. ಗೇಣಿದಾರರಿಗೆ ರಕ್ಷಣೆ ಇರದ ಕಾರಣ ಅವರು ಭೂಮಿಯ ಉಳುಮೆ ಮಾಡಲು ಹೆದರುತ್ತಿದ್ದರು. ಮಾಲೀಕರು ಕೂಡ ಭೂಮಿಯ ಉಳುಮೆಯನ್ನು ಮಾಡದಿರುವುದರಿಂದ ಬೇಸಾಯದ ಬೆಳವಣಿಗೆಯು ಕುಂಠಿತವಾಯಿತು. ಆದುದರಿಂದ ಈ ಯೋಜನೆಯಲ್ಲಿ ಗೇಣಿದಾರರಿಗೆ ರಕ್ಷಣೆ ಕೊಡಬೇಕೆಂದು ತೀರ್ಮಾನಿಸಿತು. ಈ ತೀರ್ಮಾನ ಏನೆಂದರೆ ''ಭೂ ಮಾಲೀಕರುಗಳು ಗೇಣಿದಾರರಿಂದ ಕಸಿದುಕೊಂಡಿರುವ ಜಮೀನನ್ನು ಪುನಃ ಉಳುಮೆದಾರರಿಗೆ ಕೊಡಿಸಬೇಕೆಂದು ತೀರ್ಮಾನಿಸಲಾಯಿತು. ಗೇಣಿದಾರರಿಗೆ ಮತ್ತು ಉಪಗೇಣಿದಾರರಿಗೆ ರಕ್ಷಣೆ ಒದಗಿಸಬೇಕೆಂದು ಮಸೂದೆಯನ್ನು ತರಲಾಯಿತು ಮತ್ತು ಅದನ್ನು ಕಾರ್ಯಗತ ಮಾಡಲು ಒತ್ತು ಕೊಡಲಾಯಿತು.'' (ಅನಂತರಾಮಯ್ಯ.ಎನ್., ೧೯೯೩, ಪು ೨) ಈ ಮಸೂದೆಗಳ ಮೂಲಕ ಭೂ ಮಾಲೀಕರು ಬಲಾತ್ಕಾರವಾಗಿ ಉಳುಮೆದಾರರಿಂದ ಭೂಮಿಯನ್ನು ಕಸಿದುಕೊಳ್ಳುವುದನ್ನು ತಡೆಯುವಂತೆ ಪ್ರಯತ್ನಿಸಿತು. ಉಳುಮೆದಾರರೆಲ್ಲರೂ ಪುರುಷರೇ ಆಗಿರುವುದರಿಂದ ಭೂಮಿಯೆಲ್ಲವೂ ಪುರುಷರಿಗೆ ದೊರೆಯುತ್ತಾ ಹೋಯಿತು. ಇಲ್ಲಿ ಮಹಿಳೆಯು ನಗಣ್ಯಳಾಗುತ್ತಾ ಬಂದಳು. ಕಾರಣ ಕೃಷಿ ಮಾಡುವ ಹಕ್ಕು ಪುರುಷನಿಗೆ ಮಾತ್ರ ಇದೆ ಎನ್ನುವ ಈ ವ್ಯವಸ್ಥೆಯಲ್ಲಿ ಮಹಿಳೆಯು ಕೃಷಿ ಕೆಲಸಗಳಲ್ಲಿ ಪಾಲ್ಗೊಂಡಿದ್ದರೂ ಅದು ಲೆಕ್ಕಕ್ಕೆ ಬರದಂತಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅಧಿಕಾರವೆಲ್ಲವೂ ಪುರುಷನದೇ ಆಗಿರುವುದರಿಂದ ಭೂಮಿಯ ಉಳುಮೆದಾರನು ಪುರುಷನೆ ಆಗಿರುವನು ಮತ್ತು ಆ ಭೂಮಿಯ ಮಾಲೀಕನು ಪುರುಷನೇ ಆಗಿರುವುದರಿಂದ ಮಾಲೀಕರಿಂದ ಗೇಣಿದಾರರಿಗೆ ಇಲ್ಲಿ ಭೂಮಿಯನ್ನು ವರ್ಗಾಯಿಸಲಾಗಿದೆ. ಅಂದರೆ ಪುರುಷನಿಂದ ಪುರುಷನಿಗೆ ಇಲ್ಲಿ ಅಧಿಕಾರವನ್ನು ವರ್ಗಾಯಿಸಲಾಗಿದೆಯೇ ಹೊರತಾಗಿ ಮಹಿಳೆಗೆ ಭೂ ಒಡೆತನದ ಅಧಿಕಾರವನ್ನು ವರ್ಗಾಯಿಸಲು ಸರಕಾರವು ಪ್ರಯತ್ನಿಸಲಿಲ್ಲ.

**ಐದನೆಯ ಪಂಚವಾರ್ಷಿಕ ಯೋಜನೆ (೧೯೭೪-೧೯೭೯)**

ಈ ಯೋಜನೆಯಲ್ಲಿ ಮಹಿಳೆಯರಿಗೆ ತರಬೇತಿ ನೀಡುವ ಕಾರ್ಯಕ್ರಮಗಳ ಮೂಲಕ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಕೃಷಿ ಕೂಲಿಯನ್ನೇ ಅವಲಂಬಿಸಿದಂತಹ ಮಹಿಳೆಯರಿಗೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಹೆಚ್ಚು ಗಟ್ಟಿಯಾಗಿ ತೊಡಗುವಂತೆ ಮಾಡಬೇಕು ಎನ್ನಲಾಗಿದೆ. ಕಡಿಮೆ ವರಮಾನವುಳ್ಳ, ಮಕ್ಕಳನ್ನು ಸಾಕುವ ಜವಾಬ್ದಾರಿ ಹೊತ್ತ ದುಡಿಯುವ ಹೆಣ್ಣು ಮಕ್ಕಳಿಗೆ ತರಬೇತಿ ನೀಡಲು ಪ್ರೋತ್ಸಾಹ ನೀಡಲಾಯಿತು. ಶಿಶುಪಾಲನೆ, ಪೌಷ್ಟಿಕ ಆಹಾರದ ತಯಾರಿಕೆ, ಆರೋಗ್ಯ ನಿರ್ವಹಣೆ, ಮನೆಯ ಖರ್ಚು, ವೆಚ್ಚಗಳ ನಿರ್ವಹಣೆ ಮುಂತಾದವುಗಳನ್ನು ಸಮರ್ಥವಾಗಿ ನಿರ್ವಹಿಸಲು ಗೃಹಿಣಿಗೆ ಅಗತ್ಯವಾದ ಶಿಕ್ಷಣ ಒದಗಿಸುವ ಕಾರ್ಯಕ್ರಮಗಳನ್ನು ಈ ಯೋಜನೆಯಲ್ಲಿ ಹಮ್ಮಿಕೊಳ್ಳಲಾಯಿತು. ೧೫ ರಿಂದ ೪೫ ವರ್ಷ ವಯೋಮಾನದ ಮಹಿಳೆಯರನ್ನು ಈ ಯೋಜನೆಯಲ್ಲಿ ಒಳಪಡಿಸಲಾಯಿತು. ದೇಶದಲ್ಲಿನ ಗೃಹಕೈಗಾರಿಕೆ, ಗ್ರಾಮೀಣ ಕೈಗಾರಿಕೆ, ಕರಕುಶಲ ಕಲೆಗಳಲ್ಲಿ ತೊಡಗಿಸಿಕೊಂಡ ಮಹಿಳೆಯರು ತಯಾರಿಸಿದ ಸರಕುಗಳನ್ನು ಸಮರ್ಪಕವಾಗಿ ಮಾರಾಟ ಮಾಡುವ ವ್ಯವಸ್ಥೆಯನ್ನು ಪ್ರಾರಂಭಿಸಲಾಯಿತು. ಆ ಮೂಲಕ ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಡಲಾಯಿತು.

ಅಲ್ಲದೆ ಈ ಕೃಷಿ ಭೂಮಿ ಮತ್ತು ಕೃಷಿ ಉತ್ಪಾದನೆಯಲ್ಲಿರುವ ತೊಡಕುಗಳನ್ನು ನಿವಾರಿಸುವುದಲ್ಲದೆ ಬ್ರಿಟೀಷರ ಕಾಲದಿಂದಲೂ ಉಳಿದುಕೊಂಡು ಬಂದಿರುವಂತಹ ಶೋಷಣೆಗೆ ಅವಕಾಶವಿರುವ ವ್ಯವಸ್ಥೆಯನ್ನು ತೊಡೆದು ಹಾಕುವುದು, ಗ್ರಾಮೀಣ ಜನರಿಗೆ ನ್ಯಾಯ ಒದಗಿಸುವುದು ಈ ಯೋಜನೆಯ ಗುರಿಯಾಗಿತ್ತು. ಈ ಗುರಿಗಳನ್ನು ಸಾಧಿಸಲು ಭೂ ಮಧ್ಯವರ್ತಿಗಳನ್ನು ಹತೋಟಿಗೆ ತರುವುದು, ಗೇಣಿಯನ್ನು ನಿಗದಿಪಡಿಸುವುದು, ಭೂ ಹಿಡುವಳಿಗಳ ಮೇಲೆ ಮಿತಿಯನ್ನು ಹೇರುವುದು, ಸಣ್ಣ ಹಿಡುವಳಿಗಳನ್ನು ಕ್ರೋಢೀಕರಿಸುವುದು, ಹೆಚ್ಚುವರಿ ಭೂಮಿಯನ್ನು ಭೂ ರಹಿತರಿಗೆ ಹಂಚುವುದು ಮುಂತಾದ ಕೆಲಸಗಳನ್ನು ಕಾರ್ಯಗತಗೊಳಿಸಲು ಈ ಯೋಜನೆಯಲ್ಲಿ ಹಮ್ಮಿಕೊಳ್ಳಲಾಯಿತು. ಈ ಕಾರ್ಯಗಳ ಜೊತೆಗೆ ನಾಲ್ಕನೆಯ ಯೋಜನೆಯಲ್ಲಿ ನಡೆದ ಮುಖ್ಯಮಂತ್ರಿಗಳ ಸಭೆಯಲ್ಲಿ ತೆಗೆದುಕೊಂಡಂಥ ನಿರ್ಣಯಗಳನ್ನು ಜಾರಿಗೊಳಿಸುವುದರ ಮೂಲಕ ಭೂಮಿತಿ ಕಾಯ್ದೆಗಳನ್ನು ಅನುಷ್ಠಾನಗೊಳಿಸಿ ಏಕರೂಪವನ್ನು ಸಾಧಿಸಬೇಕೆಂದು ಯೋಜನಾ ಆಯೋಗವು ತೀರ್ಮಾನಿಸಿತು.

**ಆರನೆಯ ಪಂಚವಾರ್ಷಿಕ ಯೋಜನೆ (೧೯೮೦-೧೯೮೫)**

ಆರನೆ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮಹಿಳಾ ಅಭಿವೃದ್ಧಿಯ ಕುರಿತು ಕ್ರಾಂತಿಕಾರಕವಾದ ಬದಲಾವಣೆಯನ್ನು ತರಲಾಯಿತು. ಯೋಜನೆ ರೂಪುಗೊಳ್ಳುವ ಸಮಯಕ್ಕಾಗಲೇ ಭಾರತದಲ್ಲಿ ಮಹಿಳಾಶಕ್ತಿ ಒಂದು ನಿರ್ಣಾಯಕ ಸ್ಥಾನವನ್ನು ಪಡೆದುಕೊಂಡಿತ್ತು. ಮಹಿಳಾ ಚಳುವಳಿಯು ಕ್ರಿಯಾಶೀಲವಾಗಿ ಮಹತ್ವದ ಘಟ್ಟವನ್ನು ಪಡೆದಿತ್ತು. ಮಹಿಳೆಯರ ಸ್ಥಾನಮಾನವನ್ನು ಕುರಿತು ಅಧ್ಯಯನ ಮಾಡಲು ಸರ್ಕಾರವು ನೇಮಿಸಿದ್ದ ಸಮಿತಿಯು 'ಟುವರ್ಡ್ಸ್ ಈಕ್ವಾಲಿಟಿ' ಎಂಬ ತನ್ನ ವರದಿಯನ್ನು ಈ ಸಂದರ್ಭದಲ್ಲಿ ಪ್ರಕಟಿಸಿತು. ''ಸುಮಾರು ೪೮೦ ಪುಟಗಳನ್ನು ಒಳಗೊಂಡ ಈ ವರದಿಯಲ್ಲಿ ಮಹಿಳಾ ಅಭಿವೃದ್ಧಿಗೆ ಸಂಬಂಧಿಸಿದಂತೆ ಕೂಲಂಕಷವಾಗಿ ನಿರೂಪಿಸಿದ್ದು ಅವು ಈ ಕೆಳಗಿನಂತಿವೆ.

೧. ಭಾರತದ ಮಹಿಳೆಯ ಸ್ಥಾನಮಾನದ ಅಧ್ಯಯನಕ್ಕೆ ಬೇಕಾದ ದೃಷ್ಟಿಕೋನ

೨. ಅಂಕಿ ಅಂಶಧಾರಿತ ದೃಷ್ಟಿಕೋನ

೩. ಮಹಿಳಾ ಸ್ಥಾನಮಾನದ ಸಮಾಜೋ-ಸಾಂಸ್ಕೃತಿಕ ನೆಲೆ

೪. ಮಹಿಳೆ ಮತ್ತು ಕಾನೂನು

೫. ಆರ್ಥಿಕ ಭಾಗವಹಿಸುವಿಕೆಯಲ್ಲಿನ ಪಾತ್ರಗಳು, ಹಕ್ಕುಗಳು ಮತ್ತು ಅವಕಾಶಗಳು

೬. ಶೈಕ್ಷಣಿಕ ಅಭಿವೃದ್ಧಿ

೭. ರಾಜಕೀಯ ಸ್ಥಾನಮಾನ

೮. ಮಹಿಳೆಯರ ಕ್ಷೇಮಾಭಿವೃದ್ಧಿಗಾಗಿ ನಿಯಮಗಳು ಮತ್ತು ಕಾರ್ಯಕ್ರಮಗಳು

೯. ಮಹಿಳೆಯ ಸ್ಥಾನಮಾನದ ವಿಚಾರದಲ್ಲಿ ಸಮೂಹ ಮಾಧ್ಯಮದ ಪಾತ್ರ ಮತ್ತು ಪ್ರಭಾವ.''(ಉಷಾ ಎಂ., ೨೦೦೪, ಪು ೪೦)

ಹಾಗೆ ಪ್ರತಿಯೊಂದು ಅಧ್ಯಾಯವು ಕೊನೆಯಲ್ಲಿ ತನ್ನ ಅಧ್ಯಯನದ ಫಲಿತಗಳನ್ನು ದಾಖಲಿಸುತ್ತ ಹಲವು ಪರಿಹಾರ ಕ್ರಮಗಳನ್ನು ಶಿಫಾರಸ್ಸು ಮಾಡಿತ್ತು. ಇದು ನೀಡಿದ ಫಲಿತಗಳು ಹಾಗೂ ಪರಿಹಾರಗಳು ಭಾರತದ ಮಹಿಳಾ ಚಳುವಳಿಯ ಇತಿಹಾಸದಲ್ಲಿ ಇದನ್ನೊಂದು ಮೈಲಿಗಲ್ಲಾಗಿಸಿದೆ. ಇವುಗಳ ಪರಿಣಾಮವಾಗಿ ಈ ಪಂಚವಾರ್ಷಿಕ ಯೋಜನೆಯಲ್ಲಿ 'ಮಹಿಳೆ ಮತ್ತು ಅಭಿವೃದ್ಧಿ' ಎಂಬ ಅಧ್ಯಾಯವನ್ನು ಕರಡಿನಲ್ಲಿ ಸೇರಿಸಲಾಯಿತು. ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದ ಈ ಮೊದಲ ಯೋಜನೆಗಳು ನಿರೀಕ್ಷಿಸಿದ ಮಟ್ಟದಲ್ಲಿ ಫಲಿತಾಂಶ ನೀಡಿಲ್ಲ ಎಂಬುದನ್ನು ಈ ಯೋಜನೆ ಗುರುತಿಸಿತು. ಸಾರ್ವತ್ರಿಕ ನೆಲೆಯಲ್ಲಿ ಮಹಿಳೆಯ ಸ್ಥಿತಿಗತಿ ವಿವೇಚಿಸಿ, ಶಾಸನಾತ್ಮಕ ಮತ್ತು ಸಂವಿಧಾನಾತ್ಮಕ ಖಾತ್ರಿಗಳ ಹೊರತಾಗಿಯೂ, ಎಲ್ಲಾ ಕ್ಷೇತ್ರಗಳಲ್ಲೂ ಮಹಿಳೆಯರು ಪುರುಷರಿಗಿಂತ ಹಿಂದೆ ಬಿದ್ದಿದ್ದಾರೆ ಎಂದು ಗುರುತಿಸಲಾಯಿತು. ಮುಖ್ಯವಾಗಿ ಶಿಕ್ಷಣ, ಉದ್ಯೋಗ ಮತ್ತು ಆರೋಗ್ಯ ಈ ಮೂರು ಅಂಶಗಳು ಮಹಿಳೆಯರ ಅಭಿವೃದ್ಧಿಗೆ ಅಗತ್ಯವಿದೆ ಎಂಬುದನ್ನು ಅರಿತು, ಈ ಮೂರು ಅಂಶಗಳಿಗೆ ಹೆಚ್ಚಿನ ಒತ್ತು ನೀಡಲಾಯಿತು. ಇದರ ಮೂಲಕ ಮಹಿಳೆಯರ ಸ್ಥಾನಮಾನಗಳಲ್ಲಿ ಮತ್ತು ಅವರ ಆರ್ಥಿಕ ಸ್ವಾಯತ್ತತೆಗೂ ಶೀಘ್ರವಾಗಿ ಬದಲಾವಣೆಯನ್ನು ತರಲು ಪ್ರಯತ್ನಿಸಲಾಯಿತು.

''೧೯೭೮ ರಲ್ಲಿ ಕಲ್ಕತ್ತದಲ್ಲಿ ನಡೆದ ಮಹಿಳಾ ಸಮಾವೇಶ (women 's conference) ದಲ್ಲಿ ಗ್ರಾಮ ಪಂಚಾಯತಿಯಲ್ಲಿ ಆರಿಸಿ ಬಂದಂಥ ಮಹಿಳೆಯರು ತಮ್ಮ ಪತಿಯ ಪಾಲಿಗೆ ಬಂಬಂಥ ಆಸ್ತಿಯಲ್ಲಿ ಪತಿಯ ಜೊತೆಗೆ ಜಂಟಿಯಾಗಿ ಭೂ ಒಡೆತನವನ್ನು ಸಂಪಾದಿಸಬೇಕೆಂದು ತೀರ್ಮಾನಿಸಿತು. ಇದೇ ತರಹದ ಬೇಡಿಕೆಯನ್ನು ಮಹಿಳಾ ಸಮಿತಿಗಳು ಯೋಜನಾ ಆಯೋಗದ ಮುಂದೆ ಇಟ್ಟವು. ರೋಮ್‌ನಲ್ಲಿ ನಡೆದ (world conference on agriarian reform & rural development (WCARRD))ಕೃಷಿ ಸುಧಾರಣೆ ಮತ್ತು ಗ್ರಾಮೀಣ ಅಭಿವೃದ್ಧಿ ಕುರಿತ ಜಾಗತಿಕ ಸಮ್ಮೇಳನದಲ್ಲಿ ಜಂಟಿಯಾಗಿ ಭೂ ಒಡೆತನ ಮತ್ತು ಗ್ರಾಮಗಳ ಸುಧಾರಣೆಗಾಗಿ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಕಡ್ಡಾಯವಾಗಿ ಪಾಲು ಕೊಡಬೇಕೆಂದು ಘೋಷಿಸಿತು. ಅಲ್ಲದೆ ಈ ಸಮ್ಮೇಳನಕ್ಕೆ ೧೯೭೮ ರ ಆಹಾರ ಮತ್ತು ಕೃಷಿ ಸಂಘಟನೆಯಿಂದ ಕೂಡ ಒತ್ತಡ ಬಂದಿತು. ಆಹಾರ ಮತ್ತು ಕೃಷಿ ಸಂಘಟನೆಯ ವರದಿಯಲ್ಲಿ ವಂಶ ಪಾರಂಪರಿಕ ಹಕ್ಕುಗಳಿಗೆ ಆಸ್ತಿ ನಿಯಂತ್ರಣ ಸಂಬಂಧದಲ್ಲಿ ಲಿಂಗ ಭೇದವಿರುವ ಕಾನೂನುಗಳನ್ನು ತೆಗೆದು ಹಾಕಬೇಕು ಮತ್ತು ಮಹಿಳೆಯರು ಭೂಮಿ ಹಾಗೂ ಉತ್ಪಾದಕ ಸಂಪನ್ಮೂಲಗಳಿಗೆ ಸಮಾನ ಅಧಿಕಾರ ಪಡೆಯುವಂತೆ ಶಿಫಾರಸ್ಸು ಮಾಡಿತು.''(ಬಿನಾ ಅಗರವಾಲ್, ೧೯೯೪, ಪು ೫) ಈ ಶಿಫಾರಸ್ಸುಗಳನ್ನು ಕೃಷಿ ಮತ್ತು ಗ್ರಾಮೀಣ

ಅಭಿವೃದ್ಧಿ ಸಚಿವಾಲಯದಿಂದ ದೇಶದಲ್ಲಿ ಕೃಷಿ ಸುಧಾರಣೆ ಹಾಗೂ ಗ್ರಾಮೀಣ ಅಭಿವೃದ್ಧಿ ಕುರಿತು ಪುನರಾವಲೋಕನಕ್ಕೆ ಒಳಪಡಿಸಲಾಯಿತು. ಇದನ್ನು ಭಾರತ ಸರಕಾರವು ಭೂಮಿ ಮತ್ತು ಮನೆ ನಿವೇಶನಗಳನ್ನು ಪಾಲು ಮಾಡುವ ಕಾರ್ಯಕ್ರಮಗಳಲ್ಲಿ ಮಹಿಳೆಯರಿಗೆ ಜಂಟಿ ಹಕ್ಕುಗಳನ್ನು ಕೊಡಲು ಪ್ರಯತ್ನಿಸಿತು. ಮಹಿಳೆಯರಿಗೆ ಸ್ವತಂತ್ರ ಹಕ್ಕುಗಳ ಅನುಮತಿ ನೀಡುವುದನ್ನು ಮೊಟಕು ಮಾಡುವ ಈ ಸಮಿತಿ ವಿಧಿಯು ಕಾಗದದಲ್ಲಿಯೇ ಉಳಿಯಿತು. ಕುಟುಂಬದ ಮುಖ್ಯಸ್ಥನಾದ ಪುರುಷನಿಗೆ ಭೂ ವಿತರಣ ಕಾರ್ಯಕ್ರಮವನ್ನು ಸರ್ಕಾರವು ಮುಂದುವರೆಸಿತು. ಹಾಗೂ ಅದರ ಮೇಲಿನ ಹಕ್ಕುಗಳನ್ನು ಕೂಡ ಪುರುಷರಿಗೆ ಪ್ರಧಾನವಾಗಿ ನೀಡಿತು. ಗೇಣಿದಾರಿಕೆಯನ್ನು ಸುಧಾರಿಸಿ ಅವರಿಗೆ ಭೂಮಿಯ ಮೇಲೆ ಹಕ್ಕನ್ನು ಒದಗಿಸಬೇಕೆಂದು ಉಳುವವನಿಗೆ ಭೂಮಿಯು ಸೇರಬೇಕೆನ್ನುವ ಕಾರಣಕ್ಕಾಗಿ ಪುರುಷರಿಗೆ ಭೂಮಿಯನ್ನು ನೀಡಲಾಯಿತು.

**ಏಳನೆಯ ಪಂಚವಾರ್ಷಿಕ ಯೋಜನೆ (೧೯೮೫-೧೯೯೦)**

ಈ ಯೋಜನೆಯು ಆರೋಗ್ಯ ಮತ್ತು ಕುಟುಂಬ ಕಲ್ಯಾಣಕ್ಕಾಗಿ ಆದ್ಯತೆ ನೀಡಿತು. ವೃತ್ತಿ ತರಬೇತಿ ಮತ್ತು ಮಹಿಳೆಯರಿಗೆ ಶಿಕ್ಷಣ ನೀಡುವುದರ ಜೊತೆಗೆ ಕೌಶಲ್ಯಗಳ ಮತ್ತು ದೈಹಿಕ ಶ್ರಮದ ಉದ್ಯೋಗ ಅವಕಾಶಗಳನ್ನು ಸೃಷ್ಟಿಸಬೇಕೆಂದು ಪ್ರತಿಪಾದಿಸಿತು. ಮಹಿಳೆ ಮತ್ತು ಅಭಿವೃದ್ಧಿ ಕುರಿತು ಸರ್ಕಾರದ ಕಾರ್ಯನಿರ್ವಹಿಸುತ್ತಿರುವ ತಂಡವು ಮಹಿಳೆಯರಿಗೆ ಹಕ್ಕು ನೀಡಲು ಬಲವಾಗಿ ಶಿಫಾರಸ್ಸು ಮಾಡಿದರೂ, ಮಹಿಳೆ ಮತ್ತು ಅಭಿವೃದ್ಧಿಯ ಬಗ್ಗೆ ಒಂದು ಪ್ರತ್ಯೇಕ ಪರಿಚ್ಛೇದವನ್ನು ಇಟ್ಟುಕೊಂಡರೂ ಜಂಟಿ ಭೂ ಹಕ್ಕುಗಳ ಬಗ್ಗೆ ನಿರ್ದೇಶನವು ಪುನಃ ಹೇಳಿಕೆ ನೀಡಲಿಲ್ಲ. ''ಭಾರತದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ನೇತೃತ್ವದಲ್ಲಿ ಮಹಿಳೆಯರಿಗಾಗಿ ೧೯೮೮-೨೦೦೦ ರಲ್ಲಿ 'ರಾಷ್ಟ್ರೀಯ ಯಥಾ ದೃಷ್ಟಿ ಯೋಜನೆ'ಯನ್ನು (National Perspective Plan for women - 1988-2000 A.D) ರೂಪಿಸಲಾಯಿತು. ಈ ಯೋಜನೆಯು ಭೂಮಿಯ ಅಧಿಕಾರದಲ್ಲಿ ಲಿಂಗ ಅಂತರವನ್ನು ಕೊನೆಗೊಳಿಸುವುದು ಮತ್ತು ಇತರ ಲಿಂಗ ಸಂಬಂಧಿ ವಿಷಯಗಳಿಗೆ ಲಕ್ಷ್ಯಕೊಡಲು ಅನೇಕ ಶಿಫಾರಸ್ಸುಗಳನ್ನು ಮಾಡಿತು.'' (ಬಿನಾ ಅಗರವಾಲ್, ೧೯೯೪, ಪು ೬) ಈ ಯೋಜನೆಯು ಅಭಿವೃದ್ಧಿ ನೀತಿಗಳಲ್ಲಿ ಮತ್ತು ಕಾರ್ಯಕ್ರಮಗಳಲ್ಲಿನ ಮಹಿಳಾ ಪ್ರಶ್ನೆಗಳನ್ನು ವೈಚಾರಿಕವಾಗಿ ವಿಶ್ಲೇಷಿಸುವ ಉದ್ದೇಶ ಹೊಂದಿತ್ತು. ಅಲ್ಲದೆ ಮಹಿಳೆಯರ ಕಲ್ಯಾಣ ಮತ್ತು ಅಭಿವೃದ್ಧಿ ಕುರಿತ ಅನೇಕ ಶಿಫಾರಸ್ಸುಗಳನ್ನು ಒಳಗೊಂಡಿದೆ. ಈ ಯೋಜನೆಯು ಮಹಿಳೆಯರಿಗಾಗಿ ಪರ್ಯಾಯವಾದ, ಪ್ರಜಾಸತ್ತಾತ್ಮಕವಾದ, ಜಾತ್ಯಾತೀತವಾದ, ಸರಕಾರಿ ಸಾಮಾಜಿಕ ಸಂರಚನೆಯನ್ನು ಪ್ರತಿಪಾದಿಸಿದೆ. ಇದು ನಾಲ್ಕು ದಶಕಗಳ ಅಭಿವೃದ್ಧಿ ಯೋಜನೆಯನ್ನು ಪರಾಮರ್ಶಿಸಿ ಗ್ರಾಮೀಣ ಅಭಿವೃದ್ಧಿ, ಆರೋಗ್ಯ, ಶಾಸನ, ಶಿಕ್ಷಣ, ಉದ್ಯೋಗ, ಸ್ವಯಂ ಸೇವಾ ಕ್ರಿಯೆ ಮುಂತಾದ ಉಪ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಕ್ರಿಯಾ ಯೋಜನೆಗಳನ್ನು ರೂಪಿಸಿದೆ. ೧೯೮೯ರಲ್ಲಿ ಭಾರತ ಸರ್ಕಾರದ ಯೋಜನಾ ಆಯೋಗದಿಂದ ಭೂ ಸುಧಾರಣಾ ಬಗೆಗಿನ ರಾಷ್ಟ್ರೀಯ ಸಮ್ಮೇಳನವನ್ನು ನಡೆಸಿತು. ಈ ಸಮ್ಮೇಳನದಲ್ಲಿ ಬಿನಾ ಅಗರವಾಲ್ ಅವರು ಮಹಿಳೆಯರ ಭೂ ಹಕ್ಕುಗಳಿಗಾಗಿನ ವಿಷಯವನ್ನು ಮಂಡಿಸಿದರು. ಈ ವಿಷಯವನ್ನು ಯೋಜನೆಯಲ್ಲಿ ಸೇರಿಸಲಾಗಿದೆ.

ಆದರೂ ಈ ವರದಿಗಳೆಲ್ಲ ಕಾರ್ಯರೂಪಕ್ಕೆ ಬರುವಲ್ಲಿ ವಿಫಲವಾದವು. ಈ ಸಂದರ್ಭದಲ್ಲಿ ೧೯೯೦ರಲ್ಲಿ ರಾಷ್ಟ್ರೀಯ ಆಯೋಗವು ಮಹಿಳಾ ಕಾನೂನನ್ನು (National Commission For Women Act 1990) ಪಾಸು ಮಾಡಿರುವುದು ಮುಂದುವರಿದ ಒಂದು ಮಹತ್ವದ ಹೆಜ್ಜೆಯಾಗಿದೆ. 'ಲಿಂಗ' (Gender) ದ ಸುಧಾರಣೆಯನ್ನು

ಬಯಸುವ ವಿಷಯ ಕುರಿತು ಮಹಿಳಾ ಸಂಘಟನೆಗಳಿಂದ ಹಾಗೂ ಪ್ರಗತಿಪರ ವ್ಯಕ್ತಿಗಳಿಂದ ಅನೇಕ ವರ್ಷಗಳ ಪ್ರಯತ್ನದ ಫಲವಾಗಿ, ಸಂವಿಧಾನ ಹಾಗೂ ಉಳಿದ ಕಾನೂನುಗಳ ಅಡಿಯಲ್ಲಿ ಮಹಿಳೆಯರಿಗೆ ಸಂರಕ್ಷಣೆಯನ್ನು ನೀಡಲಾಗಿದೆ. ಈ ಸಂಬಂಧವಾಗಿ ತನಿಖೆ ಹಾಗೂ ಎಲ್ಲ ವಿಷಯಗಳ ಮೇಲ್ವಿಚಾರಣೆ ಮಾಡುವುದು ಕಡ್ಡಾಯವಾದ ಹಾಗೂ ವಿಸ್ತೃತ ಕಾರ್ಯನಿರ್ವಹಣೆಯೊಂದಿಗೆ ಈ ಕಾನೂನು ಒಂದು ಆಯೋಗವನ್ನು ರಚಿಸಿಕೊಂಡಿತು. ವಿಶೇಷತಃ ಕ್ರಮ ತೆಗೆದುಕೊಂಡ ಅಥವಾ ಸರಕಾರದಿಂದ ಕ್ರಮ ತೆಗೆದುಕೊಳ್ಳಬೇಕಾದುದ್ದನ್ನು ಸೂಚಿಸಿದ ನಿವೇದನ ಪತ್ರದೊಂದಿಗೆ ಮತ್ತು ಅಂಥ ಶಿಫಾರಸ್ಸುಗಳ ಅಂಗೀಕಾರ ಮಾಡದ ಪ್ರಸಂಗಗಳಲ್ಲಿ ಕಾರಣಗಳನ್ನು ಕೊಡಲು ಸಂಸತ್ತಿನ ಎರಡು ಸದನಗಳಾದ ರಾಜ್ಯಸಭೆ ಮತ್ತು ಶಾಸನಸಭೆಗಳ ಮುಂದೆ ಆಯೋಗದಿಂದ ಮಾಡಿದ ಯಾವುದೇ ಶಿಫಾರಸ್ಸುಗಳನ್ನು ಸರಕಾರದ ಮುಂದೆ ಇಡಲು ಕಡ್ಡಾಯದ ಆಜ್ಞೆಯಾಗಿತ್ತು. ಆದರೆ ನಿರೀಕ್ಷಿಸಿದಂತೆ ಯಾವುದೂ ನಡೆಯಲಿಲ್ಲ ಎಂಬುದನ್ನು ಗಮನಿಸಬೇಕು.

**ಎಂಟನೆಯ ಪಂಚವಾರ್ಷಿಕ ಯೋಜನೆ (೧೯೯೨-೧೯೯೭)**

ಯೋಜನೆಯ ಕಾಲಾವಧಿಯಲ್ಲಿ ''ರಾಷ್ಟ್ರೀಯ ಮಹಿಳಾ ಆಯೋಗವು ಲಿಂಗ ಸಂಬಂಧಿತ ವಿಷಯ ಮತ್ತು ಮಹಿಳೆಯರ ಸಮೂಹಗಳ ಬಗ್ಗೆ ಮೇಲ್ವಿಚಾರಣೆಯನ್ನು ಮಾಡುವ ಹೊಣೆಯನ್ನು ಒಪ್ಪಿಸಿತು. ಮತ್ತು ಮಹಿಳೆಯರ ಹಕ್ಕುಗಳಿಗಾಗಿ ರಾಷ್ಟ್ರೀಯ ಆಯುಕ್ತರನ್ನು ನೇಮಿಸಲು ಕೂಡ ಸೂಚಿಸಲಾಗಿದೆ.'' (ಬಿನಾ ಅಗರವಾಲ್, ೧೯೯೪, ಪು ೬) ಈ ಯೋಜನೆಯ ದಾಖಲೆಯು ಆರನೆಯ ಹಾಗೂ ಏಳನೆಯ ಪಂಚವಾರ್ಷಿಕ ಯೋಜನೆಯಂತಿರದೆ ಮಹಿಳೆಯರ ಬಗೆಗೆ ಮತ್ತು ಅಭಿವೃದ್ಧಿಯ ಬಗೆಗೆ ಪ್ರತ್ಯೇಕ ಅಧ್ಯಾಯವನ್ನು ಹೊಂದಿಲ್ಲ. ಆದರೆ ಸಮಾಜ ಕಲ್ಯಾಣದ ಅಧ್ಯಯನದ ಅಡಿಯಲ್ಲಿ ವ್ಯಾಪಕವಾಗಿ ಮಹಿಳೆಯರ ಕುರಿತು ಸಮಾವೇಶವನ್ನು ಹೊಂದಿದೆ. ಈ ಯೋಜನೆಯು ಮಹಿಳೆಯರಿಗೆ ಮತ್ತು ಕೃಷಿ ಭೂಮಿಗೆ ಸಂಬಂಧಿಸಿದಂತೆ ಎರಡು ವಿಶೇಷ ಅಂಶಗಳನ್ನು ಹೇಳುತ್ತದೆ. ಅವು, '' ೧. ಮಹಿಳೆಯರ ಸ್ಥಾನಮಾನವನ್ನು ಸುಧಾರಿಸಲು ಮೂಲಭೂತ ಬೇಡಿಕೆಗಳಲ್ಲೊಂದಾದ ವಂಶ ಪಾರಂಪರ್ಯದ ಕಾನೂನುಗಳನ್ನು ಬದಲಾಯಿಸುವುದು. ಅಂದರೆ ಆಸ್ತಿಯು ವಂಶ ಪಾರಂಪರ್ಯದಿಂದ ಬಂದುದೇ ಇರಲಿ ಅಥವಾ ಸ್ವಯಾರ್ಜಿತವೇ ಆಗಿರಲಿ, ತಂದೆ ತಾಯಿಗಳಿಗೆ ಸಂಬಂಧಿಸಿದ ಆಸ್ತಿಯಲ್ಲಿ ಮಹಿಳೆಯರು ಸಮಪಾಲನ್ನು ಪಡೆಯುವುದು.

೨. ಮಹಿಳೆಯರಿಗಾಗಿ ರಾಜ್ಯ ಸರಕಾರವು, ಸರಕಾರದ ಒಡೆತನದಲ್ಲಿ ಇದ್ದ ಭೂಮಿಯಲ್ಲಿ ಶೇ. ೪೦ ರಷ್ಟು ಭೂಮಿಯನ್ನು ಭೂ ರಹಿತ ದಂಪತಿಗಳಿಗೆ ಜಂಟಿಯಾದ ಹಕ್ಕನ್ನು ಒದಗಿಸಿ ಕೊಡಬೇಕೆಂದು ತೀರ್ಮಾನಿಸಿತು.'' (ಬಿನಾ ಅಗರವಾಲ್, ೧೯೯೪, ಪು ೭) ಆದರೆ ದೇಶದ ಶೇ. ೦.೫೭ ರಷ್ಟು ಭೂಮಿ ಮಾತ್ರ ಕೃಷಿ ಭೂಮಿಯಾಗಿದ್ದು ಉಳಿದ ಭೂಮಿಯು ಬಂಜರು ಭೂಮಿ ಆಗಿತ್ತು. ಕರ್ನಾಟಕ ಸರ್ಕಾರ ತೀರ ಇತ್ತೀಚೆಗೆ ಸರ್ಕಾರ ನೀಡುವ ಭೂಮಿಯನ್ನು ಪತಿ-ಪತ್ನಿಯರಿಬ್ಬರ ಹೆಸರಿನಲ್ಲಿ ಜಂಟಿಯಾಗಿ ಕೊಡಬೇಕೆಂದು ಕರ್ನಾಟಕದ ಭೂ ಮಂಜೂರಾತಿ ನಿಯಮಗಳಿಗೆ ತಿದ್ದುಪಡಿ ಮಾಡಿದೆ. ಪತಿ ಪತ್ನಿಯರಿಗೆ ಜಂಟಿಯಾಗಿ ಭೂಮಿಯನ್ನು ಮಾಡಿದರೆ ಮಹಿಳೆಯರಿಗೆ ತಮ್ಮ ಹಕ್ಕು ಸ್ಥಾಪಿಸುವುದು ಕಷ್ಟ. ಭೂಮಿ ಉಳಿಸಿಕೊಳ್ಳುವ ಸಲುವಾಗಿಯಾದರೂ, ಮಹಿಳೆಯರಿಗೆ ಹಿಂಸಿಸುವ ಪತಿಯೊಂದಿಗೆ ಬಾಳುವ ಅನಿವಾರ್ಯತೆ ಉಂಟಾಗುವ ಸಂದರ್ಭಗಳು ಬರುತ್ತವೆ. ಆದರೆ ಈ ಎಲ್ಲ ಭೂಮಿಯನ್ನು ಪತಿ-ಪತ್ನಿಯರ ಹೆಸರಿನಲ್ಲಿ ಜಂಟಿಯಾಗಿ ಕೊಡಬೇಕೆಂದು ತೀರ್ಮಾನಿಸಿದರು. ಈ ಕಾಯ್ದೆಯನ್ನು ಸರಿಯಾಗಿ ಕಾರ್ಯರೂಪಕ್ಕೆ ತರುವಂತೆ ಮಾಡದ ಕಾರಣ ಯೋಜನೆಯನ್ನು ಕೈ ಬಿಡಲಾಯಿತು. ಭಾರತದಲ್ಲಿ ಸಾರ್ವಜನಿಕ

ಕಾರ್ಯನೀತಿಯೊಳಗೆ ಮಹಿಳೆ ಮತ್ತು ಭೂಮಿಯ ಹಕ್ಕಿನ ವಿಷಯಗಳನ್ನು ಒಳಗೊಳ್ಳುವ ಪ್ರಕ್ರಿಯೆಯು ಸರ್ಕಾರದ ವಿವಿಧ ಅಂಶಗಳ ಮಧ್ಯೆ ತೊಡಗಿಸುವುದು ಅತೀ ನಿಧಾನವಾಗಿದೆ. ಅಥವಾ ಮಂದಗತಿಯಾಗಿದೆ. ಇಂದು ಗಮನಾರ್ಹ ಪ್ರಗತಿ ಆದಾಗ್ಯೂ, ಸ್ವಯಂಸೇವಾ ಸಂಸ್ಥೆಗಳ ಪಾತ್ರದಿಂದ ಮತ್ತು ಮಹಿಳಾ ಚಳುವಳಿಯಿಂದ ಪ್ರಗತಿಯ ಹಾದಿಯಲ್ಲಿದ್ದರೂ ಮಹಿಳೆ ಮತ್ತು ಭೂಮಿಯ ಹಕ್ಕಿನ ವಿಷಯ ಅಂಚಿನ ವಿಷಯವಾಗಿ ಉಳಿದಿದೆ.

**ಒಂಬತ್ತನೆಯ ಪಂಚವಾರ್ಷಿಕ ಯೋಜನೆ (೧೯೯೭-೨೦೦೨)**

ಈ ಯೋಜನೆಯಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಪ್ರಮುಖ ಅಂಶಗಳೆಂದರೆ, ಹೆಣ್ಣು ಮಕ್ಕಳಿಗೆ ಪದವಿವರೆಗಿನ ಶಿಕ್ಷಣವನ್ನು ಉಚಿತವಾಗಿ ನೀಡುವುದು. ಹೊಸ ಆರ್ಥಿಕ ನೀತಿಯನ್ನು ಜಾರಿಗೊಳಿಸುವಾಗ ಮಹಿಳಾ ಕಾರ್ಮಿಕರು ಉದ್ಯೋಗ ಕಳೆದುಕೊಳ್ಳದಂತೆ ಎಚ್ಚರ ವಹಿಸುವುದು. ಸ್ವಸಹಾಯ ಗುಂಪುಗಳು ಎಂಬ ಹೊಸ ಗ್ರಾಮೀಣ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ಜಾರಿಗೊಳಿಸುವುದರ ಜೊತೆಗೆ ಭೂ ಒಡೆತನದ ಬಗ್ಗೆ ಈ ಯೋಜನೆಯು ಗಮನಹರಿಸಿದೆ. ಪುರುಷರಿಗಿಂತ ಮಹಿಳೆಯರೆ ಕೃಷಿಯನ್ನು ಹೆಚ್ಚಾಗಿ ಅವಲಂಬಿಸಿರುವರು. ಕಾರಣ ಬಡತನದಿಂದ ಹೊರಬರಲು ಪುರುಷರು ನಗರಗಳಿಗೆ ವಲಸೆ ಹೋಗುತ್ತಲಿದ್ದಾರೆ. ಇದರಿಂದ ಗ್ರಾಮೀಣ ಪ್ರದೇಶದ ಶೇ. ೨೦ರಷ್ಟು ಕುಟುಂಬಗಳಲ್ಲಿ ಮಹಿಳೆಯರೆ ಮುಖ್ಯಸ್ಥರಾಗಿದ್ದಾರೆ. ''೧೯೫೦ರ ದಶಕದವರೆಗೂ ಭೂ ಸುಧಾರಣಾ ಕಾಯ್ದೆಗಳನ್ನು ಮಹಿಳೆಯರ ಭೂ ಸ್ವಾಮ್ಯ ರಹಿತತೆ ಸಮಸ್ಯೆಯನ್ನು ಪರಿಹರಿಸಲು ಬಳಸಿರಲಿಲ್ಲ. ಭಾರತದಲ್ಲಿ ಭೂಮಿಯ ಅನುವಂಶಿಕ ಹಕ್ಕು ಮತ್ತು ಭೂ ಹಿಡುವಳಿ ಮಿತಿ ಕಾಯ್ದೆಗಳು ಮಹಿಳಾ ಅಸಮಾನತೆಯನ್ನು ಹುಟ್ಟು ಹಾಕಿವೆ.'' (ಒಡೆಯರ್ ಡಿ. ಹೆಗ್ಗಡೆ., ೨೦೦೬, ಪು ೨೪೩) ಇಲ್ಲಿಯೂ ಲಿಂಗ ತಾರತಮ್ಯವಾಗಿರುವುದನ್ನು ಗಮನಿಸಬಹುದು. ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಣೆಗೊಳಗಾದ ಮಹಿಳೆಯರ ಸಂಖ್ಯೆ ರಾಜ್ಯದಲ್ಲಿ ಸಾಕಷ್ಟಿದೆ. ಬಡತನದಲ್ಲಿ ಬಳಲುತ್ತಿರುವವರ ಸಂಖ್ಯೆಯಂತೂ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಬಡತನದಿಂದ ತಪ್ಪಿಸಿಕೊಳ್ಳಲು ಪುರುಷರು ನಗರಗಳತ್ತ ವಲಸೆ ಹೋಗುವುದರಿಂದ ಕುಟುಂಬದ ಭಾರವು ಮಹಿಳೆಯರ ಮೇಲೆ ಬೀಳುವುದರಿಂದ ಗ್ರಾಮೀಣ ಮಹಿಳೆಯರು ಕೃಷಿಯಲ್ಲಿ ಪುರುಷರಿಗಿಂತ ಹೆಚ್ಚಾಗಿ ಅವಲಂಬಿತರಾಗಿರುವರು. ಆದರೆ ಅತೀ ಕಡಿಮೆ ಸಂಖ್ಯೆಯಲ್ಲಿ ಮಹಿಳೆಯರು ಶಾಸನಾತ್ಮಕವಾಗಿ ಭೂಮಿಯ ಮೇಲೆ ಹಕ್ಕನ್ನು ಪಡೆದಿದ್ದಾರೆ. ಶಾಸನಾತ್ಮಕವಾಗಿ ಭೂಮಿಯನ್ನು ಪಡೆದಿದ್ದವರಲ್ಲಿಯೇ ಬೆರಳೆಣಿಕೆಯಷ್ಟು ಮಹಿಳೆಯರು ಮಾತ್ರ ಭೂ ಒಡೆತನದ ಮೇಲೆ ನಿಯಂತ್ರಣವನ್ನು ಹೊಂದಿದ್ದಾರೆ. ನಮ್ಮ ಪಿತೃ ಪ್ರಧಾನ ಸಮಾಜವು ಮಹಿಳೆಯರನ್ನು ಅಪಾರ ಸಂಖ್ಯೆಯಲ್ಲಿ ಭೂ ಮಾಲೀಕತ್ವದಿಂದ ಹೊರತುಪಡಿಸಿದೆ. ಆದುದರಿಂದ ಮಹಿಳೆಯರಿಗೆ ಭೂ ಒಡೆತನ ಮತ್ತು ಅದರ ಮೇಲೆ ಪರಿಣಾಮಕಾರಿಯಾದ ನಿಯಂತ್ರಣ ಹೊಂದುವಂತೆ ಮಾಡುವುದೇ ಈ ಯೋಜನೆಯ ಪ್ರಮುಖ ಅಂಶವಾಗಿದೆ.

**ಹತ್ತನೆಯ ಪಂಚವಾರ್ಷಿಕ ಯೋಜನೆ (೨೦೦೨-೨೦೦೭)**

ಹತ್ತನೆ ಪಂಚವಾರ್ಷಿಕ ಯೋಜನೆಯ ವಿಕಾಸದಲ್ಲಿ ಒಂದು ಮಹತ್ವದ ಹೆಜ್ಜೆ ಎಂದರೆ, ಭಾರತಕ್ಕೆ ಸ್ವಾತಂತ್ರ್ಯ ದೊರೆತು ೫೭ ವರ್ಷಗಳಾಗಿವೆ. ಈ ಅವಧಿಯಲ್ಲಿ ನಮ್ಮ ದೇಶದ ಸಾಮರ್ಥ್ಯಗಳು, ಸವಾಲುಗಳು ಮತ್ತು ಅನಿವಾರ್ಯಗಳು ಅತ್ಯಂತ ಗಂಭೀರ ಬದಲಾವಣೆಗೊಳಪಟ್ಟಿವೆ. ಇದುವರೆಗಿನ ಯೋಜನಾ ವಿಧಿ ವಿಧಾನಗಳು ಆರ್ಥಿಕತೆಯ ಬದಲಾಗುವ ಅಗತ್ಯತೆಗಳನ್ನು ಪೂರೈಸಲೆತ್ನಿಸಿವೆ. ಈ ಪರಂಪರೆಯನ್ನು ಮುಂದುವರಿಸಲು ಯೋಜನೆ ಯತ್ನಿಸಿದೆ. ರಾಜಕೀಯ ಕ್ಷೇತ್ರದಲ್ಲಿ ಸಾಧಿಸಿರುವಷ್ಟು ಪ್ರಜಾತಾಂತ್ರಿಕರಣವು ಆರ್ಥಿಕ ಕ್ಷೇತ್ರದಲ್ಲಿ ಸಾಧಿಸಿಲ್ಲ. ನಮ್ಮ ಅನೇಕ ಅಭಿವೃದ್ಧಿ ಸಂಸ್ಥೆಗಳು ಪಿತೃಪ್ರಧಾನ ಪೋಷಕ ನಡವಳಿಕೆಯನ್ನೇ ಪ್ರಕಟಪಡಿಸುತ್ತಿವೆ. ಆದುದರಿಂದ

ಇದು ಇಂದು ಅನಾಯಕತ್ವಕ್ಕೆ ಕಾರಣವಾಗುತ್ತಿವೆ. ಈ ಯೋಜನೆಯಲ್ಲಿ ಕೃಷಿ ಅಭಿವೃದ್ಧಿಯನ್ನು ಅತ್ಯಂತ ಮಹತ್ವದ ಅಂಶವೆಂದು ಪರಿಗಣಿಸಲಾಗಿದೆ.

**ಹನ್ನೊಂದನೆಯ ಪಂಚವಾರ್ಷಿಕ ಯೋಜನೆ (೨೦೦೭-೨೦೧೨)**

ಹನ್ನೊಂದನೆ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯರಿಗೆ ಆರ್ಥಿಕ, ಸಾಮಾಜಿಕ ಮತ್ತು ರಾಜನೀತಿಕವಾಗಿ ಜೊತೆಯಾಗಿ ಸಬಲೀಕರಿಸುವಂತಹ ಕಾಯ್ದೆಗಳು ಮತ್ತು ಸಿದ್ಧಾಂತಗಳು ಅತ್ಯಗತ್ಯವಾಗಿವೆ. ಇವುಗಳ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದೂ ಕೂಡಾ ಅಗತ್ಯವಾಗಿದೆ. ಒಮ್ಮೆ ಇಂತಹ ಅಭಯವನ್ನು ಕೊಡುವಂತಹ ಕಾಯಿದೆಗಳು ಮತ್ತು ಕಾರ್ಯಕ್ರಮಗಳು ಜಾರಿಗೆ ಬಂದು ವ್ಯವಸ್ಥಿತ ರೂಪಕ್ಕೆ ಬಂದರೆ ಆವಾಗ ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಯು ಸಾಧ್ಯವಾಗುತ್ತದೆ. ಇದು ಮಹಿಳೆಯರನ್ನು ನಿಜವಾಗಿಯೂ ಸಬಲೀಕರಣಗೊಳಿಸುತ್ತದೆ. ಇದು ಸಬಲೀಕರಣದ ಸಿದ್ಧಾಂತವಾಗಿದ್ದು ಮತ್ತು ಹನ್ನೊಂದನೆಯ ಪಂಚವಾರ್ಷಿಕ ಯೋಜನೆಯ ಧ್ಯೇಯವೂ ಆಗಿದೆ. ಮಹಿಳೆಯರ ಆರೋಗ್ಯ, ಪೌಷ್ಟಿಕತೆ, ಶಿಕ್ಷಣ, ಆದಾಯ ಅಭಿವೃದ್ಧಿ ಚಟುವಟಿಕೆಗಳು, ನೆಮ್ಮದಿ ಮತ್ತು ಸ್ತ್ರೀಯರಿಗೆ ವಸತಿಗಳಲ್ಲದೆ ಪೌಷ್ಟಿಕತೆ ಮತ್ತು ಲಿಂಗ, ಆರೋಗ್ಯ ಮತ್ತು ಲಿಂಗದ ವಿಷಯಗಳನ್ನು ಹೆಚ್ಚು ಗಮನಿಸುವ ಅಂಶಗಳನ್ನು ಹೊಂದಿದೆ.

ಭಾರತದಲ್ಲಿ ಅಭಿವೃದ್ಧಿ ಕಾರ್ಯಕ್ರಮ ಅಥವಾ ಯೋಜನೆಗಳಲ್ಲಿ ಮಹಿಳೆಯರ ಅಭಿವೃದ್ಧಿಯೆನ್ನುವುದು ಆನುಷಂಗಿಕ ಸಂಗತಿಯಾಗಿದೆಯೇ ವಿನಃ ಅದು ಆದ್ಯತೆಯ ಸಂಗತಿಯಾಗಿಲ್ಲ. ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರನ್ನು ಸಾಮಾಜಿಕ ಸಂಗತಿಯಾಗಿ, ಅಭಿವೃದ್ಧಿಯ ನಿಯೋಗಿಗಳಾಗಿ ಗುರುತಿಸದೇ ಜೈವಿಕ ನಿಯತಿ ಚೌಕಟ್ಟನ್ನು ಹೊಂದಿರುವುದು ಕಂಡುಬರುತ್ತದೆ. ಅಭಿವೃದ್ಧಿ ಸಿದ್ಧಾಂತ ಅಧ್ಯಯನಗಳನ್ನು ಆಧರಿಸಿ ರೂಪಿಸಲಾಗಿರುವ ಯೋಜನೆಗಳು ಮಹಿಳೆಯರನ್ನು ಕೇವಲ ಅನುಕಂಪದ ಆಧಾರದಿಂದಲೇ ನೋಡಲಾಗಿದೆ. ಮಹಿಳೆಯರ ಬದುಕು ಅವರ ಸಾಮಾಜಿಕ ಸ್ಥಾನಮಾನ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಬೇಕು ಎನ್ನುವುದು ಅಭಿವೃದ್ಧಿ ಕಾರ್ಯಕ್ರಮದ ಉದ್ದೇಶವಾಗಿರಲಿಲ್ಲ. ಏಕೆಂದರೆ ಯಾವುದೇ ಸಾಮರ್ಥ್ಯವಿಲ್ಲದ ಮಹಿಳೆಯರಿಗೆ ಅಭಿವೃದ್ಧಿಯಲ್ಲಿ ಪಾಲು ಕೊಡಲು ಯಾವುದೇ ಹಕ್ಕು ಇಲ್ಲ ಎಂಬ ನಂಬಿಕೆ ಸಮಾಜದಲ್ಲಿ ನೆಲೆಗೊಂಡಿದೆ.

ಪ್ರತಿಯೊಂದು ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರ ಅಭಿವೃದ್ಧಿಯನ್ನು ಬಯಸಿದರೂ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಮಾತ್ರ ಪ್ರಸ್ತಾಪಗೊಂಡಿದೆ. ಮೊದಲಿನ ಐದು ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರ ಶಿಕ್ಷಣ, ಆರೋಗ್ಯಕ್ಕೆ ಹೆಚ್ಚು ಮಹತ್ವ ಕೊಡಲಾಗಿತ್ತು. ಪ್ರತಿ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಯ ಅಭಿವೃದ್ಧಿಯನ್ನು ಬಯಸಿತೇ ಹೊರತಾಗಿ ಕೃಷಿ ಕ್ಷೇತ್ರದಲ್ಲಿ ಮಹಿಳೆಯರ ಕೊಡುಗೆಗಳನ್ನು ನಿರ್ಲಕ್ಷಿಸಲಾಯಿತು. ಆರ್ಥಿಕ ಕಾರ್ಯಕ್ರಮಗಳಲ್ಲಿನ ಅಭಿವೃದ್ಧಿಯ ಫಲದಿಂದ ವಂಚಿತರಾದರು, ಸರ್ಕಾರ ತನ್ನ ಕಾರ್ಯಕ್ರಮಗಳಲ್ಲಿ ಕೂಡ ಮಹಿಳೆಯರನ್ನು ಪ್ರಮುಖರನ್ನಾಗಿ ಮಾತ್ರ ಪರಿಗಣಿಸಲಿಲ್ಲ. ಈ ಕಾರಣಗಳಿಂದ ವ್ಯವಸಾಯ ಕ್ಷೇತ್ರದಲ್ಲಿ ಮಹಿಳೆಯರು ದುಸ್ಥಿತಿಯಲ್ಲಿರುವಂಥ ಸ್ಥಿತಿಯಲ್ಲಿ ಅವರು ಭೂ ಒಡೆತನ ಪಡೆಯುವಲ್ಲಿಯೂ ವಿಫಲರಾದರು. ಅಭಿವೃದ್ಧಿ ಯೋಜನೆಗಳು ಮಹಿಳೆಯರನ್ನು ಮೇಲ್ನೋಟಕ್ಕೆ ಪರಿಭಾವಿಸುವಂತೆ ಕಂಡುಬಂದರೂ ಮಹಿಳೆಯರಿಗೆ ಆರ್ಥಿಕ ಶಕ್ತಿ ಒದಗಿಸಿ ಕೃಷಿಯಲ್ಲಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಅವರ ಸ್ಥಿತಿಯನ್ನು ಉತ್ತಮಪಡಿಸುವ ದೃಷ್ಟಿಯಿಂದ ಮಹಿಳೆಯರಿಗಾಗಿ ಪ್ರತ್ಯೇಕ ಯೋಜನೆಗಳನ್ನು ರೂಪಿಸಲಾಗಿದೆ. ಕಲ್ಯಾಣಾಭಿವೃದ್ಧಿ ಪ್ರಸ್ತಾಪದೊಂದಿಗೆ ಮಹಿಳೆಯರ ಕಲ್ಯಾಣಾಭಿವೃದ್ಧಿ ಕಾರ್ಯಗಳು ನಡೆಯುತ್ತವೆ

ಎಂದು ನಂಬಲಾಗಿತ್ತು. ಆದರೆ ಬಡತನ ನಿರ್ಮೂಲನೆ ಹಾಗೂ ಭೂ ಸುಧಾರಣೆಗಳಲ್ಲಿ ಮಹಿಳೆಯರನ್ನು ನಿರ್ಲಕ್ಷಿಸಲಾಗಿದೆ. ಸರ್ಕಾರ ಮಹಿಳೆಯರಿಗೆ ಆಸ್ತಿ ಅಧಿಕಾರವನ್ನು ಕಾನೂನಿನ ಮೂಲಕ ಒದಗಿಸಿದರೂ ಮಹಿಳೆಯರಿಗೆ ಆಸ್ತಿ ದೊರೆಯುತ್ತಿಲ್ಲ. ಅಭಿವೃದ್ಧಿ ಯೋಜನೆಗಳು ಮಹಿಳೆಯರನ್ನು ಸೇರಿಸಿಕೊಂಡು ಅನೇಕ ಯೋಜನೆಗಳನ್ನು ಜಾರಿಗೆ ತಂದರೂ ನಿರೀಕ್ಷಿತ ಫಲಿತಾಂಶ ಮಹಿಳೆಯರಿಗೆ ದಕ್ಕುತ್ತಿಲ್ಲ. ಯೋಜನೆಗಳಲ್ಲಿ ಮಹಿಳೆಯರಿಗೆ ಆದ್ಯತೆ ನೀಡಿದರೂ ಅದು ಕಾರ್ಯರೂಪದಲ್ಲಿ ಬರದೇ ಹೋದದ್ದರಿಂದ ಕೃಷಿ ಮಹಿಳೆಯ ಒಳಿತನ್ನೇ ಹೇಳಿದರೂ ಆ ಒಳಿತು ಮಹಿಳೆಯರಿಗೆ ದಕ್ಕುತ್ತಿಲ್ಲ. ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಭೂ ಒಡೆತನ ಕುರಿತು ಪ್ರಸ್ತಾಪಿಸಿದರೂ ಅದು ಕೊನೆಯ ವಿಷಯವಾಗಿ ಮಾತ್ರ ಪ್ರಸ್ತಾಪಿಸಲಾಗಿದೆ. ಏಳು ಮತ್ತು ಎಂಟನೆಯ ಪಂಚವಾರ್ಷಿಕ ಯೋಜನೆಗಳಲ್ಲಿ ಭೂ ಸುಧಾರಣ ನೀತಿಯ ಮೂಲಕ ಭೂಮಿಯನ್ನು ಹಂಚಿದರು. ಪತಿ-ಪತ್ನಿಯರ ಹೆಸರಲ್ಲಿ ಜಂಟಿಯಾಗಿ ಹಂಚಿದ ಸರಕಾರಿ ಭೂಮಿಯನ್ನು ಸಹ ಪತಿಯೇ ಉಳುಮೆ ಮಾಡುತ್ತಿದ್ದು, ಪತ್ನಿಯನ್ನು ಅದರಿಂದ ದೂರವಿರಿಸಿದನು. ಅರ್ಥಶಾಸ್ತ್ರದಲ್ಲಾಗಲಿ, ಸಮಾಜ ಶಾಸ್ತ್ರದಲ್ಲಾಗಲಿ ಕುಟುಂಬದಲ್ಲಿ ಮಹಿಳೆಯರ ಪಾತ್ರ ಮನೆಗಷ್ಟೇ ಸೀಮಿತವಾಗಿರುವುದನ್ನು ಪ್ರತಿಪಾದಿಸಲಾಗಿದೆ. ಮಹಿಳಾ ಆಯೋಗಗಳು ಮಾಡಿದ ಎಲ್ಲ ಬೇಡಿಕೆಗಳು ಕಾಯ್ದೆ ರೂಪದಲ್ಲಿ ಬಂದರೂ ಕೂಡ ಇಲ್ಲಿಯವರೆಗೆ ಅವು ಕಾರ್ಯ ರೂಪಕ್ಕೆ ಬಂದಿಲ್ಲ. ಮಹಿಳಾ ಆಯೋಗವೇ ಆಗಲಿ ಅಥವಾ ಸರ್ಕಾರದ ಯೋಜನೆಗಳೇ ಆಗಲಿ ಕಾರ್ಯರೂಪಕ್ಕೆ ಬರಬೇಕಾದರೆ ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಮಹಿಳೆಯನ್ನು ಸದಸ್ಯಳಾಗಿ ಗುರುತಿಸಿದಾಗ ಮಾತ್ರ ಸಾಧ್ಯವಾಗುವುದು.

## ಉಲ್ಲೇಖಗಳು


೧. ಚಂದ್ರಶೇಖರ ಟಿ.ಆರ್., **ಮಹಿಳೆ ಆರ್ಥಿಕತೆ ಮತ್ತು** ಅಭಿವೃದ್ಧಿ, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅನಂತರಾಮಯ್ಯ ಎನ್., **ಭಾರತದ ಗ್ರಾಮೀಣ** ಅಭಿವೃದ್ಧಿ ಒಂದು ವಿಮರ್ಶೆ, ೧೯೯೩, ಅಂಬುಜಾ ಪ್ರಕಾಶನ, ಬೆಂಗಳೂರು.

೩. Bina Agarwal, **A field of one's own** (Gender & Land Right in South Asia), 1994, CAMBRIDGE UNIVERSITY PRESS.

೪. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, **ಭಾರತದ ಆರ್ಥಿಕಾ**ಭಿವೃದ್ಧಿ, ೨೦೦೬, ಅರ್ಜುನ ಪಬ್ಲಿಷಿಂಗ್ ಹೌಸ್, ರಾಮಕೃಷ್ಣ ನಗರ, ಮೈಸೂರು.


* * *

# ಅಧ್ಯಾಯ - ಆರು

# ರೈತ ಚಳುವಳಿಗಳು ಮತ್ತು ಮಹಿಳೆ

೬.೧ ಭಾರತದ ಪ್ರಮುಖ ರೈತ ಚಳುವಳಿಗಳು ಮತ್ತು ಅದರಲ್ಲಿ ಮಹಿಳೆಯರ ಪಾತ್ರ.

೬.೧.೧. ಮಹಾರಾಷ್ಟ್ರದ ವಾರ್ಲಿ ರೈತ ಚಳುವಳಿ

೬.೧.೨. ಬಂಗಾಲದ ತೇಭಾಗ ರೈತ ಚಳುವಳಿ

೬.೧.೩. ಹೈದರಾಬಾದ್ ತೆಲಂಗಾಣ ರೈತ ಹೋರಾಟ

೬.೧.೪. ಭೂದಾನ ಚಳುವಳಿ

೬.೨. ಕರ್ನಾಟಕ ರಾಜ್ಯದ ಪ್ರಮುಖ ರೈತ ಚಳುವಳಿಗಳು ಮತ್ತು ಅದರಲ್ಲಿ ಮಹಿಳೆಯರ ಪಾತ್ರ.

೬.೨.೧. ಕಾಗೋಡು ಸತ್ಯಾಗ್ರಹ

೬.೨.೨. ಹೆಬ್ಬಳ್ಳಿ ಭೂ ಹೋರಾಟ

೬.೨.೩. ದಲಿತ ಸಂಘರ್ಷ ಸಮಿತಿಯ ಭೂ ಹೋರಾಟ

೬.೨.೪. ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿ ಕಾರ್ಮಿಕರ ಸಂಘದ ರಾಯಚೂರು ಹೋರಾಟ

೬.೨.೫. ಕರ್ನಾಟಕ ಪ್ರಾಂತ ರೈತ ಸಂಘದ ಚಳುವಳಿಗಳು

೬.೨.೬. ಬಾಗೂರು-ನವಿಲೆ ರೈತ ಹೋರಾಟ

## ರೈತ ಚಳುವಳಿಗಳು ಮತ್ತು ಮಹಿಳೆ

ದೇಶದ ಇತಿಹಾಸದುದ್ದಕ್ಕೂ ರೈತ ಚಳುವಳಿಗಳು ನಡೆದಿವೆ ಮತ್ತು ನಡೆಯುತ್ತಿವೆ. ಭಾರತದ ಸ್ವಾತಂತ್ರ್ಯ ಹೋರಾಟದ ಹೆಜ್ಜೆಗುರುತುಗಳ ಹಾಗೆಯೇ ರೈತ ಚಳುವಳಿಗಳ ಹೆಜ್ಜೆಗುರುತುಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿವೆ. ಕೆಲವು ರೈತ ಚಳುವಳಿಗಳು ಸ್ವಾತಂತ್ರ್ಯ ಚಳುವಳಿಯೊಂದಿಗೆ ಬೆರೆತುಹೋಗಿವೆ. ದೇಶದ ಉದ್ದಗಲಕ್ಕೂ ನಡೆದ ರೈತ ಚಳುವಳಿಗಳು ಏಕರೂಪ ಹೊಂದಿರದೆ ಬೇರೆ ಬೇರೆ ಸಮಸ್ಯೆಗಳ ವಿರುದ್ಧ ಆಗಿರುವುದು ಕಂಡು ಬರುತ್ತದೆ. ಭಾರತದಲ್ಲಿಯ ರೈತ ಹೋರಾಟಗಳನ್ನು ಗಮನಿಸಿ ಕ್ಯಾಥಲೀನ್ ಗಾಫ್ ಅವರು ವಿವಿಧ ರೀತಿಯ ರೈತ ಚಳುವಳಿಯ ಉದ್ದೇಶ, ವಿಚಾರಧಾರೆ ಮತ್ತು ಸಂಘಟನೆಯನ್ನು ಆಧರಿಸಿ ಚಳುವಳಿಗಳಲ್ಲಿ ಐದು ಪ್ರಕಾರಗಳನ್ನು ಗುರುತಿಸಿರುವರು. ಅವುಗಳು ಇಂತಿವೆ,

''೧. ಪುನರ್ ಸ್ಥಾಪನಾ ದಂಗೆಗಳು (Restorative Rebellions)

೨. ಮತೀಯ ಚಳುವಳಿಗಳು (Religious Movements)

೩. ಸಮಾಜಹಿತಾಸಕ್ತ ಡಕಾಯತಿಗಳು (Social banditri)

೪. ಭಯೋತ್ಪಾದಕ ಪ್ರತಿಕಾರಗಳು (Terrorist Vengeance)

೫. ಜನಸಮೂಹ ಬಂಡಾಯಗಳು (Mass insurrections).'' (ಅಶೋಕ್ ಕುಮಾರ್, ೨೦೦೧, ಪು ೯೧)

''ಪುನಸ್ಥಾಪನಾ ದಂಗೆಗಳು ಆಡಳಿತ ಅಥವಾ ಸಮಾಜ ವ್ಯವಸ್ಥೆಯನ್ನು ಪುನಸ್ಥಾಪನೆ ಮಾಡುವ ಹೋರಾಟಗಳು. ಹಳೆಯ ಸಂಬಂಧಗಳನ್ನು ಸವಲತ್ತುಗಳನ್ನು ಮರಳಿ ಪಡೆಯಲು ಅವು ಯತ್ನಿಸುತ್ತವೆ. ಉದಾಹರಣೆಗೆ ಸಂತಾಲ ಆದಿವಾಸಿಗಳು ಬ್ರಿಟೀಷರನ್ನು ಹೊಡೆದೋಡಿಸಿ ತಮ್ಮ ಪಾರಂಪರಿಕ ಸ್ಥಾನಮಾನಗಳನ್ನು ಮರಳಿ ಪಡೆಯಲು ೧೯ನೇ ಶತಮಾನದಲ್ಲಿ ದಂಗೆಗಳನ್ನು ನಡೆಸಿದರು.

ಧಾರ್ಮಿಕ ಚಳುವಳಿಗಳೆಂದರೆ ಧಾರ್ಮಿಕ ಮುಖಂಡರನ್ನು ಅಥವಾ ಉದ್ದೇಶಗಳನ್ನು ಮುಂದಿಟ್ಟುಕೊಂಡು ನಡೆಸಿದ ಹೋರಾಟಗಳು. ಕೇರಳದ ಮಲಬಾರಿನಲ್ಲಿ ಮಾಪಿಳ್ಳೆ ಮುಸಲ್ಮಾನ ರೈತರು ಥಂಗಲ್ ಎಂಬ ತಮ್ಮ ಸ್ಥಳೀಯ ಧರ್ಮಗುರುಗಳ ನೇತೃತ್ವದಲ್ಲಿ ಹಿಂದೂ ಭೂ ಮಾಲೀಕರ ಹಾಗೂ ಬ್ರಿಟೀಷ್ ಆಡಳಿತೆಯ ವಿರುದ್ಧ ನಡೆಸಿದ ಬಂಡಾಯಗಳು ಈ ಮಾದರಿಯವು.

ಸಮಾಜನಿಷ್ಠ ದರೋಡೆಗಳೆಂದರೆ ಶ್ರೀಮಂತ ಭೂಮಾಲೀಕರ ಅಥವಾ ಜಮೀನ್ದಾರರ ಸಂಪತ್ತನ್ನು ಕೊಳ್ಳೆಹೊಡೆದು ಅದನ್ನು ಬಡ ಹಳ್ಳಿಗರಿಗೆ ಹಂಚುವ ದರೋಡೆಗಳು. ೧೭ ಮತ್ತು ೧೮ನೆಯ ಶತಮಾನದಲ್ಲಿ ಮಧ್ಯ ಭಾರತದ ಠಕ್ಕರು ನಡೆಸಿದ ದರೋಡೆಗಳು, ಸನ್ಯಾಸಿ ಫಕೀರ ದರೋಡೆಗಳು, ಹಳೆಯ ಮದ್ರಾಸ್ ರಾಜ್ಯದಲ್ಲಿ ಕಳ್ಳರ್ ಜನಾಂಗದವರು ಎರಡು ಶತಮಾನಗಳ ಕಾಲ ನಡೆಸಿದ ದರೋಡೆಗಳು, ಆಂಧ್ರದ ಕರ್ನೂಲಿನಲ್ಲಿ ನರಸಿಂಹ ರೆಡ್ಡಿ ತಂಡದವರು ೧೮೪೬ - ೪೭ರಲ್ಲಿ ನಡೆಸಿದ ದರೋಡೆಗಳು ಬಹುತೇಕ ಸಮಾಜ ನಿಷ್ಠ ದರೋಡೆಗಳಾಗಿದ್ದವು.

ಮುಯ್ಯಿಗೆ ಮುಯ್ಯಿ, ಹಿಂಸೆಗೆ ಹಿಂಸೆ ಎಂಬ ತತ್ವದ ಮೇಲೆ ನಡೆಯುವ, ತಾವು ವೈರಿಗಳೆಂದು ಭಾವಿಸುವ ಜನರನ್ನು ಹಿಂಸಿಸುವ ಅಥವಾ ಕೊಲ್ಲುವ ಹೋರಾಟಗಳನ್ನು ಭಯೋತ್ಪಾದಕ ಪ್ರತೀಕಾರಗಳೆನ್ನಬಹುದು. ೧೯೬೭ರ ನಕ್ಸಲೀಯ ಚಳುವಳಿಗಳಲ್ಲಿ ಹಲವು ಭಯೋತ್ಪಾದಕ ಪ್ರಕರಣಗಳು ನಡೆದದ್ದನ್ನು ನಾವು ಕಾಣಬಹುದು.

ಜನತಾ ವಿಪ್ಲವಗಳು ದೀರ್ಘಕಾಲದಿಂದ ಪರಿಹಾರ ಕಾಣದೇ ಇರುವ ಸಮಸ್ಯೆಗಳಿಂದ ಹುಟ್ಟುತ್ತವೆ. ಅವು ಏಕಾಏಕಿ ಸ್ಫೋಟಿಸುವ ಗುಣವನ್ನು ಹೊಂದಿವೆ. ಇಂಥ ವಿಪ್ಲವಗಳು ಪ್ರಾರಂಭದ ದಿಸೆಯಲ್ಲಿ ಮುಷ್ಕರ, ಅಸಹಕಾರ, ಘೋಷಣೆ, ಬಹಿಷ್ಕಾರಗಳಿಂದ ರೂಪತಾಳುತ್ತವೆ. ಬಡ್ಡಿ ಹೊರೆಯ ವಿರುದ್ಧ ಡೆಕ್ಕನ್ ಪ್ರದೇಶದಲ್ಲಿ ಅಥವಾ ಬಿಟ್ಟಿಬೇಗಾರಿ ವಿರುದ್ಧ ತೆಲಂಗಾಣದಲ್ಲಿ ನಡೆದ ಚಳುವಳಿಗಳು ಈ ಬಗೆಯವು.

ಬಿಹಾರದ ಚಂಪಾರಣ್ಯ ಸತ್ಯಾಗ್ರಹ, ಗುಜರಾತ ಖೇಡಾ ಮತ್ತು ಬಾರ್ಡೋಲಿ ಸತ್ಯಾಗ್ರಹ ಇತ್ಯಾದಿ ಉದಾರ ಸುಧಾರಣಾವಾದಿ ಚಳುವಳಿಗಳಾಗಿವೆ.'' (ಉದ್ಧೃತ: ನಾಗೇಶ್ ಎಚ್.ವಿ., ೧೯೯೯, ಪು ೧೧,೧೨)

ಈ ಎಲ್ಲಾ ಚಳುವಳಿಗಳ ತಿರುಳು ಒಂದೇ ಆಗಿತ್ತು. ರೈತರು ತಮಗಾದ ಅನ್ಯಾಯದ ವಿರುದ್ಧ ಹೋರಾಡಿ, ಶೋಷಣೆಯ ಜೀವನದಿಂದ ಹೊರಬರುವುದಾಗಿತ್ತು. ಪ್ರಸ್ತುತ ಈ ಅಧ್ಯಾಯದಲ್ಲಿ ರೈತ ಚಳುವಳಿಗಳನ್ನು ಎರಡು ಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ೧. ಭಾರತಕ್ಕೆ ಸಂಬಂಧಿಸಿದ ರೈತ ಚಳುವಳಿಗಳು. ೨. ಕರ್ನಾಟಕಕ್ಕೆ ಸಂಬಂಧಿಸಿದ ರೈತ ಚಳುವಳಿಗಳೆಂದು, ಕೆಲವು ಪ್ರಮುಖ ರೈತ ಚಳುವಳಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಮುಖ ರೈತ ಚಳುವಳಿಗಳಲ್ಲಿ ಮಹಿಳೆಯರ ಪಾತ್ರ ಮತ್ತು ಪರಿಣಾಮಗಳ ಬಗ್ಗೆ ಇಲ್ಲಿ ವಿಶ್ಲೇಷಿಸಲಾಗಿದೆ.

**ರೈತ ಚಳುವಳಿಗಳಿಗೆ ಕಾರಣಗಳು**

ಭಾರತವು ಕೃಷಿ ಪ್ರಧಾನ ದೇಶವಾಗಿರುವುದರಿಂದ ಬೃಹತ್ ಸಂಖ್ಯೆಯಲ್ಲಿ ರೈತರನ್ನು ಹೊಂದಿದೆ. ಇದರಲ್ಲಿ ಮಹಿಳೆಯರು ಮತ್ತು ಪುರುಷರು ಸೇರಿರುವರು. ಬೇರೊಂದು ವರ್ಗದ ಜನರು ಮಾತ್ರ ಅಧಿಕಾರ ಸ್ಥಾನಮಾನ ಸವಲತ್ತುಗಳನ್ನು ಪಡೆದುಕೊಂಡು ರೈತ ವರ್ಗದವರು ಈ ಎಲ್ಲ ಸವಲತ್ತುಗಳಿಂದ ವಂಚಿತರಾದಾಗ ಆ ಸವಲತ್ತುಗಳನ್ನು ಪಡೆಯುವ ಸಲುವಾಗಿ ರೈತರು ಸಂಘಟಿತರಾಗಿ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಹೋರಾಟವನ್ನು ಪ್ರಾರಂಭಿಸಿದರು. ರೈತ ಚಳುವಳಿಗೆ ಕಾರಣಗಳೆಂದರೆ, ''೧. ರೈತನೇ ಹೊಲದ ಒಡೆಯನಾಗಿದ್ದ ರೈತವಾರಿ ಪ್ರದೇಶಗಳಲ್ಲಿ ಮಿತಿಮೀರಿದ ಕಂದಾಯದ ಹೊರೆ, ನೀರಿನ ತೆರಿಗೆಯ ಏರಿಕೆ, ಅಭಾವದ ಕಾಲದಲ್ಲಿ ಕಂದಾಯದ ಕಡ್ಡಾಯ ವಸೂಲಿ ಇಂಥವು ರೈತರಿಗೆ ಎದುರಾದ ಸಮಸ್ಯೆಗಳು ೨. ಜಮೀನ್ದಾರಿ ಪ್ರದೇಶಗಳಲ್ಲಿ ಜಮೀನ್ದಾರ ಮತ್ತು ರೈತರ ನಡುವೆ ಉತ್ಪಾದನೆಯು ಯಾವ ಪ್ರಮಾಣದಲ್ಲಿ ಹಂಚಿಕೆಯಾಗಬೇಕು ಎಂಬುದು, ತನ್ನ ಪಾಲನ್ನು ಹೆಚ್ಚಿಸಿಕೊಳ್ಳಲು ಜಮೀನ್ದಾರರಿಗೆ ಹಕ್ಕು ಇದೆಯೇ ಎಂಬುದು, ಒಕ್ಕಲೆಬ್ಬಿಸುವುದು, ರೈತನಿಂದ

ಜಮೀನ್ದಾರ ನಿರೀಕ್ಷಿಸುತ್ತಿದ್ದ ಕಾಣಿಕೆ ಹಾಗೂ ಬಿಟ್ಟಿ ಕೆಲಸಗಳು ಮುಂತಾದುವು ಮುಖ್ಯ ಸಮಸ್ಯೆಗಳು. ೩. ಬ್ರಿಟೀಷ್ ವಾಣಿಜ್ಯ ಹಿತಾಸಕ್ತಿಗಳು ರೈತರಿಗೆ ಬಲವಂತವಾಗಿ ಕೆಲವು ಬೆಳೆಗಳನ್ನು ಬೆಳೆಯುವಂತೆ ಹೇರಿದ ಒತ್ತಾಯಗಳು. ಅವರು ನೀಡುತ್ತಿದ್ದ ಅತ್ಯಲ್ಪ ಬೆಲೆ, ಮಾಡುತ್ತಿದ್ದ ವಂಚನೆಗಳು.'' (ಶಂಕರನಾರಾಯಣರಾವ್ ಎನ್. ಪಿ., ೧೯೯೧, ಪು ೨೪೦) ಈ ಎಲ್ಲಾ ಶೋಷಣೆಗಳನ್ನು ದಿಕ್ಕರಿಸಿ ರೈತರು ಹೋರಾಟ ಮಾಡಿರುವುದನ್ನು ಕಾಣಬಹುದು. ಬ್ರಿಟೀಷರ ಕಾಲದಲ್ಲಿ ಜಾರಿಗೆ ಬಂದಂಥ ಜಮೀನ್ದಾರಿ ಪದ್ಧತಿ, ಇನಾಂದಾರರು, ಜಹಗೀರ್‌ದಾರರಂಥ ಮಧ್ಯವರ್ತಿಗಳು ರೈತರಿಗೆ ಕಿರುಕುಳ ಕೊಡುತ್ತಿದ್ದರು. ರೈತ ಪುರುಷರ ಜೊತೆಗೆ ಮಹಿಳೆಯರನ್ನು ಸಹ ಹಿಂಸಿಸುತ್ತಿದ್ದರು. ಮಹಿಳೆಯರು ಸಹ ಪುರುಷರಂತೆ ಬಿಟ್ಟಿ ಚಾಕರಿ ಮಾಡಬೇಕಿತ್ತು. ಮತ್ತು ರೈತ ಮಹಿಳೆಯರನ್ನು ಭೋಗದ ವಸ್ತುವಾಗಿ ಕಾಣುತ್ತಿದ್ದರು ಈ ಭೂಮಾಲೀಕರು. ಜಮೀನ್ದಾರಿ ಪದ್ಧತಿಯಿಂದ ಭೂಮಾಲೀಕರ ವರ್ಗವು ಹುಟ್ಟಿಕೊಂಡು ಭೂಮಿಯು ಜಮೀನ್ದಾರರ ಪಾಲಾಗಿ ಕೃಷಿಕರು ಗೇಣಿ ರೈತರಾಗಬೇಕಾಯಿತು. ಹೀಗೆ ಬ್ರಿಟೀಷರ ಕಾಲದಲ್ಲಿ ರೈತರು ಅನೇಕ ರೀತಿಯಿಂದ ಶೋಷಿತರಾಗಿರುವುದರಿಂದ ರೈತ ಮಹಿಳೆಯರನ್ನೊಳಗೊಂಡು ಚಳುವಳಿಯನ್ನು ಪ್ರಾರಂಭಿಸಬೇಕಾಯಿತು. ಬ್ರಿಟೀಷರ ಕಾಲದಲ್ಲಿ ಭೂಮಾಲೀಕರ ಶೋಷಣೆಗೆ ಒಳಗಾದವರು ಅಧಿಕವಾಗಿ ಮಹಿಳೆಯರು ಇದ್ದುದರಿಂದ ಇವರು ಪುರುಷರ ಜೊತೆಗೂಡಿ ಚಳುವಳಿಯಲ್ಲಿ ಭಾಗವಹಿಸಿದರು. ಇದು ಸ್ವಾತಂತ್ರ್ಯ ಪೂರ್ವದ ಸ್ಥಿತಿಯಾದರೆ ಸ್ವಾತಂತ್ರ್ಯದ ನಂತರವು ಸಹ ರೈತರು ಅನೇಕ ಸಮಸ್ಯೆಗಳಿಂದ ಬಳಲುತ್ತಿದ್ದರು. ಸ್ವಾತಂತ್ರ್ಯ ದೊರೆತಿದ್ದರೂ ಮಧ್ಯವರ್ತಿಗಳ ಕಾಟ ತಪ್ಪದ ಕಾರಣ ರೈತ ಚಳುವಳಿಗಳು ನಡೆದವು.

ರೈತ ಚಳುವಳಿಯ ಮೂಲಕ ರೈತರು ಕೆಲವು ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಿದರು. ಈ ರೈತ ಚಳುವಳಿಗಳಿಗೆ ಸಮಾಜವಾದಿ (ಸೋಷಿಯಲಿಷ್ಟ್) ಪಕ್ಷದವರ ಆಗಮನ ರೈತ ಸಂಘಗಳ ಆಗಮನದ ಮೂಲಕ ರೈತರು ತಮ್ಮ ಹಲವಾರು ಬೇಡಿಕೆಗಳನ್ನು ಇಟ್ಟುಕೊಂಡು ಹೋರಾಡಲು ಪ್ರಾರಂಭಿಸಿದರು. ಜಮೀನ್ದಾರರ ನಿರ್ಮೂಲನೆ, ಉಳುವವನಿಗೆ ಭೂಮಿ ದೊರೆಯುವಂತಾಗಬೇಕು, ಗೇಣಿ ಕಂದಾಯ ರದ್ಧತಿ, ಕೃಷಿ ಕೂಲಿಕಾರರಿಗೆ ಕನಿಷ್ಟ ವೇತನ, ಬಿಟ್ಟಿಚಾಕರಿ ಹೋಗಲಾಡಿಸುವುದು, ನೀರಾವರಿ ಸೌಕರ್ಯ ಒದಗಿಸುವುದು, ಹೀಗೆ ಅನೇಕ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಸಮಾಜವಾದಿ (ಸೋಷಿಯಲಿಷ್ಟ್) ಪಕ್ಷ ಮತ್ತು ರೈತ ಸಂಘಗಳ ನೇತೃತ್ವದಲ್ಲಿ ಚಳುವಳಿಯನ್ನು ಪ್ರಾರಂಭಿಸಿದರು. ಗಾಂಧೀಜಿಯವರು ರೈತರನ್ನು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಅಂಗವಾಗುವಂತೆ ಮಾರ್ಪಡಿಸಿದರು. ಇದರಲ್ಲಿ ಮಹಿಳೆಯರು ಸಹ ಭಾಗವಹಿಸಿದರು. ರೈತ ಚಳುವಳಿಯು ಸ್ವಾತಂತ್ರ್ಯ ಚಳುವಳಿಯೊಂದಿಗೆ ನೇರವಾದ ಸಂಬಂಧವನ್ನು ಹೊಂದಿದ್ದು ೨೦ನೇ ಶತಮಾನದ ಮೊದಲ ಭಾಗದಲ್ಲಿ. ಅದಕ್ಕಿಂತ ಮುಂಚಿನ ರೈತ ಚಳುವಳಿಗಳೂ ರಾಷ್ಟ್ರೀಯ ಜನ ಜಾಗೃತಿಯನ್ನುಂಟುಮಾಡುವಲ್ಲಿ ಪ್ರಮುಖ ಪಾತ್ರವಹಿಸಿವೆ. ರೈತರ ಚಳುವಳಿಗಳನ್ನು ಸ್ವಾತಂತ್ರ್ಯದ ಚಳುವಳಿಯ ವ್ಯಾಪ್ತಿಗೆ ತಂದವರು ತಿಲಕರು, ಲಜಪತರಾಯ ಮತ್ತು ಗಾಂಧೀಜಿ. ಗಾಂಧೀಜಿಯವರು ಭಾರತದ ರಾಷ್ಟ್ರೀಯ ಚಳುವಳಿಗೆ ಪ್ರವೇಶಿಸಿದುದೇ ಚಂಪಾರಣ್ಯದ ನೀಲಿ ರೈತರ ಚಳುವಳಿಯ ಮೂಲಕ. 'ಕರ ನಿರಾಕರಣ'ದ ಮೂಲಕ ರಾಷ್ಟ್ರೀಯ ಚಳುವಳಿಯು ರೈತ ಚಳುವಳಿಯ ಸಮೀಪಕ್ಕೆ ತಂದವು. ಬ್ರಿಟೀಷರ ಆಳ್ವಿಕೆಯನ್ನು ಕೊನೆಗೊಳಿಸಿದಾಗಲೇ ತಮಗೆ ನಿಜವಾದ ಮುಕ್ತಿ ಸಿಗುತ್ತದೆಂದು ರೈತರು ತಿಳಿದುಕೊಂಡು ತಮಗಾಗುತ್ತಿರುವ ಶೋಷಣೆಯ ವಿರುದ್ಧ ಪ್ರತಿಭಟಿಸಲು ತಮ್ಮ ಭಯ ವಿಹ್ವಲತೆಯನ್ನು ತೊರೆದು ಉದ್ಯುಕ್ತರಾದರು.

### ೬.೧. ಭಾರತದ ಪ್ರಮುಖ ರೈತ ಚಳುವಳಿಗಳು ಮತ್ತು ಅದರಲ್ಲಿ ಮಹಿಳೆಯರ ಪಾತ್ರ

ಒಂದು ಕಡೆ ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲಾ ವರ್ಗದ ಮಹಿಳೆಯರು ದುಮುಕಿದರೆ ಜೊತೆ ಜೊತೆಯಲ್ಲಿಯೇ ಗ್ರಾಮೀಣ ಪ್ರದೇಶದ ಮಹಿಳೆಯರು ರೈತ ಹೋರಾಟಗಳಲ್ಲಿ ಭಾಗವಹಿಸಿರುವುದನ್ನು ಕಾಣಬಹುದು. ''ಭಾರತದಲ್ಲಿ ರೈತ ಹೋರಾಟವನ್ನೇ ತೆಗೆದುಕೊಂಡರೂ ಸುಮಾರು ೧೩೦ಕ್ಕೂ ಹೆಚ್ಚು ಮುಖ್ಯ ಹೋರಾಟಗಳು ನಡೆದಿರುವುದು ಕಂಡುಬರುತ್ತದೆ. ಕಳೆದ ಎರಡು ಶತಮಾನದ ಕಾಲದಲ್ಲಿ ರೈತ ಹೋರಾಟಗಳು ಪ್ರಾಮುಖ್ಯತೆ ಹೊಂದಿವೆ.'' (ತಂಬಂಡ ವಿಜಯ್ ಪೂಣಚ್ಚ, ೧೯೯೯, ಪು ೪)

ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ರೈತ ಹೋರಾಟಗಳಲ್ಲಿ ಪ್ರಮುಖವಾದವುಗಳೆಂದರೆ ಗುಜರಾತ್‌ನ ಬಾರ್ಡೋಲಿ ಸತ್ಯಾಗ್ರಹ ಚಳುವಳಿ, ಬಿಹಾರಿನ ಚಂಪಾರಣ್ಯ ಮುಂತಾದ ಚಳುವಳಿಗಳು ಬ್ರಿಟೀಷ್ ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟಗಳು ನಡೆದವು. ನಂತರ ದೇಶವು ಸ್ವಾತಂತ್ರ್ಯ ಪಡೆಯುವ ಸಮಯದಲ್ಲಿ ಅನೇಕ ರೈತ ಕೂಲಿಕಾರರ ಹೋರಾಟಗಳನ್ನು ಕಾಣಬಹುದು. ಅವುಗಳಲ್ಲಿ ಕಿಸಾನ್ ಸಭಾ, ಕೇರಳದ ಕೃಷಿ ಕಾರ್ಮಿಕರ ಹೋರಾಟ, ಮಹಾರಾಷ್ಟ್ರದಲ್ಲಿ ನಡೆದ ವಾರ್ಲಿಗಳ ಹೋರಾಟ, ಬಂಗಾಲದಲ್ಲಿ ನಡೆದ ತೇಭಾಗ ಚಳುವಳಿ ಮುಂತಾದವುಗಳು. ಸ್ವಾತಂತ್ರ್ಯದ ನಂತರ ಆಂದ್ರದ ತೆಲಂಗಾಣ ಚಳುವಳಿಗಳಲ್ಲಿ ಮಹಿಳೆಯರ ಪಾತ್ರ ಅತ್ಯಂತ ಮಹತ್ವದ್ದು. ಭಾರತದ ಕೆಲವು ಪ್ರಮುಖ ರೈತ ಚಳುವಳಿಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

#### ೬.೧.೧. ಮಹಾರಾಷ್ಟ್ರದ ವಾರ್ಲಿ ರೈತ ಚಳುವಳಿ (೧೯೪೫ - ೧೯೪೭)

ಮಹಾರಾಷ್ಟ್ರದ ವಾರ್ಲಿ ಆದಿವಾಸಿಗಳ ಹೋರಾಟವು ಕಮ್ಯುನಿಷ್ಟ್ ಪಕ್ಷದವರಾದ ಗೋದಾವರಿ ಪರುಳೇಕರ ಅವರ ನೇತೃತ್ವದಲ್ಲಿ ನಡೆಯಿತು. ವಾರಲಿ ಜನರು ಮುಂಬೈ ಪ್ರಾಂತದ ಠಾಣೆ ಜಿಲ್ಲೆಯ ಕಾಡುಗಳಲ್ಲಿ ವಾಸವಾಗಿದ್ದರು. ಇವರು ಒಂದು ಕಾಲದಲ್ಲಿ ಈ ಭಾಗದ ಜಮೀನುಗಳ ಒಡೆಯರಾಗಿ ಬೇಸಾಯ ಮಾಡಿಕೊಂಡು ಸುಖವಾಗಿದ್ದರು. ಆದರೆ ೧೯ನೆ ಶತಮಾನದಲ್ಲಿ ಬ್ರಿಟೀಷ್ ಆಡಳಿತಗಾರರ ಕೃಪೆಯಿಂದ ಪಾರ್ಸಿ, ಪಠಾಣ, ಇರಾನಿ, ಮಾರವಾಡಿ ಜನಾಂಗಗಳಿಗೆ ಸೇರಿದ ಜನರು ವ್ಯಾಪಾರಕ್ಕಾಗಿ ಬಂದು ಇಲ್ಲಿ ಸೇರಿಕೊಂಡರು. ಈ ವ್ಯಾಪಾರಿಗಳಿಗೆ ವಾರಲಿಯವರು ಕೊಡುವ ಮರಮಟ್ಟು, ಅರಣ್ಯ ಉತ್ಪನ್ನಗಳ ಮೇಲೆ ಒಂದು ಕಣ್ಣಿದ್ದರೆ, ಕಾಡಿನ ಮಧ್ಯೆ ಇರುವ ಕೃಷಿ ಭೂಮಿ ಮತ್ತು ಹುಲ್ಲುಗಾವಲುಗಳ ಮೇಲೆ ಇನ್ನೊಂದು ಕಣ್ಣಿತ್ತು. ಹೊಸದಾಗಿ ಬಂದು ನೆಲೆಸಿದ ಈ ವ್ಯಾಪಾರಿಗಳು ಅನಕ್ಷರಸ್ಥರು, ಸರಳ ಸ್ವಭಾವದ ಆದಿವಾಸಿಯರನ್ನು ವಂಚಿಸಿ ಅವರ ಜಮೀನುಗಳನ್ನು ಕಬಳಿಸಲು ಪ್ರಾರಂಭಿಸಿದರು. ಕೆಲವರಿಗೆ ಸಾಲವನ್ನು ಕೊಟ್ಟು ಅವರ ಜಮೀನನ್ನು ಒತ್ತೆಯಿಟ್ಟುಕೊಂಡು ಆ ಭೂಮಿಯನ್ನು ಕಬಳಿಸಿದರು. ಹೀಗೆ ವ್ಯಾಪಾರಕ್ಕೆಂದು ಬಂದವರು ವಾರಲಿ ಜನಾಂಗದ ಭೂಮಿಯನ್ನು ಕಬಳಿಸಿಕೊಂಡು ಅವರೇ ಮಾಲೀಕರಾಗತೊಡಗಿದರು. ವ್ಯಾಪಾರಿಗಳು ವಾರಲಿ ಜನರ ಎಲ್ಲಾ ಭೂಮಿಯನ್ನು ವಶಪಡಿಸಿಕೊಂಡ ಮೇಲೆ ಆ ಭೂಮಿಯ ಸಾಗುವಳಿ ಮಾಡಲು ವಾರಲೀಯರನ್ನೇ ಇಟ್ಟುಕೊಂಡರು. ಭೂಮಿಯನ್ನು ಕಳೆದುಕೊಂಡ ವಾರ್ಲಿಯರಿಗೆ ಹೊಟ್ಟೆಪಾಡಿಗೆ ದುಡಿಯುವುದು ಅನಿವಾರ್ಯವಾಯಿತು. ತುತ್ತು ಅನ್ನಕ್ಕೂ ಅವರಿಗೆ ಶರಣಾಗಬೇಕಾಯಿತು. ಈ ಪರಿಸ್ಥಿತಿಯಿಂದಾಗಿ ಜೀತ ಪದ್ಧತಿ ಉದ್ಭವಿಸಿತು ಮತ್ತು ಆದಿವಾಸಿಗಳು ನಿರಂತರವಾಗಿ ಚಿತ್ರಹಿಂಸೆಗೆ ಒಳಗಾಗಬೇಕಾಯಿತು.

ವಾರ್ಲಿ ಜನಾಂಗದವರಿಗೆ ಇನ್ನೊಂದು ಶೋಷಣೆ 'ಬಿಟ್ಟಿಕೆಲಸ'. ಭೂಮಾಲೀಕರು ಫಲವತ್ತಾದ ಭೂಮಿಯನ್ನು ತಮ್ಮಲ್ಲಿ ಇಟ್ಟುಕೊಂಡು ಅದರೊಳಗಿನ ತುಂಡು ಭೂಮಿಯನ್ನು ಹೆಸರಿಗೆ ಮಾತ್ರ ಆದಿವಾಸಿ ವಾರ್ಲಿ ರೈತರಿಗೆ

ಬೇಸಾಯಕ್ಕೆಂದು ಕೊಟ್ಟಿದ್ದರು. ಇವರಿಗೆ ಕೊಟ್ಟಂಥ ತುಂಡು ಭೂಮಿಗಾಗಿ ಉಳಿದ ಭೂಮಿತಿಯನ್ನು ಬಿಟ್ಟಿಯಾಗಿ ಸಾಗುವಳಿಯನ್ನು ಕಡ್ಡಾಯವಾಗಿ ಮಾಡಬೇಕಿತ್ತು. ವಾರಲಿಯರಿಗೆ ಕೊಟ್ಟಂತಹ ತುಂಡುಭೂಮಿಯಲ್ಲಿ ಬಂದ ಫಸಲಿನಲ್ಲಿ ಅರ್ಧದಷ್ಟು ಭಾಗವನ್ನು ಮಾಲೀಕರಿಗೆ ಒಪ್ಪಿಸಬೇಕಾಗಿತ್ತು. ಮಾಲೀಕರ ಇಷ್ಟದಂತೆ ಫಸಲಿನಲ್ಲಿ ಪಾಲುಕೊಟ್ಟರೆ ಮಾತ್ರ ಈ ತುಂಡು ಭೂಮಿ ದೊರೆಯುತ್ತಿತ್ತು. ಈ ತುಂಡು ಭೂಮಿಯ ಆಸೆಗಾಗಿ ಉಳಿದ ಭೂಮಿಯನ್ನು ಬಿಟ್ಟಿಯಾಗಿ ಮಾಡಬೇಕಿತ್ತು. ಉಳಮೆ ಮಾಡಲು ಹಿಂದೇಟು ಹಾಕಿದರೆ ಅವರನ್ನು ಮರಕ್ಕೆ ಕಟ್ಟಿ ಹೊಡೆಯುತ್ತಿದ್ದರು ಮತ್ತು ಹೊಲವನ್ನು ಉಳುವಾಗ ಒಂದು ಬದಿಗೆ ಎತ್ತನ್ನು ಕಟ್ಟಿದರೆ ಇನ್ನೊಂದು ಬದಿಗೆ ವಾರಲಿ ರೈತರನ್ನು ಕಟ್ಟಿ ಹೊಲವನ್ನು ಉಳುತ್ತಿದ್ದರು. ಈ ಹಿಂಸೆಯನ್ನು ತಡೆಯಲಾಗದೇ ಜಮೀನುದಾರನು ಹೇಳಿದ ಕೆಲಸವನ್ನು ಮಾಡುತ್ತಿದ್ದರು. ಈ ವ್ಯಾಪಾರಿಗಳು ಕೇವಲ ಜಮೀನಿನ ಮಾಲೀಕರು ಆಗದೆ ಹುಲ್ಲುಗಾವಲಿನ ಮಾಲೀಕರು ಆಗಿದ್ದರು. ಅಲ್ಲದೆ ಜಂಗಲ್ ಕಂಟ್ರಾಕ್ಟರರು ಅವರೇ ಆಗಿದ್ದರು. ವಾರ್ಲಿ ಪುರುಷರು ಹೊಲದಲ್ಲಿ ಉಳುಮೆ ಮಾಡುವುದರ ಜೊತೆಗೆ ಕಾಡಿನಲ್ಲಿನ ಮರ ಕಡಿಯುವುದು, ಹುಲ್ಲುಕೊಯ್ಯುವುದು ಹೀಗೆ ಊಟಕ್ಕೂ ಬಿಡುವಿಲ್ಲದ ಕೆಲಸವನ್ನು ಪುಕ್ಕಟೆಯಾಗಿ ಮಾಡಬೇಕಿತ್ತು. ವಾರಲಿ ಸ್ತ್ರೀಯರ ಸ್ಥಿತಿಯಂತೂ ಹೇಳತೀರದಾಗಿತ್ತು. ವಾರಲಿ ಹೆಂಗಸರಲ್ಲಿ ಸುಂದರಿಯರನ್ನು ಕಂಡರೆ ಸಾಕು, ಈ ವ್ಯಾಪಾರಿಗಳು ಅವರ ಮನಸ್ಸಿಗೆ ಬಂದಾಗ ಅವರನ್ನು ಉಪಭೋಗಿಸುತ್ತಿದ್ದರು. ಹೊಲದಲ್ಲಿ ಕೆಲಸಕ್ಕೆ ಬಂದ ಹೆಂಗಸರಿಗೆ ಗೇಲಿ ಮಾಡುವುದು, ಅವಾಚ್ಯ ಶಬ್ದಗಳನ್ನು ಬಳಸುವುದು, ಅವರನ್ನು ತಬ್ಬಿಕೊಳ್ಳುವುದು, ಸಿಕ್ಕ ಸಿಕ್ಕಲ್ಲಿಯೇ ಮಾನಭಂಗ ಮಾಡುವುದು ಜಮೀನುದಾರರ ನಿತ್ಯದ ವಿಷಯವಾಗಿತ್ತು. ಆದಿವಾಸಿ ಪುರುಷರು ಇದನ್ನೆಲ್ಲ ತಾವು ಕಣ್ಣಾರೆ ನೋಡಿದರೂ ಪ್ರತಿಭಟಿಸುವಂತಿರಲಿಲ್ಲ. ಈ ರೀತಿಯಾಗಿ ಅಲ್ಲಿಯ ಮಾಲೀಕರಿಂದ ಆದಿವಾಸಿ ಸ್ತ್ರೀಯರು ಅನುಭವಿಸುತ್ತಿದ್ದ ಕಿರುಕುಳಕ್ಕೆ ಮಿತಿಯೇ ಇರಲಿಲ್ಲ. ''ಈ ರೀತಿ ಸಂಭೋಗದಿಂದ ಹಿಂದೂ ಅಲ್ಲದ ಜಮೀನುದಾರನಿಗೆ ಹುಟ್ಟಿದ ಸಂತತಿಗೆ 'ಬಾಟಲಾ' (ಕುಲಗೆಟ್ಟ ಜಾತಿ) ಎಂಬ ಬೇರೆ ಜಾತಿಯೇ ನಿರ್ಮಾಣವಾಗಿತ್ತು.'' (ಗೋದಾವರಿ ಪರುಳೇಕರ್, ೨೦೦೦, ಪು ೪೪) ಇಂಥ ಹೆಣ್ಣುಮಕ್ಕಳನ್ನು ವಾರ್ಲಿಯ ಪುರುಷರು ತಮ್ಮಷ್ಟು ಶುದ್ಧರಾದವರಲ್ಲ ಎಂದು ಅವರಲ್ಲಿಯೇ ಕೀಳಾಗಿ ಕಾಣುತ್ತಿದ್ದರು ಮತ್ತು ಅಂತಹ ಹೆಣ್ಣುಮಕ್ಕಳನ್ನು ಕೆಲವೊಂದು ಬಾರಿ ಕೊಲೆ ಮಾಡುತ್ತಿದ್ದರು. ತಮ್ಮ ಹೆಂಡತಿಯನ್ನೆ ತನ್ನ ಎದುರಿಗೆ ಜಮೀನುದಾರನು ಎಳೆದು ಒಯ್ಯುತ್ತಿದ್ದರೆ ಅದನ್ನು ನೋಡಿಯೂ ಸುಮ್ಮನಿರಬೇಕಾಗಿತ್ತು. ಬಲವಂತವಾಗಿ ಭೋಗಿಸಿದ ಸಾಹುಕಾರನ ವಿರುದ್ಧ ಒಂದು ಮಾತು ಕೂಡ ಅನ್ನುವಂತಿರಲಿಲ್ಲ. ಹೀಗಾಗಿ ವಾರ್ಲಿ ಹೆಣ್ಣು, ಜಮೀನುದಾರರಿಂದಲೂ ಹಿಂಸೆಯನ್ನು ಅನುಭವಿಸುವುದರ ಜೊತೆಗೆ ತಮ್ಮ ಜನಾಂಗದ ಪುರುಷರಿಂದಲೂ ಹಿಂಸೆಯನ್ನು ಅನುಭವಿಸಬೇಕಿತ್ತು.

ಬಡತನ, ಅಜ್ಞಾನದಿಂದ ವಾರ್ಲಿ ಜನರನ್ನು ಜಮೀನುದಾರರು, ಸಾಹುಕಾರರು ಹೀರಿ ಹಿಪ್ಪೆ ಮಾಡುತ್ತಿದ್ದರು. ನಿಜವಾದ ಭೂಮಿಯ ಮಾಲೀಕರು ವಾರಲಿಯರೇ ಆದರೂ ಇಂದು ಅವರು ಅದೇ ಭೂಮಿಯ ಗುಲಾಮರಾಗಿ, ಬಿಟ್ಟಿಚಾಕರಿಯನ್ನು ಮಾಡುವ ಸ್ಥಿತಿಯಾಗಿತ್ತು. ಜಮೀನುದಾರರು ಹಣದ ಬಲದಿಂದ ಪೋಲಿಸ್, ಕಾನೂನು ಮುಂತಾದ ನ್ಯಾಯ ಪ್ರಧಾನ ಶಾಖೆಗಳನ್ನು ತಮ್ಮ ಅಧೀನದಲ್ಲಿ ಇಟ್ಟುಕೊಂಡಿರುವುದರಿಂದ ಆದಿವಾಸಿ ಜನರಿಗೆ ಪ್ರತಿಭಟಿಸುವ ಧೈರ್ಯವಿರಲಿಲ್ಲ. ಆದರೆ ಅನ್ಯಾಯ ಶೋಷಣೆಗಳು ಮಿತಿಮೀರಿದ ನಂತರ ''೧೯೪೫ರಲ್ಲಿ ರೈತ ಸಮಾವೇಶದಲ್ಲಿ ಭಾಗವಹಿಸಿ ಬಂದ ವಾರ್ಲಿ ನಾಯಕರು ಭೂಮಾಲೀಕರ ವಿರುದ್ಧ ಕೆಂಪು ಬಾವುಟ ಹಾರಿಸುವ ಧೈರ್ಯ ತೋರಿದರು. ಪರಿಣಾಮವಾಗಿ ವಾರ್ಲಿಗಳ ಮೇಲೆ ಭೂಮಾಲೀಕರು ಮರಣಾಂತಿಕ ಹಲ್ಲೆ ನಡೆಸಿದರು. 'ಮಹಾರಾಷ್ಟ್ರ ಕಿಸಾನ್ ಸಭಾ' ದವರು ಗೋದಾವರಿ ಪರುಳೇಕರ್‌ರನ್ನು ತಮ್ಮ ಪ್ರತಿನಿಧಿಯಾಗಿ ವಾರ್ಲಿಗಳಲ್ಲಿಗೆ ಕಳುಹಿಸಿದರು.'' (ಪ್ರೀತಿ

ಶುಭಚಂದ್ರ, ೨೦೦೨, ಪು ೩೦೯) ಅಜ್ಞಾನಿಗಳೆನಿಸಿದ ಈ ವಾರ್ಲಿ ಜನರು ನಡೆಸಿದ ಹೋರಾಟ ರೋಮಾಂಚಕಾರಿಯಾಗಿತ್ತು. ಸದಾ ನೋಗಕ್ಕೆ ಕಟ್ಟಿದ ಎತ್ತಿನಂತೆ ತಲೆ ತಗ್ಗಿಸಿಕೊಂಡು ದುಡಿಯುವುದನ್ನು ವಾರ್ಲಿ ಜನರು ಸುಳ್ಳು ಮಾಡಿದರು. ಗೋದಾವರಿಯವರು ವಾರ್ಲಿ ಜನರ ಮಧ್ಯೆಯೇ ಬದುಕಲಾರಂಭಿಸಿ ಕ್ರಾಂತಿಕಾರಿ ಹೋರಾಟದಲ್ಲಿ ತೊಡಗಿದ್ದ ಜನರಿಗೆ ಪ್ರಾಥಮಿಕ ರಾಜಕೀಯ ಶಿಕ್ಷಣ ಕೊಟ್ಟರು. ಜೊತೆಗೆ ವಾರ್ಲಿಗಳೊಂದಿಗೆ ಪೋಲಿಸರ ಹಾಗೂ ಸೈನಿಕರ ಆಕ್ರಮಣಕ್ಕೆ ತುತ್ತಾದರು. ಈ ಹೋರಾಟದ ಜೊತೆಯಲ್ಲಿಯೇ ಗೋದಾವರಿ ಪರುಳೇಕರ ಅವರು ಮಹಿಳೆಯರ ಹಕ್ಕು ಹಾಗೂ ಆರ್ಥಿಕ ನ್ಯಾಯಕ್ಕಾಗಿ ಹೋರಾಟ ಮಾಡತೊಡಗಿದ್ದು ಗಮನಾರ್ಹವಾಗಿದೆ.

೧೯೪೫ರಲ್ಲಿ ವಾರ್ಲಿ ಜನರು ಪ್ರಥಮವಾಗಿ ಹೋರಾಟವನ್ನು ಪ್ರಾರಂಭಿಸಿದರು. ಈ ಹೋರಾಟದ ಉದ್ದೇಶ ''ಉಂಬರಗಾಂವ ತಾಲೂಕಿನ ಸುಮಾರು ೩೦೦ ವಾರ್ಲಿಗಳು ಆ ವರ್ಷ ಬೆಳೆ ಕೊಯ್ಯುವ ಹೊತ್ತಿಗೆ ತಮಗೆ ಕನಿಷ್ಠ ೧೨ ಆಣೆಯ ದಿನಗೂಲಿ ಕೊಡಬೇಕೆಂದು ಮುಷ್ಕರ ನಡೆಸಿದರು. ಹಿಂದುಳಿದ ವರ್ಗಗಳ ಅಧಿಕಾರಿಯಾಗಿ ಆ ತಾಲೂಕಿಗೆ ಬಂದ ಶ್ರೀ ಸಾವೆ ಎಂಬ ಯುವ ಅಧಿಕಾರಿಯು ವಾರ್ಲಿಗಳ ಬೇಡಿಕೆಗೆ ಸಹಾನುಭೂತಿ ತೋರಿಸಿದ್ದ; ಅಷ್ಟೇ ಅಲ್ಲ, ಯಾರೂ ಬಿಟ್ಟಿ ಕೆಲಸ ಮಾಡಬೇಡಿ ಎಂದು ಉಪದೇಶ ಮಾಡಿದ್ದ. ಇದರಿಂದ ಸ್ಫೂರ್ತಿ ಪಡೆದ ರೈತರು ಎರಡು ತಿಂಗಳವರೆಗೂ ಮುಷ್ಕರ ಮುಂದುವರೆಸಿದರು.'' (ನಾಗೇಶ ಎಚ್.ವಿ., ೧೯೮೪, ಪು ೭೩) ಆದರೆ ಭೂ ಮಾಲೀಕರು ತಮ್ಮ ಅಧಿಕಾರವನ್ನು ಒಲಿಸಿಕೊಂಡು ಈ ಹೋರಾಟ ನಿಲ್ಲುವಂತೆ ಮಾಡಿದರು. ೧೯೪೫ರಲ್ಲಿ ಕಿಸಾನ್ ಸಭಾದ ಮೂಲಕ ಕಮ್ಯುನಿಷ್ಟರ ಪ್ರವೇಶವಾಯಿತು. ಇದರ ಪ್ರಭಾವದಿಂದ ಆದಿವಾಸಿಗಳು ಮತ್ತೆ ಹೋರಾಟಕ್ಕೆ ಸಿದ್ಧರಾದರು. ''೧೯೪೫ ಮೇ ತಿಂಗಳಲ್ಲಿ ಉಂಬರಗಾಂವದಲ್ಲಿ ವಾರಲಿಗಳ ರೈತ ಸಮ್ಮೇಳನ ನಡೆದು ಹನ್ನೆರಡಾಣೆ ದಿನಗೂಲಿಯನ್ನು ಪಡೆಯದೆ ಕೆಲಸ ಮಾಡಬಾರದೆಂದು ಘೋಷಣೆ ಕೂಗಿ, ಹಳ್ಳಿ ಹಳ್ಳಿಗಳಲ್ಲಿ ಕೆಂಪು ಬಾವುಟದ ಮೆರವಣಿಗೆ ನಡೆಸಿದರು. ಹುಲಿಗಳಂತೆ ಮೆರೆಯುತ್ತಿದ್ದ ಸಾಹುಕಾರರು ಇಲಿಗಳಂತಾದರು.'' (ನಾಗೇಶ ಎಚ್.ವಿ., ೧೯೮೪, ಪು ೭೪) ಜಮೀನುದಾರರು ೧೨ ಆಣೆ ಕೂಲಿಯನ್ನು ಕೊಡಲು ಒಪ್ಪಿದರು ಮತ್ತು ಬಿಟ್ಟಿಯಾಗಿ ದುಡಿಸಿಕೊಳ್ಳುವುದನ್ನು ನಿಲ್ಲಿಸಿದರು. ಈ ರೀತಿಯ ಚಿಕ್ಕ ಹೋರಾಟವು ಯಶಸ್ವಿಯಾಗಿರುವುದರಿಂದ ದೊಡ್ಡ ಪ್ರಮಾಣದ ಹೋರಾಟಕ್ಕೆ ಸಿದ್ಧವಾಗತೊಡಗಿದರು. ''ಕಿಸಾನ್ ಸಭಾ, ಒಂದು ಹೊರೆ ಹುಲ್ಲು ಕೊಯ್ದರೆ ಎರಡುವರೆ ರೂಪಾಯಿ ಕೂಲಿ ಕೇಳುವಂತೆ ಆದೇಶ ನೀಡಿತು.'' (ನಾಗೇಶ ಎಚ್.ವಿ., ೧೯೮೪, ಪು ೭೫) ಈ ಆದೇಶದಂತೆ ವಾರ್ಲಿಯ ಜನರು ಹುಲ್ಲುಕೊಯ್ಯಲು ಬರಲಿಲ್ಲ. ಆಗ ಭೂಮಾಲೀಕರು, ಕಂಟ್ರಾಕ್ಟರರೂ ಸರಕಾರಿ ಅಧಿಕಾರಿಗಳ ಹಾಗೂ ಪೋಲಿಸರ ಸಹಾಯದಿಂದ ವಾರಲಿಗಳ ವಿರುದ್ಧ ಹಿಂಸಿಸಲು ಪ್ರಾರಂಭಿಸಿದರು. ವಾರಲಿಗಳು ಗುಂಡಿನೇಟಿಗೂ, ಯಾವುದೇ ರೀತಿಯ ಹಿಂಸೆಗೂ ಮಣಿಯಲಿಲ್ಲ. ಕೊನೆಗೂ ಕಂಟ್ರಾಕ್ಟರರು ೨½ - ೩ ರೂ ಕೂಲಿ ಕೊಡಬೇಕಾಯಿತು. ''೧೯೪೬ರಲ್ಲಿ ಮಹಾಲಕ್ಷ್ಮೀ ಎಂಬಲ್ಲಿ ವಾರಲಿಗಳ ಸಭೆ ನಡೆಯಿತು. ಸುಮಾರು ೧೫,೦೦೦ ವಾರಲಿಗಳು ಸೇರಿದ್ದರು. ಒಪ್ಪಿಕೊಂಡ ಲಾವಣಿಯೊಂದನ್ನು ಬಿಟ್ಟು ಬೇರೆಯಾವ ಬಿಟ್ಟಿ, ಕಾಣಿಕೆಗಳನ್ನು ಕೊಡಬಾರದೆಂದು ನಿರ್ಣಯವಾಯಿತು.'' (ನಾಗೇಶ ಎಚ್.ವಿ., ೧೯೮೪, ಪು ೭೬) ಈ ರೀತಿಯಾಗಿ ವಾರಲಿಗಳು ತಮ್ಮ ಶ್ರಮಕ್ಕೆ ಸೂಕ್ತ ಪ್ರತಿಫಲವನ್ನು ಪಡೆಯುವಲ್ಲಿ ಸತತವಾಗಿ ಎರಡು ವರ್ಷಗಳ ಕಾಲ ಹೋರಾಡಬೇಕಾಯಿತು. ೧೯೪೭ರಲ್ಲಿ ಈ ಹೋರಾಟವು ಕೊನೆಗೊಂಡು ತಾವು ದುಡಿದುದ್ದಕ್ಕೆ ಉತ್ತಮ ಸಂಬಳವನ್ನು ಪಡೆಯುವ ಹಕ್ಕನ್ನು ಹೊಂದಿದರು. ಮಹಿಳೆಯರು ಕೂಡ ಜಮೀನ್ದಾರರ ಶೋಷಣೆಯಿಂದ ಮುಕ್ತರಾದರು.

ಈ ಹೋರಾಟದ ಮೂಲಕ ವಾರಲೀಯ ಜನರು ಕ್ರಾಂತಿಗೆ ಅಸಮರ್ಥರು ಎಂಬ ವಾದವನ್ನು ಸುಳ್ಳು ಮಾಡಿದರು. ಅಕ್ಷರಜ್ಞಾನ ಇಲ್ಲದ ಇವರಿಗೆ ಕಿಸಾನ್ ಸಭಾ ಅನೌಪಚಾರಿಕ ಶಿಕ್ಷಣವನ್ನು ಕೊಟ್ಟಿತು. ಚಳುವಳಿಯಲ್ಲಿ ಹಿಂಸೆಗೆ ಆಸ್ಪದವಿದ್ದರೂ ಅಸ್ತ್ರವನ್ನು ಬಳಸದೆ ಇದ್ದರು. ಅವರಿಗೆ ಸದಾ ಸ್ಫೂರ್ತಿ ನೀಡಿರುವುದು 'ಕೆಂಪು ಬಾವುಟ' ಮಾತ್ರ. ಸರಕಾರ, ಕೋರ್ಟು, ಪೋಲಿಸರು ಜಮೀನ್ದಾರರ ಕೈಗೊಂಬೆಗಳಾಗುತ್ತವೆ ಎಂದು ತಿಳಿದ ಈ ರೈತರೆಲ್ಲ ಒಗ್ಗಟ್ಟಾಗಿ ಹೋರಾಡಿದರು. ಕೊನೆಗೆ ಜಯಪಡೆದರು. ಈ ಎಲ್ಲ ಹೋರಾಟದಲ್ಲಿ ಮಹಿಳೆಯರು ಪುರುಷರಷ್ಟೇ ಸ್ವತಂತ್ರವಾಗಿ ಭಾಗವಹಿಸಿದರು. ಜಮೀನ್ದಾರರ ಶೋಷಣೆಯಿಂದ ಸ್ವತಂತ್ರರಾದರು. ಆದರೆ ಅವರದೇ ಆದ ಸಮಾಜದಲ್ಲಿ ಸಾಂಕ್ರಾಮಿಕ ರೋಗವೆನಿಸಿ ಹಬ್ಬಿದ ಲಿಂಗ ತಾರತಮ್ಯದ ದಬ್ಬಾಳಿಕೆಯಿಂದ ಮಾತ್ರ ಅವರು ಹೊರಬರಲು ಸಾಧ್ಯವಾಗಲಿಲ್ಲ.

ಬ್ರಿಟೀಷರು ಭಾರತಕ್ಕೆ ಬರುವ ಮೊದಲು ಯಾವುದೇ ಆದಿವಾಸಿ ಸಮುದಾಯದಲ್ಲಿ ಭೂ ಒಡೆತನದಂತಹ ಕಲ್ಪನೆಯೇ ಇರಲಿಲ್ಲ, ಇಡೀ ಸಮುದಾಯವೇ ಉಳುಮೆ ಮಾಡುತ್ತಿತ್ತು. ಬ್ರಿಟೀಷರು ಭಾರತಕ್ಕೆ ಬಂದು ಈ ಪದ್ಧತಿಯನ್ನು ಬದಲಾಯಿಸಿದರು. ಕಾರಣ, ಭೂಮಿಯಿಂದ ಅವರಿಗೆ ಆದಾಯ ಬೇಕಾಗಿತ್ತು. ಅದಕ್ಕಾಗಿ ಆಯಾ ಕುಟುಂಬಗಳಿಗೆ 'ಪಟ್ಟಾ'ಗಳನ್ನು ವರ್ಗಾವಣೆ ಮಾಡಿ, ಆನಂತರ ಭೂಮಿಯ ಮೇಲೆ ತೆರಿಗೆಯನ್ನು ವಿಧಿಸಲು ಪ್ರಾರಂಭಿಸಿದರು. ಕಾಡು - ಮೇಡುಗಳಲ್ಲಿ ಫಲವತ್ತಾದ, ನೀರಿನಾಶ್ರಯವಿರುವ ಭೂ ಪ್ರದೇಶಗಳಲ್ಲಿ ಕೃಷಿ ಮಾಡಿಕೊಂಡಿದ್ದ ಆದಿವಾಸಿ ರೈತರು ಈ ರೀತಿಯ ಬ್ರಿಟೀಷರ ಕಾನೂನುಗಳ ತೆಕ್ಕೆಗೆ ಒಳಪಟ್ಟರು. ಕಾನೂನಿನ ಮೂಲಕ ಒಬ್ಬೊಬ್ಬ ರೈತರಿಗೆ ಇಂತಿಷ್ಟು ಭೂಮಿಯನ್ನು ಆತನ ಹೆಸರಿನಲ್ಲಿ ನೀಡಲಾಯಿತು. ಈ ಸಂದರ್ಭದಲ್ಲಿ ಪುರುಷರಿಗೆ ಆ ಹೆಸರಲ್ಲಿ ಭೂಮಿ (ಪಟ್ಟಾ) ನೀಡಿದ ಕಾರಣ ಕುಟುಂಬದ ಮಹಿಳೆಯು ಭೂಮಿಯಲ್ಲಿನ ತನ್ನ ಅಧಿಕಾರದಿಂದ ವಂಚಿತಳಾದಳು. ಯಾವಾಗ ಪುರುಷನ ಹೆಸರಿನಲ್ಲಿ ಭೂಮಿಯಾಯಿತೋ 'ತನ್ನದು', 'ನನ್ನದು' ಎಂಬ ಸ್ವಪ್ರತಿಷ್ಠೆಗೆ ದಾರಿಯಾಯಿತು. ಆ ಮೂಲಕ 'ನಾವು' ಎಂಬ ಕುಟುಂಬ ಪರಿವಾರ 'ನಾನು ಮತ್ತು ನನ್ನ ಕುಟುಂಬ' ಎಂಬ ಸೀಮಿತತ್ವಕ್ಕೆ ಬಂತು.

ಆದಿವಾಸಿ ವಾರಲೀಯರ ಶೋಷಣೆಯನ್ನು ಕಂಡ ದೀಮಂತ ಮಹಿಳೆ ಗೋದಾವರಿ ಪರುಳೇಕರ್ ತನ್ನ ನಾಯಕತ್ವದಲ್ಲಿಯೇ ಮಹಿಳೆಯರನ್ನು ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸಿ ಹೋರಾಟದಲ್ಲಿ ಮುಂದುವರೆಯುವಂತೆ ಮಾಡಿದರು. ಆದರೆ ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರು ಹೋರಾಟದಲ್ಲಿ ಭಾಗವಹಿಸಿರುವುದನ್ನು ಗಣನೆಗೆ ತೆಗೆದುಕೊಳ್ಳದೇ ಪುರುಷನನ್ನೆ ಕೇಂದ್ರವಾಗಿರಿಸಿದೆ. ವಾರಲೀಯರಲ್ಲಿ ಈ ಚಳುವಳಿಯಿಂದ ಆದ ಪ್ರಮುಖ ಮಾರ್ಪಾಟೆಂದರೆ ಅವರಲ್ಲಿಯ ಸ್ವಾಭಿಮಾನ ಜಾಗೃತವಾಯಿತು. ಸಂಘಟನೆಯ ಕಾರಣ ಅವರಲ್ಲಿ ಆತ್ಮವಿಶ್ವಾಸ ಒಡಮೂಡಿದೆ. ತಮ್ಮ ಭೂಮಿಯನ್ನು ಅತ್ಯಲ್ಪ ಪ್ರಮಾಣದಲ್ಲಿ ದಕ್ಕಿಸಿಕೊಳ್ಳುವಲ್ಲಿ ಸಫಲರಾದರು. ಆರ್ಥಿಕವಾಗಿ ತಕ್ಕಮಟ್ಟಿಗೆ ಸುಧಾರಣೆ ಕಂಡರು ಶೋಷಣೆಯಿಂದ ಬಚಾವಾದರು. ಭೂ ಒಡೆತನದ ಮತ್ತು ಅಧಿಕಾರದ ವಿಷಯಕ್ಕೆ ಬಂದಾಗ ವಾರಲೀ ಮಹಿಳೆಯರು ಇನ್ನೂ ಅಭಿವೃದ್ಧಿಯನ್ನು ಕಾಣಬೇಕಾಗಿದೆ.

**೬.೧.೨. ಬಂಗಾಲದ ತೇಭಾಗ ರೈತ ಚಳುವಳಿ (೧೯೪೬ - ೧೯೪೭)**

೧೯೪೩ರ ಬಂಗಾಲ ಕ್ಷಾಮದ ಹಿನ್ನೆಲೆಯಲ್ಲಿ ನಡೆದಂಥ ಚಳುವಳಿ ತೇಭಾಗ ಚಳುವಳಿ. ಕ್ಷಾಮದ ನಂತರ ಬಂಗಾಲ ರೈತರು ತಮ್ಮ ಹೊಲದ ಒಡೆಯರಿಗೆ ಕೊಡಬೇಕಾದ ಅಂಶದ ಕುರಿತು ಚಳುವಳಿಯು ಪ್ರಾರಂಭವಾಯಿತು.

ಇದುವರೆಗೆ ತಮ್ಮ ಒಡೆಯರಿಗೆ ಬಂಗಾಲದ ರೈತರು ಬೆಳೆದ ಬೆಳೆಯ ಅರ್ಧದಷ್ಟನ್ನು ಗೇಣಿರೂಪದಲ್ಲಿ ನೀಡುತ್ತಾ ಬಂದಿದ್ದರು. ಆದರೆ ಕ್ಷಾಮದಿಂದ ತತ್ತರಿಸಿ ಕಂಗಾಲಾದಾಗ ರೈತರು ಫಸಲಿನ ೨/೩ ಭಾಗವನ್ನು ತಾವೇ ಇಟ್ಟುಕೊಳ್ಳಬೇಕೆಂದು ನಿರ್ಧಾರಕ್ಕೆ ಬಂದರು. ಇದೇ ತೇಭಾಗ ಅಥವಾ ೨/೩ನೇ ಪಾಲು ಬೇಕೆಂಬ ಚಳುವಳಿ, ಆಗ ಬಂಗಾಲದಲ್ಲಿ 'ಬರ್ಗಾದಾರಿ' (ಆಧೀ ಅಥವಾ ಆಧಿಯಾರೀ) ಎಂಬ ಪದ್ಧತಿ ಪ್ರಚಲಿತವಿತ್ತು. ಈ ಪದ್ಧತಿಯಂತೆ ಕೋರಪಾಲು ಕೃಷಿಮಾಡುವ ರೈತರು ತಮಗೆ ಭೂಮಿ ಕೊಟ್ಟ 'ಜೋತೆದಾರ'ರಿಗೆ ತಾವು ಬೆಳೆದ ಫಸಲಿನ ಅರ್ಧಭಾಗವನ್ನು ಕೊಡುತ್ತಿದ್ದರು. ಹೀಗೆ ಕೋರಪಾಲು ಕರಾರಿನ ಮೇಲೆ ಕೃಷಿ ಮಾಡುವ ರೈತ ಮಕ್ಕಳಿಗೆ 'ಬರ್ಗಾದಾರ' ಎನ್ನುತ್ತಿದ್ದರು. ''ಮೊಗಲರ ಕಾಲದಲ್ಲಿ ಕಂದಾಯ ವಸೂಲು ಮಾಡುವ ಅಧಿಕಾರಿಗಳು ಬ್ರಿಟೀಷ್ ಆಡಳಿತದಲ್ಲಿ ಜಮೀನ್ದಾರರಾಗಿ ಭೂಮಿಯ ಸಂಪೂರ್ಣ ಒಡೆತನ ಪಡೆದಿದ್ದರು. ಇವರು ಕೃಷಿ ಮಾಡುವವರಲ್ಲ; ಆಳುಹಚ್ಚಿ ಮಾಡಿಸುವವರೂ ಅಲ್ಲ. ಇವರು ತಮ್ಮ ಭೂಮಿಯನ್ನು ಮೂಲಗೇಣಿ ಆಧಾರದ ಮೇಲೆ ಜೋತೆದಾರರಿಗೆ ಹಂಚಿದ್ದರು. ಸ್ವಲ್ಪ ಭಾಗವನ್ನು ನಿಶ್ಚಿತ ಅವಧಿಗಾಗಿ ಬೇಸಾಯ ಮಾಡುವುದಕ್ಕಾಗಿ ಅಧೀನ ರೈತರಿಗೆ ಕೊಡುತ್ತಿದ್ದರು. ಈ ಎರಡು ವರ್ಗದವರು ಹೊಲದಲ್ಲಿ ದುಡಿಯುವುದು ವಿರಳ. ಅವರು ತಮಗೆ ಬಂದ ಭೂಮಿಯನ್ನು ಭೂಮಿಯಿಲ್ಲದ ಬಡಕುಟುಂಬಗಳಿಗೆ ಬರ್ಗದಾರಿ ಪದ್ಧತಿಯಂತೆ ಬೇಸಾಯ ಮಾಡಲು ಕೊಡುತ್ತಿದ್ದರು.'' (ನಾಗೇಶ ಎಚ್.ವಿ., ೧೯೮೪, ಪು ೭೯) ಈ ಬೇಸಾಯದಿಂದ ಬಂದ ಫಸಲಿನ ಅರ್ಧಭಾಗವನ್ನು ಜಮೀನುದಾರರಿಗೆ ಕೊಡಬೇಕಾಗಿತ್ತು, ಬಂಗಾಲದಲ್ಲಿ ಜನಸಂಖ್ಯೆ ಹೆಚ್ಚಾದಂತೆ ಭೂಮಿಯ ಬೇಡಿಕೆಯು ಹೆಚ್ಚಾಗತೊಡಗಿತು. ಇದರಿಂದ ಜಮೀನ್ದಾರರು ಮತ್ತು ಜೋತೆದಾರರು ಹೆಚ್ಚು ಶ್ರೀಮಂತರಾಗತೊಡಗಿದರು.

''೧೯೩೮ರಲ್ಲಿ ಬಂಗಾಲದ ಕಿಸಾನ್ ಸಭಾ ಜಮೀನ್ದಾರಿ ಪದ್ಧತಿಯ ಮುಕ್ತಾಯದ ಬಗ್ಗೆ ಹಾಗೂ 'ತೇಭಾಗ ಪದ್ಧತಿ'ಯ ಜಾರಿಗಾಗಿ ಒತ್ತಾಯಿಸುತ್ತಾ ಬಂದರು.'' (ಗಾಯತ್ರಿ ಎನ್., ೧೯೯೮, ಪು ೩೪) ೧೯೪೩ರಲ್ಲಿ ಅತೀ ಭೀಕರವಾದ ಮಾನವ ನಿರ್ಮಿತ ಕ್ಷಾಮವೆಂದು ಕುಖ್ಯಾತವಾದ ಈ ಬಂಗಾಲದ ಕ್ಷಾಮವು ಬಹಳಷ್ಟು ಬಡರೈತರ ಜೀವನವನ್ನೇ ಅಲುಗಾಡಿಸಿತು. ಎಲ್ಲೆಲ್ಲೂ ಬಡತನದಿಂದ ಕೂಡಿದ ದಾರಿದ್ರ್ಯ ಒಂದೆಡೆಯಾದರೆ, ಜಮೀನ್ದಾರರಲ್ಲಿ ಶೇಖರವಾಗಿದ್ದ ದವಸಗಳ ರಾಶಿ ಮತ್ತೊಂದೆಡೆಯಾಗಿತ್ತು. ಈ ಕ್ಷಾಮದಿಂದ ಮಹಿಳೆಯರು ಮತ್ತು ಮಕ್ಕಳು ಹಸಿವಿನಿಂದ ತತ್ತರಿಸಿ ಸಾಯುವಂತಾದರು. ಜಮೀನುದಾರರು ಸಂಗ್ರಹಿತ ಫಸಲನ್ನು ಹಸಿದವರಿಗೆ ನೀಡದೇ ತಮ್ಮ ಉಗ್ರಾಣದಲ್ಲಿ ಬಚ್ಚಿಟ್ಟುಕೊಂಡಿದ್ದರು. ಕೆಲಸಕ್ಕೆಂದು ಹೋದ ಕೂಲಿಯಾಳುಗಳಿಗೆ ಅತ್ಯಲ್ಪ ಪ್ರಮಾಣದಲ್ಲಿ ಭತ್ತವನ್ನು ಕೂಲಿ ರೂಪದಲ್ಲಿ ಕೊಡುತ್ತಿದ್ದರು. ಇದರಿಂದ ಸೋತಂತಹ ರೈತ ವರ್ಗವು ಜಮೀನ್ದಾರಿ ಪದ್ಧತಿಯನ್ನೇ ನೇರವಾಗಿ ವಿರೋಧಿಸಲು ನಿರ್ಧರಿಸಿ ಈ ಆಂದೋಲನ ಪ್ರಾರಂಭಿಸಿದರು. ''ಬಂಗಾಲದುದ್ದಕ್ಕೂ ಮೂರು ಘೋಷಣೆಗಳೊಂದಿಗೆ ಈ ಚಳುವಳಿ ಸಾಗಿತು: ೧. ಇಡೀ ಫಸಲನ್ನು ನಿಮ್ಮ ಕೈಗೆ ತೆಗೆದುಕೊಳ್ಳಿ, ೨. ಅರ್ಧವಲ್ಲ ೨/೩ ಭಾಗದಷ್ಟು ಬೆಳೆ ನಿಮ್ಮದು, ೩. ಸಾಲ ತೆಗೆದುಕೊಂಡ ಭತ್ತದ ಮೇಲೆ ಬಡ್ಡಿಯಿಲ್ಲ.'' (ಗಾಯತ್ರಿ ಎನ್., ೧೯೯೮, ಪು ೩೬) ಎಂಬ ಘೋಷಣೆಗಳೊಂದಿಗೆ ಚಳುವಳಿ ಪ್ರಾರಂಭಗೊಂಡಿತು. ಈ ಚಳುವಳಿಯು ಕಮ್ಯೂನಿಸ್ಟ್ ಪಕ್ಷದ ನೇತೃತ್ವದಲ್ಲಿ ನಡೆದಂಥ ಚಳುವಳಿಯಾಗಿದೆ. ಇದು ಕಿಸಾನ್ ಸಭಾ ಹಾಗೂ ಮಹಿಳಾ ಆತ್ಮರಕ್ಷಾ ಸಮಿತಿಯ ಸಂಘಟನೆಗಳ ಸದಸ್ಯರನ್ನು ಕೂಡ ಒಳಗೊಂಡಿತು. ಕಮ್ಯುನಿಸ್ಟ್ ಪಕ್ಷದ ಮಹಿಳೆಯರು ಹಳ್ಳಿಯ ಮನೆಮನೆಗೂ ಹೋಗಿ ಮಹಿಳೆಯರನ್ನು ಕರೆದುಕೊಂಡು ಬಂದು ಬರಪರಿಹಾರ ಕಾರ್ಯಕ್ರಮದಲ್ಲಿ ತೊಡಗಿಸಿತು. ಅಲ್ಲದೆ ಈ ಚಳುವಳಿಯು ಹಲವಾರು ಮಹಿಳೆಯರನ್ನು ತನ್ನ ತೆಕ್ಕೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾಯಿತು.

ಬಂಗಾಲದ ಕಿಸಾನ್ ಸಭಾ ಹಾಗೂ ಕಮ್ಯುನಿಷ್ಟ್ ಪಕ್ಷಗಳು ರೈತರ ಬೆಂಬಲಕ್ಕೆ ನಿಂತವು. ''೧೯೪೬ರ ಸೆಪ್ಟೆಂಬರ್‌ನಲ್ಲಿ ಬಂಗಾಲ ಪ್ರಾಂತದ ಕಿಸಾನ್ ಸಭಾ, ಗೇಣಿದಾರರು ಮೂರನೆಯ ಒಂದು ಭಾಗ (ತೇಭಾಗ)ದ ಬೆಳೆಯ ಪಾಲು ಪಡೆಯಲು ಸಾಮೂಹಿಕವಾಗಿ ಹೋರಾಟಕ್ಕಿಳಿಯಬೇಕೆಂದು ಕರೆ ನೀಡಿತು.'' (ಜೆರಾಲ್ಡಿನ್ ಫೋರ್ಬ್ಸ್., ೨೦೦೧, ಪು ೩೧೭) ಈ ತೇಭಾಗ ಪದ್ಧತಿಯು ವಾಸ್ತವವಾಗಿ ರೂಢಿಯಾಗಬೇಕೆಂದು, ಸ್ವತಃ ಗೇಣಿದಾರರೆ ಸುಗ್ಗಿಯ ಬೆಳೆಯನ್ನು ತಮ್ಮ ಸ್ವಂತ ಗಿರಣಿಗಳಿಗೆ ಒಯ್ದು ಪಾಲು ಮಾಡಿಕೊಳ್ಳಲು ಪ್ರಾರಂಭಿಸಿದರು. ಹೊಟ್ಟೆಗೆ ಅನ್ನವಿಲ್ಲದೆ, ಮಕ್ಕಳಿಗೆ ಊಟವಿಲ್ಲದೆ ಸಾಯುವಾಗ ಜಮೀನ್ದಾರರಿಗೆ ತಾವು ಬೆಳೆದ ಫಸಲನ್ನು ಕೊಡಬೇಕಾಗಿ ಬಂದ ದುಸ್ಥಿತಿಯೇ ಮಹಿಳೆಯರನ್ನು ಭಾಗವಹಿಸುವಂತೆ ಮಾಡಿತು. ಇದರಿಂದ ರೈತಾಪಿ ಮಹಿಳೆಯರು ಈ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಮೊದಲು ಮಹಿಳೆಯರು ಬೆಳೆ ಕೊಯ್ಯಲು ನೆರವಾಗುವುದು, ನಾಯಕರಿಗೆ ಅಡುಗೆ ಮಾಡಿ ಬಡಿಸುವುದು, ಕಾವಲುಗಾರರಾಗಿ ನಿಂತು ಅಪಾಯ ಸೂಚನೆಗಳನ್ನು ಕೊಡುವ ಕೆಲಸಗಳನ್ನು ಮಾಡುತ್ತಿದ್ದರು. ಚಳುವಳಿಗಳನ್ನು ಹತ್ತಿಕ್ಕಲು ಪೊಲೀಸರು ಬರುವುದರಿಂದ ಅಸಹನೀಯ ಕಾರ್ಯಕ್ಕೆ ಚಳುವಳಿಯು ತಿರುಗುವ ಹೊತ್ತಿಗೆ ಶಸ್ತ್ರಹೋರಾಟಕ್ಕೆ ಸಿದ್ಧರಿಲ್ಲದ ಕಮ್ಯುನಿಷ್ಟ್ ಪಕ್ಷದವರು ಚಳುವಳಿಯಿಂದ ಹೊರಬಂದರು. ಆದರೆ ಗ್ರಾಮೀಣ ಮಹಿಳೆಯರೆಲ್ಲರೂ ಸೇರಿ ಸ್ವತಂತ್ರವಾದ ಸೈನ್ಯವನ್ನು ಕಟ್ಟಿಕೊಂಡು ಈ ಚಳುವಳಿಯಲ್ಲಿ ಭಾಗವಹಿಸಿದರು. ಜಮೀನುದಾರರಿಗೆ ಸಲ್ಲಿಸಬೇಕಾದ ಬೆಳೆಯನ್ನು ವಸೂಲಿ ಮಾಡಲು ಗ್ರಾಮಗಳಿಗೆ ಪೋಲಿಸರನ್ನು ಕಳುಹಿಸುತ್ತಿದ್ದರು. ಬಂದಂಥ ಪೋಲೀಸರಿಗೆ ಗ್ರಾಮದ ಮಹಿಳೆಯರೆಲ್ಲ ಒಂದಾಗಿ ಪೊರಕೆ, ಕುಡುಗೋಲುಗಳನ್ನು ಹಿಡಿದು ಗ್ರಾಮದೊಳಗೆ ಬರದಂತೆ ತಡೆಯುತ್ತಿದ್ದರು. ಕೆಲವೊಂದು ಕಡೆ ಪೋಲಿಸರ ಗುಂಡಿಗೆ ಮಹಿಳೆಯರೂ ಸೇರಿದಂತೆ ಅನೇಕರು ಬಲಿಯಾಗುತ್ತಿದ್ದರು. ಪೋಲಿಸರು ಬಲವಂತವಾಗಿ ಗುಡಿಸಲುಗಳನ್ನು ಹೊಕ್ಕು ಜಮೀನ್ದಾರನ ಮನೆಗೆ ಧಾನ್ಯವನ್ನು ಸಾಗಿಸಿದರು. ಹಾಗೆಯೇ ಮಹಿಳೆಯರ ಮತ್ತು ಮಕ್ಕಳ ಮೇಲೆ ದೌರ್ಜನ್ಯ ಮಾಡತೊಡಗಿದರು. ಹೀಗಿದ್ದರೂ ಮಹಿಳೆಯರು ಚಳುವಳಿಯನ್ನು ಹಿಂದಕ್ಕೆ ತೆಗೆಯದೆ, ಮನೆಯಲ್ಲಿ ಇದ್ದ ಕೊಡಲಿ, ಪೊರಕೆ, ಕುಡುಗೋಲುಗಳಿಂದ ಪೋಲಿಸರ ಮೇಲೆ ಪ್ರತಿದಾಳಿ ಮಾಡಿದರು. ಮೆಣಸಿನ ಪುಡಿ ಮಿಶ್ರಿತ ಮಣ್ಣನ್ನು ಪೋಲೀಸರ ಕಣ್ಣುಗಳಿಗೆರಚಿದರು, ಸಮಯ ಸ್ಫೂರ್ತಿಯಿಂದ ಪೋಲೀಸರನ್ನು ಎದುರಿಸಿದ ರೈತಾಪಿ ಮಹಿಳೆಯರು ತಮ್ಮ ಕಾರ್ಯದಲ್ಲಿ ಸಫಲರಾದರು.

೧೯೪೬ - ೪೭ರ ಈ ತೇಭಾಗ ಚಳುವಳಿಯ ಚರಿತ್ರೆಯು ಭಾರತದ ಮಹಿಳಾ ಚರಿತ್ರೆಯಲ್ಲಿ ಅತ್ಯಂತ ಪ್ರಮುಖವಾದ ಭಾಗವಾಗಿದೆ. ರೈತ ಮಹಿಳೆಯರು ಯಾರಿಗೂ ಹೆದರದೇ ನಿಂತು ಈ ಚಳುವಳಿಯಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿದ್ದಾರೆ. ಕಮ್ಯುನಿಷ್ಟ್ ಪಾರ್ಟಿಯು ಚಳುವಳಿಯಿಂದ ದೂರ ಸರಿದಿರುವುದರಿಂದಲೇ ಇಲ್ಲಿಯ ಮಹಿಳೆಯರು ಚಳುವಳಿಯಲ್ಲಿ ನಾಯಕಿಯರಾಗಿ ಮುಂದೆ ಬರಲು ಕಾರಣವಾಯಿತು. ಈ ಹೋರಾಟವು ಬಂಗಾಲದ ಗ್ರಾಮೀಣ ಪ್ರದೇಶದ ಮಹಿಳೆಯರ ಆರ್ಥಿಕ ದಾಸ್ಯದ ವಿರುದ್ಧದ ಹೋರಾಟವಷ್ಟೇ ಆಗಿರದೇ ಅವರಲ್ಲಿ ಆತ್ಮ ವಿಶ್ವಾಸವನ್ನು ತುಂಬಿಸಿದ ಚಳುವಳಿಯಾಗಿದೆ. ಈ ಚಳುವಳಿಯಿಂದ ಮಹಿಳೆಯರು ಶತಮಾನದಿಂದ ದಾಸ್ಯಕ್ಕೆ ಒಳಗಾದವರನ್ನು ಹೊರ ತಂದು ಹೊಸಜ್ಞಾನವನ್ನು ಮೂಡಿಸಿದ ಮಹತ್ತರ ಕಾರ್ಯ ಮಾಡಿದರು.

### ೬.೧.೩. ಹೈದ್ರಾಬಾದಿನ ತೆಲಂಗಾಣ ರೈತ ಹೋರಾಟ (೧೯೪೬ - ೧೯೫೧)

ಆಂಧ್ರಪ್ರದೇಶದ ತೆಲಂಗಾಣ ರೈತ ಹೋರಾಟವು, ರೈತ ಹೋರಾಟಗಳಲ್ಲಿಯೇ ಮುಖ್ಯವಾದುದು. ತೆಲಂಗಾಣದ ರೈತ ಹೋರಾಟದಲ್ಲಿ ಕಮ್ಯುನಿಷ್ಟ್‌ರ ನೇತೃತ್ವದಲ್ಲಿ ಮಹಿಳೆಯರು ಭೂಮಿಗಾಗಿ, ಹೆಚ್ಚಿನ ಕೂಲಿಗಾಗಿ, ಹೈದ್ರಾಬಾದ್

ನಿಜಾಮನ ವಿರುದ್ಧ ಪುರುಷರ ಜೊತೆ ಮಹಿಳೆಯರು ಸಮಾನವಾಗಿ ಹೋರಾಡುವಲ್ಲಿ ಮಹತ್ವಪೂರ್ಣವಾದ ಪಾತ್ರವನ್ನು ವಹಿಸಿದ್ದಾರೆ. ಬ್ರಿಟೀಷರು ಭಾರತದಲ್ಲಿ ಇದ್ದ ಸಂದರ್ಭದಲ್ಲಿ ಹೈದ್ರಾಬಾದ್ ಸಂಸ್ಥಾನವು ಅರಸೊತ್ತಿಗೆಯ ಸಂಸ್ಥಾನಗಳಲ್ಲಿಯೇ ದೊಡ್ಡದು. ಇಡೀ ಸಂಸ್ಥಾನದ ಭೂ ವ್ಯವಸ್ಥೆಯು ಪಾಳೇಗಾರಿಕೆಯಿಂದ ಕೂಡಿದ್ದಾಗಿತ್ತು. ಶೇ.೪೦ರಷ್ಟು ಭಾಗದಲ್ಲಿ ದೊಡ್ಡ ದೊಡ್ಡ ಜಮೀನ್ದಾರಿ, ಜಹಗೀರುಗಳು ಇದ್ದವು. ಈ ಜಮೀನ್ದಾರರು ತಮ್ಮದೇ ಆದಂತಹ ನ್ಯಾಯಾಲಯ ಮತ್ತು ಸೆರೆಮನೆಗಳನ್ನು ಹೊಂದಿದ್ದರು. ಇವರು ಪಾಳೇಗಾರಿಕೆಯ ಶೋಷಣೆ ಪದ್ಧತಿಯನ್ನೆ ಈ ಜಮೀನ್ದಾರರು ಮುಂದುವರೆಸಿಕೊಂಡು ಬಂದರು. ಇಲ್ಲಿ ಶೇ.೪೦ ರಷ್ಟು ಜನತೆ ಜಮೀನ್ದಾರಿ ದಬ್ಬಾಳಿಕೆಯ ಭೂಮಿಯಲ್ಲಿ ದುಡಿಯುತ್ತಿದ್ದರು. ಉಳಿದ ಶೇ.೬೦ರಷ್ಟು ಭಾಗವು ನೇರವಾಗಿ ನಿಜಾಮನ ಆಳ್ವಿಕೆಯಲ್ಲಿತ್ತು. ಈ ನಿಜಾಮನ ಆಳ್ವಿಕೆಯಲ್ಲಿ ಜನರ ಮತ್ತು ನಿಜಾಮರ ನಡುವೆ ದೇಶಮುಖರು, ದೇಶಪಾಂಡೆಗಳು, ಮಧ್ಯವರ್ತಿಯಾಗಿದ್ದರು. ಇವರು ರೈತರೊಂದಿಗೆ ಇಟ್ಟುಕೊಂಡಿದ್ದ ಸಂಬಂಧ ಅತ್ಯಂತ ಕ್ರೂರವಾಗಿತ್ತು. ಇಲ್ಲಿಯ ದೇಶಮುಖರು ಮತ್ತು ಜಮೀನ್ದಾರರು ಒಂದು - ಒಂದುವರೆ ಲಕ್ಷ ಎಕ್ರೆ ಭೂಮಿಯನ್ನು ಹೊಂದಿರುತ್ತಿದ್ದರು. ಈ ಜಮೀನ್ದಾರಿ ಪದ್ಧತಿಯಲ್ಲಿ ಜಮೀನುಗಳನ್ನು ಸಾಗುವಳಿ ಮಾಡುವ ರೈತರು ಮತ್ತು ಅಲ್ಲಿಯ ಸ್ತ್ರೀಯರು 'ಬಿಟ್ಟಿ'ಚಾಕರಿಯನ್ನು ಮಾಡಬೇಕಾಗಿತ್ತು. 'ಬಿಟ್ಟಿ'ಚಾಕರಿಯನ್ನು ಮಾಡಿಸಿಕೊಳ್ಳುವುದು ಸಹಜವಾದ ಹಕ್ಕು ಎಂಬಂತೆ ಆಗಿತ್ತು. ಇಲ್ಲಿಯ ಹೆಣ್ಣುಮಕ್ಕಳು ದಣಿಗಳ ಕೈಕಾಲು ತಿಕ್ಕುವುದರ ಜೊತೆಗೆ ಹಾಸಿಗೆಗೂ ಹೋಗಬೇಕಾಗುತ್ತಿತ್ತು. ಜೀತದಾಳುಗಳ ಮದುವೆಯಾದರೆ ವಧುವಿನ ಮೊದಲ ರಾತ್ರಿಯನ್ನು ಕಳೆಯುವ ಹಕ್ಕನ್ನು ಭೂ ಮಾಲೀಕರು ಹೊಂದಿದ್ದರು. ''ಭೂ ಮಾಲೀಕರ ಮಗಳ ಮದುವೆಯಾದರೆ, ಆಕೆಯೊಂದಿಗೆ ಜೀತದಾಳಿನ ಮಗಳೂ ಭೂ ಮಾಲೀಕರ ಮಗಳ ಅತ್ತೆಯ ಮನೆಗೆ ಹೋಗಬೇಕಾದ 'ಆದಿಬಾಪ' ಪದ್ಧತಿಯು ಜಾರಿಯಲ್ಲಿತ್ತು.'' (ಪ್ರೀತಿ ಶುಭಚಂದ್ರ, ೨೦೦೨, ಪು ೩೧೦) ಅಂದರೆ ಜೀತದಾಳಿನ ಮಗಳು ಭೂ ಮಾಲೀಕರ ಮಗಳ ಮದುವೆಯಲ್ಲಿ ಉಡುಗೊರೆಯ ವಸ್ತುವಾಗಿದ್ದಳು. ಇವಳು ಸೇವಕಿಯಾಗಿ ಅವರ ಮಗಳ ಗಂಡನ ಮನೆಗೆ ಹೋಗಬೇಕಾಗಿತ್ತು. ಅಲ್ಲಿ ಹೋದಮೇಲೆ ಯಜಮಾನಿಯ ಸೇವೆಯ ಜೊತೆಗೆ ಅವಳ ಗಂಡನ (ಯಜಮಾನನ) ಲೈಂಗಿಕ ಅವಶ್ಯಕತೆಯನ್ನು ಪೂರೈಸಬೇಕಾಗಿತ್ತು. ಇಲ್ಲಿಯ ಮಹಿಳೆಯರು ಜಮೀನ್ದಾರರಿಗೆ ಲೈಂಗಿಕ ಅಗತ್ಯಗಳನ್ನು ಪೂರೈಸುವ ವಸ್ತುವಾಗಿ ಬಿಟ್ಟಿದ್ದರು. ಪುರುಷರಿಂದ ಬಿಟ್ಟಿಚಾಕರಿಯನ್ನು ಮಾಡಿಸಿಕೊಂಡರೆ, ಸ್ತ್ರೀಯರು ಅವರ ಕಾಮದಾಹವನ್ನು ತೀರಿಸುವ ವಸ್ತುವಾದರು. ಇದು ಜಮೀನ್ದಾರರ ಭೂಮಿಯಲ್ಲಿ ದುಡಿಯುವ ಮಹಿಳೆ ಮತ್ತು ಪುರುಷರ ಸ್ಥಿತಿಯಾಗಿದೆ.

ಇನ್ನು ನಿಜಾಮನ ಅಧೀನದಲ್ಲಿರುವ ಭೂಮಿಯಲ್ಲಿ ನೆಲೆಸಿದವರಿಗೆ ದೇಶಮುಖರು ಧಣಿಗಳಾಗಿದ್ದರು. ಜಮೀನಿನ ಉಸ್ತುವಾರಿಯಾಗಿದ್ದ ದೇಶಮುಖರ ಕೂಲಿಯಾಳುಗಳಿಂದ ಬಲವಂತವಾಗಿ ದುಡಿಸಿಕೊಳ್ಳುವುದಲ್ಲದೆ ಮನಸ್ಸಿಗೆ ಬಂದಂತೆ ಹೊಡೆದು ಬಡೆದು ಹಿಂಸಿಸುತ್ತಿದ್ದರು. ಇದು ಪುರುಷರು ಅನುಭವಿಸುವ ಹಿಂಸೆಯಾದರೆ ಈ ಸ್ಥಳದಲ್ಲಿರುವ ಮಹಿಳೆಯರ ಸ್ಥಿತಿಗತಿಯಲ್ಲಿ ಮೇಲ್ವರ್ಗದ ಮಹಿಳೆಯರು 'ಪರದಾ'ವನ್ನು ಧರಿಸುತ್ತಿದ್ದುದ್ದರಿಂದ ರೈತ ಮಹಿಳೆಯರು ಅನುಭವಿಸುತ್ತಿರುವಂತಹ ಶೋಷಣೆಯಿಂದ ಪಾರಾಗಿದ್ದರು. ರೈತರು ಬಿಟ್ಟಿಚಾಕರಿ ಮಾಡುವುದು, ದೇಶಮುಖರಿಂದ ಅಂದರೆ ತಮ್ಮ ಧಣಿಗಳಿಂದ ಹೊಡೆತಕ್ಕೆ ಒಳಗಾಗುವುದು, ಅವರಿಂದ ಕೊಲೆ ಸುಲಿಗೆಗಳಿಗೂ ಒಳಗಾಗುತ್ತಿದ್ದರು. ಇದರಿಂದ ನಾಗರಿಕರು ತಮ್ಮ ಸ್ವತಂತ್ರತೆಯನ್ನೇ ಕಳೆದುಕೊಂಡು ಬಂಧನದ ಜೀವನವನ್ನು ನಡೆಸಬೇಕಾಯಿತು. ಇದರಿಂದ ಬೇಸತ್ತ ಜನರು ನಿಜಾಮನ ಆಳ್ವಿಕೆಯನ್ನು ದ್ವೇಷಿಸಲು ಪ್ರಾರಂಭಿಸಿದರು. ಹೇಗಾದರೂ ಮಾಡಿ ನಿಜಾಮನ ಆಳ್ವಿಕೆಯನ್ನು ಕೊನೆಗೊಳಿಸಬೇಕೆಂದರು. ಆದರೆ ಭಾರತಕ್ಕೆ ಸ್ವಾತಂತ್ರ್ಯ ಬರಲಿರುವ ಸಮಯದಲ್ಲಿ ನಿಜಾಮನು

ತನ್ನ ಸಂಸ್ಥಾನವನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿರುವಾಗ, ''ಕಮ್ಯೂನಿಷ್ಟ್ ಪಾರ್ಟಿಯು ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್, ಅಖಿಲ ಹೈದ್ರಾಬಾದ್ ವಿದ್ಯಾರ್ಥಿ ಒಕ್ಕೂಟ, ಆಂಧ್ರ ಮಹಾಸಭಾಗಳಿಗೂ, ಎಲ್ಲಾ ಮಹಿಳಾ ಸಂಸ್ಥೆಗಳಿಗೂ ನಿಜಾಮನ ವಿರುದ್ಧ ಹೋರಾಟದಲ್ಲಿ ತನ್ನೊಂದಿಗೆ ನಿಲ್ಲಬೇಕೆಂದು ಕರೆಕೊಟ್ಟಿತು. ತೆಲಂಗಾಣ ಚಳುವಳಿಯು ತನ್ನ ಉತ್ತುಂಗ ಸ್ಥಿತಿಯಲ್ಲಿ ಮೂರು ಸಾವಿರ ಹಳ್ಳಿಗಳ ಮೂರು ಲಕ್ಷ ಮಂದಿಗೆ ಸಂಬಂಧಿಸಿ ವ್ಯಾಪಿಸಿತ್ತು.'' (ಜೆರಾಲ್ಡಿನ್ ಫೋರ್ಬ್ಸ್., ೨೦೦೧, ಪು ೩೨೩) ದೇಶಮುಖರ ಮತ್ತು ಜಮೀನ್ದಾರರ ದರ್ಬಾರಿನಲ್ಲಿ ನೊಂದ ಮಹಿಳೆಯರು ಹೋರಾಟಕ್ಕಿಳಿದರು. ಭೂಮಿ, ಉತ್ತಮ ವೇತನ, ಬಲವಂತದ ದುಡಿಮೆಯ ನಿಷೇಧ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಮಹಿಳೆಯರು ಪುರುಷರೊಡನೆ ಹೋರಾಡಿದರು. ಈ ಹೋರಾಟದಲ್ಲಿ ಪುರುಷರು ಅನುಭವಿಸಿದ ಹಿಂಸೆಯನ್ನು ಮಹಿಳೆಯರೂ ಅನುಭವಿಸಿದರು. ನಿಜಾಮನ ವಿರುದ್ಧ ಹೋರಾಡಲು ರಚಿಸಿದ್ದ ಗೆರಿಲ್ಲಾ ಪಡೆಗಳನ್ನು ಕಾಪಾಡುವ ಕೆಲಸ ಮಾಡುವುದು, ಪುರುಷರು ಅಡಗಿರುವ ಸ್ಥಳಕ್ಕೆ ಹೋಗಿ ಆಹಾರ ಕೊಡುತ್ತಿದ್ದರು. ಈ ಹೋರಾಟದಲ್ಲಿ ಸ್ತ್ರೀಯರು ಕೊರಿಯರ್‌ಗಳಾಗಿ, ರಾಜಕೀಯ ಪ್ರತಿಭಟನಾಕಾರರಾಗಿ ಜವಾಬ್ದಾರಿಗಳನ್ನು ನಿರ್ವಹಿಸಿದ್ದಾರೆ. ಈ ಹೋರಾಟದಲ್ಲಿ ರಜಾಕರು ಜೀವಂತವಾಗಿ ಮನುಷ್ಯರನ್ನು ಸುಡುತ್ತ ಮಹಿಳೆಯರ ಮೇಲೆ ಅತ್ಯಾಚಾರವೆಸಗಿದರು. ಆದರೂ ಮಹಿಳೆಯರು ತಮ್ಮ ಹೋರಾಟದ ಹೆಜ್ಜೆಯನ್ನು ಹಿಂದಿಡದೆ ತಮ್ಮ ಆತ್ಮ ಗೌರವವನ್ನು ಕಾಪಾಡಿಕೊಳ್ಳುವುದಕ್ಕೆ, ಸೈನಿಕರ ದೌರ್ಜನ್ಯದಿಂದ ಆಗುವ ಪ್ರಾಣಬಲಿಯನ್ನು ರಕ್ಷಿಸಲು ಮಹಿಳೆಯರು ಧೈರ್ಯಗೆಡದೆ ಹೋರಾಟವನ್ನು ಮುಂದುವರೆಸಿದರು. ಹೀಗೆ ಮಹಿಳೆಯರು ಮತ್ತು ಪುರುಷರು ಪ್ರತಿದಾಳಿ ಮಾಡಿ ಭೂಮಿಯನ್ನು ರೈತರು ವಶಪಡಿಸಿಕೊಂಡರು. ಈ ರೀತಿ ವಶಪಡಿಸಿಕೊಂಡಂಥ ಭೂಮಿಯನ್ನು ತಮ್ಮಲ್ಲಿಯೇ ಹಂಚಿಕೊಂಡರು. ಈ ಹೋರಾಟದಿಂದ ಪುರುಷರ 'ಬಿಟ್ಟಿ'ಚಾಕರಿ ಮಹಿಳೆಯರು ಅನುಭವಿಸುತ್ತಿರುವ 'ಆದಿಬಾಪ' (ಉಪಪತ್ನಿತ್ವ) ಮುಂತಾದ ಶೋಷಣೆಗಳಿಂದ ಬಿಡುಗಡೆ ಹೊಂದಿದರು. ೧೯೪೮ರಲ್ಲಿ ಹೈದ್ರಾಬಾದನ್ನು ಭಾರತದಲ್ಲಿ ವಿಲೀನಗೊಳಿಸಲಾಯಿತು. ೧೯೫೧ರ ಹೊತ್ತಿಗೆ ಈ ಚಳುವಳಿಯನ್ನು ಕೊನೆಗೊಳಿಸಲಾಯಿತು.

ಈ ಚಳುವಳಿಯಲ್ಲಿ ಮಹಿಳೆಯರು ಮಾಡಿರುವಂಥ ತ್ಯಾಗಗಳಿಗೆ ಮಿತಿಯೆ ಇಲ್ಲವೆಂದು ಹೇಳಬಹುದು. ಇಷ್ಟಾದರೂ ಮಹಿಳೆಯರಿಗೆ ಭೂಮಿಯ ಹಕ್ಕು ಸಮರ್ಪಕವಾಗಿ ಪಡೆಯಲು ಸಾಧ್ಯವಾಗಿಲ್ಲ. ಪತಿಯ ಮರಣದ ನಂತರ ವಿಧವೆಗೆ ಮಾತ್ರ ಜಮೀನಿನ ಹಕ್ಕು ದೊರೆಯಿತು. ಕಾರಣ ರಾಜಕೀಯ ಮುಖಂಡರು ತೆಲಂಗಾಣ ಹೋರಾಟದಲ್ಲಿ ಮಹಿಳೆಯರ ಸಹಭಾಗಿತ್ವಕ್ಕೆ ಪುರುಷರ ಭಾಗಿತ್ವದಷ್ಟು ಮಹತ್ವವನ್ನು ನೀಡದೇ ಇರುವುದು. ಮಹಿಳೆಯರಿಗಾಗಿ ಒಂದು ಕಾನೂನನ್ನು ಸಹ ಜಾರಿಗೊಳಿಸಲಿಲ್ಲ. ಪುರುಷರಿಗೆ ಸಹಭಾಗಿಯಾಗಿ ಅವಳು ಹಿಂಸೆ ಅನುಭವಿಸಿ ಈ ಹೋರಾಟದಲ್ಲಿ ಪಾಲ್ಗೊಂಡರೂ ಅವಳ ತ್ಯಾಗಕ್ಕೆ ಬೆಲೆಯಿಲ್ಲದಂತಾಯಿತು. ಪುರುಷರು ಮಾತ್ರ ಭೂಮಿಯನ್ನು ಹಂಚಿಕೊಂಡಂತೆ ಮಹಿಳೆಯು ಭೂಮಿಗಾಗಿ ಪುರುಷನ ಜೊತೆ ತನ್ನ ಪ್ರಾಣವನ್ನೇ ಒತ್ತೆಯಿಟ್ಟು ಹೋರಾಡಿದರೂ ಅವಳು ಭೂಮಿಯ ಹಕ್ಕಿನಿಂದ ವಂಚಿತಳಾದಳು. ಆದರೆ ಅವಳು ಇತರ ಶೋಷಣೆಗಳಿಂದ, ಮೂಢನಂಬಿಕೆಗಳಿಂದ ಹೊರ ಬರಲು ಪ್ರಯತ್ನಿಸಿದಳು. ಅವರಿಗೆ ವಿಶಿಷ್ಟ ಕೂಲಿ, ಗಂಡನು ಹೆಂಡತಿಗೆ ಹೊಡೆಯುವುದನ್ನು ಹೋಗಲಾಡಿಸಲಾಯಿತು. ಆದರೆ ಭೂಮಿಯಂತಹ ಆಸ್ತಿಯಿಂದ ದೂರ ಉಳಿಯುವಂತಾಯಿತು.

ತೆಲಂಗಾಣ ಹೋರಾಟದಲ್ಲಿ ಸಾವಿರಾರು ಮಹಿಳೆಯರು ತಮ್ಮ ಪುರುಷರೊಂದಿಗೆ ಭೂಮಿಗಾಗಿ, ದಕ್ಕಿದ ಭೂಮಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಹೋರಾಡಿದರು. ವಿರ್ಯಾಲಗೂಡೆಂ ತಾಲೂಕು ಮುಕುಂದಾಪುರದಲ್ಲಿ ಒಬ್ಬ ಧನಿಕ ಕುಮ್ಮರಿಮಟ್ಟಯ್ಯನ ಭೂಮಿಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸಿದ. ಮಟ್ಟಯ್ಯ

ಅದಕ್ಕೆ ಒಪ್ಪದಿದ್ದಾಗ ಧನಿಕ ನೆಹರೂ ಸೈನ್ಯದ ಸಹಾಯದಿಂದ ಅವನನ್ನು ಚಿತ್ರಹಿಂಸೆ ಮಾಡಿ ಸಾಯಿಸಿದ. ಆದರೆ ಮಟ್ಟಯ್ಯನ ಹೆಂಡತಿ ಧೈರ್ಯಗುಂದದೇ ಹೋರಾಟಕ್ಕೆ ಇಳಿದು, ಭೂಮಿಯನ್ನು ಬಿಡುವುದಿಲ್ಲವೆಂದು ಹಟಹಿಡಿದಳು. ಆಗ ಪೋಲಿಸರು ಆಕೆಯನ್ನು ಕೆಡಿಸಿದರು, ಅವಳು ಧೈರ್ಯಗೆಡದೇ ಊರ ಜನರ ಸಹಾಯವನ್ನು ಪಡೆದು ಭೂಮಿಯನ್ನು ತನ್ನದಾಗಿಸಿಕೊಂಡಳು.

ವಾಡಪಲ್ಲಿ ಎಂಬಲ್ಲಿ ಜಮೀನ್ದಾರನಿಗೆ ಲಂಬಾಣಿ ರೈತನು ಭೂಮಿಯನ್ನು ಒಪ್ಪಿಸದ ಕಾರಣ ಜಮೀನ್ದಾರನು ಲಂಬಾಣಿ ರೈತನನ್ನು ಕೊಲೆ ಮಾಡಿಸಿದ. ಆಗ ಆತನ ಹೆಂಡತಿಯು ಧೈರ್ಯಗುಂದದೆ ಕಾಂಗ್ರೆಸ್ ಪೋಲಿಸರನ್ನು ಎದುರಿಸಿ ಭೂಮಿಯನ್ನು ಪಡೆದುಕೊಂಡಳು. ಇಂತಹ ಘಟನೆಗಳು ತೆಲಂಗಾಣದಲ್ಲಿ ನೂರಾರು ನಡೆದಿವೆ, ಪತಿಯ ಜೊತೆಗೂ ಹೋರಾಡಿ ಪತಿಯ ಮರಣದ ನಂತರವು ಧೈರ್ಯಗೆಡದೆ ವೀರನಾರಿಯರಂತೆ ಜಮೀನ್ದಾರರ ವಿರುದ್ಧ ಹೋರಾಡಿ ಭೂಮಿಯನ್ನು ತಮ್ಮದಾಗಿಸಿಕೊಂಡಿರುವ ಉದಾಹರಣೆಗಳಿವೆ. ಈ ರೀತಿ ಪತಿಯ ಮರಣದನಂತರ ಮಹಿಳೆಯರು ಸ್ವತಃ ಹೋರಾಡಿ ಪಡೆದುಕೊಂಡಿರುವ ಭೂಮಿಯು ಮಾತ್ರ ಮಹಿಳೆಯರ ಅಧೀನದಲ್ಲಿದೆ. ಹೋರಾಟದಲ್ಲಿ ಪಡೆದುಕೊಂಡಿರುವ ಭೂಮಿಯು ಮಾತ್ರ ಮಹಿಳೆಯ ಅಧೀನದಲ್ಲಿರದೆ ಪುರುಷರಿಗೆ ದಕ್ಕಿದೆ.

ಸಾವಿರಾರು ಮಹಿಳೆಯರು ಪುರುಷರ ಜೊತೆ ಹೋರಾಡುವ ಸಂದರ್ಭದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಿರುವರು ಮತ್ತು ಪುರುಷರಿಗೆ ತುಂಬಾ ನೆರವಾಗಿರುವರು. ''ಗೋದಾವರಿ ಕಾಡಿನಲ್ಲಿ ಗುಂಡಾಲ ಕೋಯ ಗಿರಿಜನರ ಹಾಡಿಯಿಂದ ಪೋಲಿಸರು ಪುರುಷರನ್ನು ಹಿಡಿದುಕೊಂಡು ಹೋಗಲು ಯತ್ನಿಸುತ್ತಿರುವ ಸಂದರ್ಭದಲ್ಲಿ ಮಹಿಳೆಯರು ಪೋಲಿಸರನ್ನು ಮುತ್ತಿದರು. ಆಗ ಪೋಲೀಸರು ಗುಂಡು ಹಾರಿಸಲು ಆರಂಭಿಸಿದಾಗ ಅವರು ಮರಗಳ ಮರೆ ನಿಂತು ಕಲ್ಲು ಬೀಸಲು ಪ್ರಾರಂಭಿಸಿದರು. ಕೊನೆಗೆ ಪೋಲೀಸರು ಆ ಕಲ್ಲಿನ ಏಟನ್ನು ತಾಳಲಾರದೆ ಪುರುಷರನ್ನು ಬಿಟ್ಟುಹೋದರು. ಅದೇ ರೀತಿ ಗುಂಡಾಲ ಪ್ರದೇಶದಲ್ಲಿಯೇ ಕಟ್ಟುಗೊಡೆಂ ಎಂಬ ಕೋಯಿ ಗಿರಿಜನರ ಮೇಲೆ ಮಿಲಿಟರಿಯವರು ದಾಳಿ ಮಾಡಿದಾಗ ಮಿಲಿಟರಿಯವರ ವಿರುದ್ಧ ಸ್ತ್ರೀಯರು ಮತ್ತು ಪುರುಷರು ಪ್ರತಿಭಟಿಸಿದರು. ಈ ಪ್ರತಿಭಟನೆಯಲ್ಲಿ ಒಬ್ಬ ಸುಭೇದಾರನನ್ನು ಮತ್ತು ಮೂವರು ಸೈನಿಕರನ್ನು ಕೊಂದು ಅವರ ಆಯುಧಗಳನ್ನು ವಶಪಡಿಸಿಕೊಂಡರು. ಇದನ್ನು ನೋಡಿದ ಮಿಲಿಟರಿ ಸೈನ್ಯವು ಓಡಿಹೋಗಿ ದೊಡ್ಡ ಪ್ರಮಾಣದ ಸೈನ್ಯದೊಂದಿಗೆ ಮತ್ತೆ ದಾಳಿಮಾಡಿತು. ಆಗ ಅಲ್ಲಿಯ ಸ್ತ್ರೀ - ಪುರುಷರು ಕಾಡಿನಲ್ಲಿ ತಲೆಮರೆಸಿಕೊಂಡರು. ಈ ಸಂದರ್ಭದಲ್ಲಿ ಸ್ತ್ರೀಯರು ತೋರಿದ ಸಹನೆಗೆ ಮಿತಿಯೆ ಇಲ್ಲ. ಮಕ್ಕಳ ಜೊತೆ ತಲೆಮರೆಸಿಕೊಂಡಿರುವ ಸ್ತ್ರೀಯರು ಮಕ್ಕಳು ಅತ್ತರೆ ಆ ಶಬ್ದಕೇಳಿ ಮಿಲಿಟರಿಯವರು ಬರುವರೆಂದು ತಮ್ಮ ಮಕ್ಕಳನ್ನು ಅಳದಂತೆ ನೋಡಿಕೊಂಡಿರುವರು. ಈ ಸಂದರ್ಭದಲ್ಲಿ ಬಂದಂಥ ಅನೇಕ ಸಮಸ್ಯೆಗಳನ್ನು ಎದುರಿಸಿ ತಮ್ಮಲ್ಲಿರುವ ಗಟ್ಟಿತನವನ್ನು ನಿರೂಪಿಸಿದ್ದಾರೆ. ಗೆರಿಲ್ಲಾ ದಳಗಳಿಗೆ ಆಗಲಿ, ಪಕ್ಷದ ನಾಯಕರೆ ಆಗಲಿ ತಮ್ಮ ತಮ್ಮ ಮನೆಗಳಲ್ಲಿ ತಲೆಮರೆಸಿಕೊಂಡರೆ ಆ ಮನೆಯ ಸ್ತ್ರೀಯರು ಅವರಿಗೆ ಕಾವಲಾಗಿದ್ದರು. ಪಕ್ಷದ ನಾಯಕರು ನಿದ್ದೆ ಹೋಗುತ್ತಿದ್ದರೆ ರಾತ್ರಿಯೆಲ್ಲ ಸ್ತ್ರೀಯರು ಜಾಗರಣೆ ಮಾಡಿ ಕಾವಲು ಕಾಯುತ್ತಿದ್ದರು.'' (ಸುಜ್ಞಾನಮೂರ್ತಿ, ೨೦೦೬, ಪು ೧೩೫) ಈ ರೀತಿಯಲ್ಲಿ ಮಹಿಳೆಯರು ತೆಲಂಗಾಣ ಹೋರಾಟದಲ್ಲಿ ಪುರುಷರಿಗೆ ಸಹಾಯ ಮಾಡಿರುವುದು ಕಂಡುಬರುತ್ತದೆ. ಪ್ರತಿಯೊಂದು ಯಶಸ್ಸಿನ ಹಿಂದೆ ಸ್ತ್ರೀಯರ ಪಾತ್ರ ಬಹಳ ಮುಖ್ಯ ಎಂಬುದನ್ನು ಈ ಹೋರಾಟಗಳು ನಿರೂಪಿಸಿದವು. ಆದರೆ ಯಾವುದೇ ರೈತ ಚಳುವಳಿಯನ್ನು ಗಮನಿಸಿದರೂ ಮಹಿಳೆಯರನ್ನು ಆ ಚಳುವಳಿಯ ಒಂದು ಭಾಗವೆಂದು ಪರಿಗಣಿಸಿಲ್ಲ. ಇದರಿಂದ ಯಾವುದೇ ಚಳುವಳಿಯಲ್ಲೂ ಇವರಿಗೆ ನ್ಯಾಯ ದೊರಕಲಿಲ್ಲ. ತೆಲಂಗಾಣದಲ್ಲಿ ಭೂ ಹೋರಾಟ

ಮಾಡುವಲ್ಲಿ ಭಾಗವಹಿಸಿದರೂ ಚಳುವಳಿಗೆ ಜಯ ದೊರೆತೊಡನೆಯೇ ಪುರುಷರು ತಮ್ಮ ತಮ್ಮಲ್ಲಿಯೇ ಭೂಮಿಯನ್ನು ಹಂಚಿಕೊಂಡರು. ಮಹಿಳೆಯರು ಚಳುವಳಿಯಲ್ಲಿ ಸಮಾನ ಭಾಗಿದಾರರಾಗಿದ್ದಾರೆ, ಅವರಿಗೂ ಈ ಭೂಮಿಯ ಮೇಲೆ ಹಕ್ಕಿದೆಯೆಂದು ಯಾರು ಯೋಚಿಸಲಿಲ್ಲ. ಕಾರಣ ನಮ್ಮ ಸಮಾಜದ ವ್ಯವಸ್ಥೆಯಲ್ಲಿ ಆದಾಯ ತರುವ ಆಸ್ತಿಯಾದ ಭೂಮಿಯ ಒಡೆಯ ಪುರುಷನೆ ಎಂದು ಪರಂಪರಾಗತವಾಗಿ ಬಂದಿರುವ ನಂಬಿಕೆ ಇರುವುದರಿಂದ ಆಸ್ತಿಯ ಒಡೆಯ ಪುರುಷನೆ ಆಗಿರುವುದರಿಂದ, ಮಹಿಳೆಗೆ ಭೂಮಿಯು ದಕ್ಕದೆ ಹೋಗಿದೆ.

### ೬.೧.೪. ಭೂದಾನ ಚಳುವಳಿ (೧೯೫೧ - ೧೯೬೧)

ಗಾಂಧೀಜಿಯವರ ಮಾರ್ಗದರ್ಶನದಲ್ಲಿ ಸತ್ಯ ಮತ್ತು ಅಹಿಂಸೆ ತತ್ವಗಳ ಮೂಲಕ ಭಾರತದಲ್ಲಿ ಭೂಹೀನರ ಸಮಸ್ಯೆಗಳನ್ನು ಪರಿಹರಿಸುವ ಒಂದು ಪ್ರಯತ್ನ ಭೂದಾನ ಚಳುವಳಿಯ ಮೂಲಕ ನಡೆಯಿತು. ''ಗಾಂಧೀಜಿಯವರ ಹಿರಿಯ ಅನುಯಾಯಿಯಾದ ಆಚಾರ್ಯ ವಿನೋಬಾ ಭಾವೆಯವರು, ಹೈದ್ರಾಬಾದಿನ ಶಿವರಾಮಪಲ್ಲಿಯಲ್ಲಿ ೧೯೫೧ ಮಾರ್ಚ್, ೮ರಂದು 'ಭೂದಾನ' ಚಳುವಳಿಯನ್ನು ಪ್ರಾರಂಭಿಸಿದರು.'' (ಚೆನ್ನಣ್ಣ ವಾಲೀಕಾರ, ೧೯೯೮, ಪು ೮೯೪) ನಮ್ಮ ದೇಶದ ಭೂಮಿಯ ಒಡೆತನ ಪದ್ಧತಿಯು ತುಂಬಾ ಅಸಮಾನತೆಯಿಂದ ಕೂಡಿರುವುದರಿಂದ ಈ ಅಸಮಾನತೆಯನ್ನು ತೊಡೆದು ಹಾಕಲು ಸರ್ಕಾರವು ಜಮೀನ್ದಾರಿ ಪದ್ಧತಿಯನ್ನು ರದ್ದುಗೊಳಿಸುವ ಮತ್ತು ಭೂ ಸುಧಾರಣೆಯ ಅಧಿಕೃತ ಕಾನೂನುಗಳ ಮೂಲಕ ಸುಧಾರಿಸಲು ಯತ್ನಿಸಿತು. ಆದರೆ ಕಾನೂನಿನ ಸಹಾಯವಿಲ್ಲದೆಯೇ ದೊಡ್ಡ ದೊಡ್ಡ ಜಮೀನುದಾರರ ಹೃದಯವನ್ನು ಗೆದ್ದು, ಅವರ ಮನಸ್ಸನ್ನು ಪರಿವರ್ತಿಸಿ ತಮ್ಮ ಜಮೀನಿನ ಒಂದು ಭಾಗವನ್ನು ಭೂಮಿಯಿಲ್ಲದ ಸಾಗುವಳಿದಾರರಿಗೆ ಕೊಡುವಂತೆ ಪ್ರೇರೇಪಿಸುವುದು ಭೂದಾನ ಚಳುವಳಿಯ ಮುಖ್ಯ ಉದ್ದೇಶವಾಗಿದೆ. ಭೂಮಿಯನ್ನು ದಾನವಾಗಿ ನೀಡುವುದನ್ನು 'ಭೂದಾನ'ಎನ್ನಲಾಗಿದೆ. ಇದು ಒಂದು ಚಳುವಳಿಯ ರೂಪದಲ್ಲಿ ಇಡೀ ಭಾರತ ದೇಶದಾದ್ಯಂತ ನಡೆಯಿತು. ಒಂದು ಕುಟುಂಬಕ್ಕೆ ಐದು ಅಥವಾ ಆರು ಎಕರೆ ಭೂಮಿಯ ಅಗತ್ಯವಿದೆ. ಆದರೇ ಕೆಲವು ಜನರು ಭೂಮಿಯನ್ನು ಅಧಿಕವಾಗಿ ಅನುಭವಿಸಿ ಕೆಲವರಿಗೆ ಭೂಮಿಯೇ ಇಲ್ಲದಂತಾಗಿತ್ತು. ಅದಕ್ಕಾಗಿ ಭೂಮಿಯು ಎಲ್ಲರಿಗೂ ಸೇರಿದ್ದರಿಂದ ಭೂಮಿಯಲ್ಲಿ ಎಲ್ಲರಿಗೂ ಸಮಪಾಲು ಇರುವಂತೆ ಮಾಡುವುದೇ 'ಭೂದಾನ' ಚಳುವಳಿಯ ಗುರಿಯಾಗಿತ್ತು.

ಹೈದ್ರಾಬಾದಿನ ತೆಲಂಗಾಣ ಜಿಲ್ಲೆಯಲ್ಲಿ ಜಮೀನ್ದಾರಿ ಪದ್ಧತಿಯು ವ್ಯಾಪಕವಾಗಿರುವುದರಿಂದ ಜಮೀನ್ದಾರರು ಅಲ್ಲಿಯ ಇಡೀ ಭೂಮಿಯನ್ನು ತಮ್ಮ ವಶದಲ್ಲಿಟ್ಟುಕೊಂಡಿದ್ದರು. ಇದರಿಂದ ಲಕ್ಷಾಂತರ ಭೂ ಹೀನ ಕೃಷಿ ಕಾರ್ಮಿಕರು ಮತ್ತು ಗೇಣಿದಾರರು ಶೋಷಣೆಗೆ ಒಳಗಾಗಬೇಕಾಯಿತು. ಭೂಮಿಯಿಲ್ಲದೆ ಇರುವುದರಿಂದ ಬಡತನ ತಾಂಡವಾಡುತ್ತಿತ್ತು. ಈ ಸ್ಥಿತಿಯನ್ನು ಸಹಿಸದೆ ಕೃಷಿ ಕಾರ್ಮಿಕರು ಜಮೀನ್ದಾರರ ವಿರುದ್ಧ ದಂಗೆ ಎದ್ದರು. ಈ ಸಂದರ್ಭದಲ್ಲಿ ಕೃಷಿ ಕಾರ್ಮಿಕರು ಜಮೀನ್ದಾರರ ಕೊಲೆಯನ್ನು ಸಹ ಮಾಡಿದರು. ಅಲ್ಲದೆ ಆಸ್ತಿ ಪಾಸ್ತಿಗಳ ಲೂಟಿ ಸಹ ಆದವು. ಇಂಥ ಸನ್ನಿವೇಶದಲ್ಲಿಯೇ ಅಹಿಂಸೆಯ ಸಂದೇಶವನ್ನು ಬೀರಲು ವಿನೋಬಾ ಭಾವೆಯವರು ತೆಲಂಗಾಣಕ್ಕೆ ಬಂದರು. ಅಲ್ಲಿಯ ಭೂ ಹೀನರ ಪರಿಸ್ಥಿತಿಯನ್ನು ಕಂಡ ವಿನೋಬಾ ಭಾವೆಯವರು ಗ್ರಾಮಸ್ಥರ ಸಭೆಯನ್ನು ಸೇರಿಸಿ ಸಮಸ್ಯೆಯನ್ನು ಪ್ರಸ್ತಾವಿಸಿದಾಗ ರಾಮಚಂದ್ರರೆಡ್ಡಿ ಎಂಬ ಭೂ ಮಾಲೀಕನು ತನ್ನಲ್ಲಿರುವ ನೂರು ಎಕರೆ ಭೂಮಿಯನ್ನು ದಾನ ಮಾಡಿದ. ಆ ಭೂಮಿಯು ಅಲ್ಲಿಯ ಭೂಹೀನರಿಗೆ ಹಂಚಿಕೆಯಾಯಿತು. ಹೀಗೆ ಒಂದೊಂದು ದಿನ ಒಂದೊಂದು ಹಳ್ಳಿಯ ಜಮೀನ್ದಾರರಿಂದ ಭೂಮಿಯನ್ನು ಪಡೆದು ಭೂಹೀನರಿಗೆ ಹಂಚಲಾಯಿತು. ಈ ರೀತಿ ಸತತವಾಗಿ ಎರಡು ತಿಂಗಳು ತೆಲಂಗಾಣದಲ್ಲಿ ಭೂದಾನ ಸಂದೇಶವನ್ನು ಬೀರಿದರು. ನ್ಯಾಯ ಮತ್ತು ಸಮಾನತೆಯಿರುವ

ಸಮಾಜದಲ್ಲಿ ಭೂಮಿಯು ಎಲ್ಲಾ ಜನರಿಗೆ ಸೇರಿದ ಆಸ್ತಿ, ''ಭೂಮಿಯುಳ್ಳವರು ಭೂಹೀನರಿಗೆ ಒಂದು ಭಾಗವನ್ನು ಹಂಚಿಕೊಡಬೇಕು. ನಿಮ್ಮ ಕುಟುಂಬದಲ್ಲಿ ಐದು ಮಕ್ಕಳಿದ್ದರೆ ಭೂ ಹೀನ ರೈತನನ್ನು ಆರನೆಯ ಮಗನೆಂದು ತಿಳಿಯಿರಿ. ನಿಮ್ಮ ಭೂಮಿಯ ಆಸ್ತಿಯಲ್ಲಿ ಆರನೆಯ ಭಾಗವನ್ನು ಅವನಿಗೂ ಕೊಡಿ ಎಂಬ ಸಂದೇಶವನ್ನು ಪ್ರಸಾರ ಮಾಡುತ್ತ ನಡೆದರು.'' (ಚೆನ್ನಣ್ಣ ವಾಲೀಕಾರ, ೧೯೯೮, ಪು ೮೯೪) ಅವರು ಹೋದ ಕಡೆಯೆಲ್ಲ ಭೂಮಿಯು ದಾನವಾಗಿ ಬಂದಿರುವುದನ್ನು ಭೂ ಹೀನರಿಗೆ ಹಂಚುತ್ತ ಹೋದರು. ಈ ರೀತಿ ತೆಲಂಗಾಣದಲ್ಲಿ ಜಮೀನ್ದಾರ ಮತ್ತು ಭೂಹೀನರ ಮಧ್ಯೆ ಶಾಂತಿ ಮತ್ತು ನೆಮ್ಮದಿ ನೆಲೆಗೊಳ್ಳುವಂತೆ ಮಾಡಿದರು. ವಿನೋಬಾ ಭಾವೆಯವರು ಸತತವಾಗಿ ೨೮ ತಿಂಗಳು ಭೂದಾನ ಚಳುವಳಿಗಾಗಿ ಶ್ರಮಿಸಿದರು. ಈ ಚಳುವಳಿಯಲ್ಲಿ ಒಟ್ಟು ೨೩ ಲಕ್ಷ ಎಕರೆಯಷ್ಟು ಭೂಮಿಯನ್ನು ದಾನವಾಗಿ ಪಡೆದು ಅಲ್ಲಿಯ ಭೂ ರಹಿತ ಕುಟುಂಬಗಳಿಗೆ ಹಂಚಿದರು. ಈ ಕಾರ್ಯಕ್ಕೆ ಸರ್ಕಾರದ ಸಹಕಾರ ಹಾಗೂ ಕಾನೂನಿನ ಅಂಗೀಕಾರ ದೊರೆಯಿತು. ಹಲವಾರು ರಾಜ್ಯ ಸರ್ಕಾರಗಳು ಭೂದಾನ ಕಾನೂನನ್ನು ಜಾರಿ ಮಾಡಿವೆ. ''ಭೂದಾನ ಚಳುವಳಿ ಆರಂಭವಾದ ಮೇಲೆ ಮೊದಲ ೧೦ ವರ್ಷಗಳಲ್ಲಿ ಸುಮಾರು ೫೦ ಲಕ್ಷ ಎಕರೆಗಳಷ್ಟು ಜಮೀನು ಸಂಗ್ರಹವಾಯಿತು. ಅನಂತರ ಭೂದಾನ ದೊರಕಿದ ಗ್ರಾಮಗಳಲ್ಲಿ ಗ್ರಾಮಸ್ಥರ ಸಭೆಗಳನ್ನು ಕರೆದು ಆ ಗ್ರಾಮದ ಭೂಹೀನ ಬಡ ಕೃಷಿ ಕಾರ್ಮಿಕರ ಮಾಹಿತಿ ಸಂಗ್ರಹಿಸಿ ಗ್ರಾಮಸ್ಥರ ಅಭಿಪ್ರಾಯದಂತೆ ಅರ್ಹರಾದ ಭೂಹೀನ ಕಾರ್ಮಿಕರಿಗೆ ಭೂಮಿ ಹಂಚುವ ಕೆಲಸ ವ್ಯವಸ್ಥಿತವಾಗಿ ನಡೆಯಿತು. ಈ ಚಳುವಳಿ ಪ್ರಾರಂಭವಾದ ಒಂದು ದಶಕದಲ್ಲಿ ಸುಮಾರು ಮೂರು ಲಕ್ಷ ಭೂಹೀನ (ಭೂರಹಿತ) ಕೃಷಿ ಕಾರ್ಮಿಕರ ಕುಟುಂಬಗಳಿಗೆ ಜಮೀನನ್ನು ಹಂಚಲಾಗಿದೆ.'' (ಚೆನ್ನಣ್ಣ ವಾಲೀಕಾರ, ೧೯೯೮, ಪು ೮೯೪)

ಈ ಚಳಿವಳಿಯನ್ನು ಪಶ್ಚಿಮ ಬಂಗಾಳ, ಒರಿಸ್ಸಾ, ಆಂಧ್ರ ಪ್ರದೇಶ, ತಮಿಳುನಾಡು, ಕೇರಳ, ಮಹಾರಾಷ್ಟ್ರ, ಗುಜರಾತ, ರಾಜಸ್ಥಾನ, ಪಂಜಾಬ್, ಕಾಶ್ಮೀರ ಮತ್ತು ಅಸ್ಸಾಂಗಳಲ್ಲಿ ವಿನೋಬಾ ಭಾವೆಯವರು ಪಾದಯಾತ್ರೆ ನಡೆಸಿ ಲಕ್ಷಾಂತರ ಭೂಮಿಯನ್ನು ಭೂ ಮಾಲೀಕರಿಂದ ಪಡೆದರು. ''೧೯೫೭ರ ಸೆಪ್ಟೆಂಬರ್‌ನಿಂದ ೧೯೫೮ರ ಮಾರ್ಚ್‌ರವರೆಗೆ ಕರ್ನಾಟಕದಲ್ಲಿ ಪಾದಯಾತ್ರೆ ಕೈಗೊಂಡಿದ್ದ ವಿನೋಬಾ ಭಾವೆ ೧೦ ಸಾವಿರ ಎಕರೆಗಿಂತ ಹೆಚ್ಚು ಭೂಮಿಯನ್ನು ದಾನವಾಗಿ ಪಡೆದರು.'' (ಸತೀಶ್ ಪಾಟೀಲ, ೨೦೦೭, ಪು ೩೦) ಈ ಚಳುವಳಿಯಲ್ಲಿ ಪುರುಷರಷ್ಟೆ ಅಲ್ಲದೆ, ಮಹಿಳೆಯರು ಕೂಡ ಚಳುವಳಿಯಲ್ಲಿ ಭಾಗವಹಿಸಿರುವುದು ಕಂಡುಬರುತ್ತದೆ. ಕರ್ನಾಟಕ ರಾಜ್ಯದ ಧಾರವಾಡ ಜಿಲ್ಲೆಯಲ್ಲಿ ವಿನೋಬಾ ಭಾವೆಯವರ ಪ್ರಭಾವ ತೀವ್ರಗೊಂಡಿತು. ''ಭಾರತದಲ್ಲಿಯೇ ಪ್ರಥಮವಾಗಿ ಮಹಿಳಾ ಭೂದಾನ ಕಾರ್ಯಕರ್ತೆಯರ ತಂಡವೊಂದು ೧೯೫೮ರ ಸಂದರ್ಭದಲ್ಲಾಗಲೇ ರೂಪುಗೊಂಡಿತು. ಭಾಗೀರಥಿ ಬಾಯಿ ಪ್ರಭು, ಮೀರಾಬಾಯಿ ಕೊಪ್ಪಿಕರ, ಕೃಷ್ಣಬಾಯಿ ಪಂಡಿತ, ಲಕ್ಷ್ಮೀಬಾಯಿ, ಶ್ರೀಮತಿ ಚೆನ್ನಮ್ಮ ಹಳ್ಳೀಕೆರೆ.'' (ಸತೀಶ್ ಪಾಟೀಲ, ೨೦೦೭, ಪು ೩೦) ಮುಂತಾದವರು ಒಟ್ಟುಗೂಡಿ ರಚಿಸಿಕೊಂಡಿದ್ದ ಈ ತಂಡ ಭೂದಾನ ಪಡೆಯಲು ಹಾಗೂ ಸರ್ವೋದಯ ಗ್ರಾಮ ನಿರ್ಮಾಣ ಮಾಡಲು ಶ್ರಮಿಸಿದರು. ಭಾರತದಲ್ಲಿಯೇ ಭೂದಾನ ಮಹಿಳಾ ತಂಡ ಇದಾಗಿದ್ದರಿಂದ ಇವರಿಗೆ ವಿಶೇಷವಾಗಿ ಮಾನ್ಯತೆಯನ್ನು ನೀಡಲಾಗುತ್ತಿತ್ತು.

ಭೂದಾನ ಚಳುವಳಿಯು ತನ್ನ ಗುರಿಯಂತೆ ಭೂರಹಿತರಿಗೆ ಭೂಮಿಯನ್ನು ಒದಗಿಸುವ ಕಾರ್ಯದಲ್ಲಿ ಪೂರ್ಣ ಪ್ರಮಾಣದ ಯಶಸ್ಸನ್ನು ಪಡೆಯದಿದ್ದರೂ ಭೂ ಸುಧಾರಣೆಗೆ ತಕ್ಕ ವಾತಾವರಣ ಉಂಟುಮಾಡಿತು. ಈ ಚಳುವಳಿಯಲ್ಲಿ ವಿನೋಬಾ ಭಾವೆಯವರು ಜಮೀನ್ದಾರರಿಂದ ಭೂಮಿಯನ್ನು ದಾನವಾಗಿ ಪಡೆದು ಭೂರಹಿತ ಕುಟುಂಬಗಳಿಗೆ ಹಂಚಿದರು. ಆದರೆ ಇಲ್ಲಿ ಮಹಿಳೆಯರಿಗೆ ಭೂಮಿಯನ್ನು ಹಂಚಲಾಗಿದೆಯೆಂದು ಪ್ರಸ್ತಾಪವೆ

ಆಗಿಲ್ಲ. ಕಾರಣ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಪುರುಷರಿಗೆ ಮಾತ್ರ ಭೂಮಿಯನ್ನು ನೀಡಲಾಗಿದೆ. ಭೂದಾನ ಚಳುವಳಿಯಂತಹ ಚಳುವಳಿಯಲ್ಲಿಯೂ ಮಹಿಳೆಗೆ ಭೂಮಿಯು ದಕ್ಕದಂತಾಗಿದೆ. ಭೂಮಿ ಇಲ್ಲದ ಕುಟುಂಬಗಳೆಂದು ಪರಿಗಣಿಸಲಾಯಿತೇ ವಿನಃ ಕುಟುಂಬದ ಮಹಿಳೆಯರಿಗೆ ಭೂಮಿ ಬೇಕು ಎಂಬ ನಿರ್ಧಾರ ಚಳುವಳಿಯ ಯಾವ ನಾಯಕರಿಗೂ ತಿಳಿಯದಾಯಿತು. ಕುಟುಂಬದ ಯಜಮಾನ 'ಪುರುಷನಿಗೆ' ಭೂಮಿ ನೀಡಿದರೆ ಸಶಕ್ತರಾಗುತ್ತಾರೆ ಎಂಬ ಮನೋಭಾವನೆಯಿತ್ತು. ಕುಟುಂಬದೊಳಗೆ ಶೋಷಣೆಗೆ, ಶಿಕ್ಷೆಗೆ ಒಳಪಟ್ಟ ಮಹಿಳೆಯನ್ನಾಗಲೀ, ಅವಲಂಬಿತಳಾಗಿಯೇ ಇರಬೇಕಾದ ಮಹಿಳೆಯನ್ನಾಗಲೀ ಗಣನೆಗೆ ತೆಗೆದುಕೊಳ್ಳದಿರುವುದೇ ಇದಕ್ಕೆ ಮುಖ್ಯ ಕಾರಣ ಎಂದು ಹೇಳಬಹುದು. ಒಟ್ಟಾರೆಯಾಗಿ 'ಪುರುಷನೇ ಕುಟುಂಬದ ಜವಾಬ್ದಾರಿಯನ್ನು ಹೊತ್ತವನು ಅವನೆ ಅನ್ನ ನೀಡುವ ವ್ಯಕ್ತಿ.' 'ಹೊಲದ ಉಳುಮೆ ಮಾಡುವವನು ಪುರುಷನು' ಎಂದು ಈ ವ್ಯವಸ್ಥೆಯಲ್ಲಿ ರೂಪಿತವಾಗಿರುವುದರಿಂದ ಭೂಮಿಯನ್ನು ಹೊಂದುವಲ್ಲಿ ಮಹಿಳೆಯು ವಂಚಿತಳಾಗುತ್ತಾ ಬಂದಿದ್ದಾಳೆ.

**೬.೨. ಕರ್ನಾಟಕ ರಾಜ್ಯದ ಪ್ರಮುಖ ರೈತ ಚಳುವಳಿಗಳು ಮತ್ತು ಅದರಲ್ಲಿ ಮಹಿಳೆಯರ ಪಾತ್ರ**

ಕರ್ನಾಟಕದ ಇತಿಹಾಸದಲ್ಲಿ ರೈತ ಹೋರಾಟಗಳು ನಡೆದದ್ದು ಬೆರಳೆಣಿಕೆಯಷ್ಟಾದರೂ ರೈತ ಚಳುವಳಿಯ ಬೆಳವಣಿಗೆಯಲ್ಲಿ ಕರ್ನಾಟಕಕ್ಕೂ ಅದರದೇ ಆದ ಕೊಡುಗೆಯಿದೆ. ಕರ್ನಾಟಕದಲ್ಲಿಯ ರೈತ ಚಳುವಳಿಗಳು ರಾಷ್ಟ್ರೀಯ ಚಳುವಳಿಯ ಅವಿಭಾಜ್ಯ ಅಂಗವಾಗಿ ಬೆಳೆಯತೊಡಗಿದವು. ಬ್ರಿಟೀಷರ ವಿರುದ್ಧ ಸಂಘರ್ಷಿಸಲು ರಾಷ್ಟ್ರೀಯ ಧುರೀಣರು ರೈತಾಪಿ ಜನರನ್ನು ಸಂಘಟಿಸಿ ಕರ ಕಡಿತ, ಸಾಲ ಪರಿಹಾರ, ಗೇಣಿ ಪದ್ಧತಿಯಂಥ ಮುಂತಾದ ರೈತರ ವಾಸ್ತವಿಕ ಸಂಗತಿಗಳನ್ನು ಕೈಗೆತ್ತಿಕೊಂಡರು. ಮೈಸೂರು ಪ್ರಾಂತ್ಯದ ಗಡಿಯಲ್ಲಿ ಗಾಂಧೀಜಿಯವರು ರಾಷ್ಟ್ರೀಯ ಹೋರಾಟವನ್ನು ಪ್ರಾರಂಭಿಸಿ ಈ ರಾಷ್ಟ್ರೀಯ ಚಳುವಳಿಯಲ್ಲಿ ರೈತರಿಗೆ ಭಾಗವಹಿಸುವಂತೆ ಕರೆ ನೀಡಿದರು. ರೈತರನ್ನು ಗಾಂಧೀಜಿಯವರು ರಾಷ್ಟ್ರೀಯ ಚಳುವಳಿಗೆ ಕರೆ ನೀಡಲು ಕಾರಣ ''೧. ರೈತರನ್ನು ರಾಷ್ಟ್ರೀಯ ಹೋರಾಟಕ್ಕೆ ತರುವುದರಿಂದ ಸ್ವಾತಂತ್ರ್ಯ ಹೋರಾಟಕ್ಕೆ ಇನ್ನಷ್ಟು ಪುಷ್ಟಿ ಸಿಗುತ್ತದೆ. ೨. ವಿವಿಧ ರೈತ ಹೋರಾಟಗಳು ವಿಭಜನೆಗೆ ಕಾರಣಗಳಾಗಬಹುದಿತ್ತು. ಅಲ್ಲದೇ ರಾಷ್ಟ್ರೀಯ ಹೋರಾಟ ಒಂದು ಪ್ರಬುದ್ಧ ಹೋರಾಟವಾಗಿ ಹೋರಹೊಮ್ಮುತ್ತಿತ್ತು.'' (ಮುಝಾಫರ್ ಅಸ್ಸಾದಿ, ೨೦೦೧, ಪು ೮೫೨) ಆದ್ದರಿಂದ ರೈತರು ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿದರು. ೧೯೩೦ರಲ್ಲಿ ಗಾಂಧೀಜಿಯವರು 'ಅರಣ್ಯ ಸತ್ಯಾಗ್ರಹಕ್ಕೆ' ರೈತರನ್ನು ಕರೆಕೊಟ್ಟರು. ಈ ಸತ್ಯಾಗ್ರಹವು ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ, ಸಿರ್ಸಿ, ಸಿದ್ಧಾಪುರದಲ್ಲಿ ನಡೆಯಿತು. ಈ ಸತ್ಯಾಗ್ರಹದಲ್ಲಿ ರೈತರು ಮತ್ತು ಪರಿಶಿಷ್ಟ ಜಾತಿಯ ರೈತರು, ಮಹಿಳೆಯರು ಪಾಲ್ಗೊಂಡಿದ್ದರು. ಈ ಸತ್ಯಾಗ್ರಹದ ಮುಖ್ಯ ಉದ್ದೇಶ ''ಅರಣ್ಯದ ಮೇಲೆ ಹಕ್ಕನ್ನು ಪುನರ್ ಸ್ಥಾಪಿಸುವುದು ಉರುವಲು ಹಕ್ಕು; ಅದರೊಂದಿಗೆ ಗೇಣಿಯ ವಿಷಯವೂ ಕೂಡ ಸೇರಿತ್ತು.'' (ಮುಝಾಫರ್ ಅಸ್ಸಾದಿ, ೨೦೦೧, ಪು ೮೫೨) ಈ ರೀತಿ ಕರ್ನಾಟಕದಲ್ಲಿ ರೈತರು ಪ್ರಥಮ ಬಾರಿಗೆ ಅರಣ್ಯ ಸತ್ಯಾಗ್ರಹದ ಮೂಲಕ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿದರು. ಸ್ವಾತಂತ್ರ್ಯದ ನಂತರ ರೈತ ಚಳುವಳಿಗೆ ಹೊಸ ಆಯಾಮ ದೊರೆಯಿತು. ''ಕರ್ನಾಟಕದಲ್ಲಿ ಭೂ ಸಂಬಂಧಗಳು ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ರೂಪದಲ್ಲಿದ್ದವು. ಜೋಡಿ, ಇನಾಂ, ಜಮ್ಮಾ, ಜಹಗೀರು, ವಾರ, ಗುತ್ತಿಗೆ, ಒಳಕಂದಾಯ, ಗೇಣಿ ಪದ್ಧತಿ ಮುಂತಾದ ಭೂ ಸಂಬಂಧಗಳು ಇದ್ದವು. ಪಾಳೆಗಾರಿಕೆಯ ಅಂಶಗಳಾದ ಬಿಟ್ಟಿದುಡಿಮೆ, ಜೀತ ಪದ್ಧತಿ, ಬಡ್ಡಿ ವ್ಯವಹಾರ, ಜಾತಿ ಪದ್ಧತಿಯ ಸಾಮಾಜಿಕ ಅಂತಸ್ತುಗಳು, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಅನಿಷ್ಟಗಳೇ ತುಂಬಿದ್ದವು. ನಿಜಾಮಶಾಹಿಯ ಕೈಲಿದ್ದ ಕರ್ನಾಟಕದ ಭಾಗಗಳಲ್ಲಿ ಜಮೀನ್ದಾರರ ದಬ್ಬಾಳಿಕೆ ಘೋರವಾಗಿತ್ತು.

ಮದರಾಸು ಆಡಳಿತದಲ್ಲಿದ್ದ ಕರ್ನಾಟಕದ ಭಾಗಗಳಲ್ಲಿ ಗೇಣಿ ಪದ್ಧತಿ ವ್ಯಾಪಕವಾಗಿದ್ದ ಫಲವಾಗಿ ಬೆಳೆದುದರ ಬಹುಭಾಗ ಭೂಮಾಲೀಕನಿಗೆ ತೆರಬೇಕಾಗಿತ್ತು. ಬಿಟ್ಟಿ ದುಡಿಮೆ ಮಾಡಿ, ಹಬ್ಬಗಳಲ್ಲಿ ಜಮೀನ್ದಾರರಿಗೆ ಉತ್ತಮ ವಸ್ತುಗಳ ಕಾಣಿಕೆ ಸಲ್ಲಿಸಬೇಕಾಗಿತ್ತು. ಕೊಡಗು ಪ್ರದೇಶದಲ್ಲಿ ಜಮೀನ್ದಾರಿ ಪದ್ಧತಿಯಿಲ್ಲದಿದ್ದರೂ ಸಂಪ್ರದಾಯದ ಹೆಸರಲ್ಲಿ ಬಲಿಷ್ಠವಾದ ನೆಲೆನಿಂತ ಉಳಿಗಮಾನ್ಯ ಶಕ್ತಿಗಳು ಪ್ರಬಲವಾಗಿದ್ದವು. ಮುಖ್ಯವಾಗಿ 'ಜಮ್ಮ' ಎನ್ನುವ ಭೂ ಹಿಡುವಳಿಯನ್ನು ಹೊಂದಿದ್ದ ಭೂಹಿಡುವಳಿದಾರರು ಸಾಂಪ್ರದಾಯಿಕ 'ಗುಲಾಮ' ಸಮುದಾಯಗಳನ್ನು ಬಿಟ್ಟಿದುಡಿಸಿಕೊಳ್ಳುವುದು ಅಥವಾ ಕನಿಷ್ಠ ಮೊತ್ತ ನೀಡಿ ದುಡಿಸಿಕೊಳ್ಳುವುದು ವಾಡಿಕೆಯಾಗಿತ್ತು. ಹಾಗೆಯೇ ಬಲಿಷ್ಠ ಭೂ ಹಿಡುವಳಿ ಸಮುದಾಯಗಳು ಮಧ್ಯಮ ಹಾಗೂ ಬಡ ಭೂ ಹಿಡುವಳಿದಾರರನ್ನು ಶೋಷಿಸುತ್ತಿರುವುದು ಸಾಮಾನ್ಯವಾಗಿತ್ತು." (ಉದ್ಧೃತ: ತಂಬಂಡ ವಿಜಯ್ ಪೂಣಚ್ಚ, ೧೯೯೯, ಪು ೫) ಈ ರೀತಿ ಶೋಷಣೆಗೆ ಒಳಗಾದ ರೈತರು ಮತ್ತು ರೈತ ಮಹಿಳೆಯರು ಇವರ ಶೋಷಣೆಯಿಂದ ಮುಕ್ತರಾಗಲು, ಉಳಿಗಮಾನ್ಯ ಪದ್ಧತಿ ಹೋಗಲಾಡಿಸಲು ಮತ್ತು ಉಳುವವನೆ ಭೂ ಒಡೆಯ ನ್ಯಾಯಯುತವಾದ ಕಂದಾಯ, ಭೂಮಿತಿ, ಸಾಲಮನ್ನಾ, ಮುಂತಾದ ವಿಷಯಗಳ ಕುರಿತು ಸ್ವಾತಂತ್ರ್ಯದ ನಂತರ ರೈತ ಚಳುವಳಿಗಳು ಹೆಚ್ಚು ಲಕ್ಷ್ಯ ಕೊಟ್ಟವು. ಈ ಎಲ್ಲ ಚಳುವಳಿಗಳಲ್ಲಿ ಮಹಿಳೆಯರು ಪುರುಷರೊಂದಿಗೆ ಸರಿಸಮನಾಗಿ ಭಾಗವಹಿಸಿದರು.

ಕರ್ನಾಟಕದ ಕೆಲವು ಪ್ರಮುಖ ರೈತ ಚಳುವಳಿಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೬.೨.೧. ಕಾಗೋಡು ಸತ್ಯಾಗ್ರಹ (೧೯೫೦ - ೧೯೭೪)**

ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕಾಗೋಡು ಸತ್ಯಾಗ್ರಹವು ರೈತ ಹೋರಾಟದ ಭೂಪಟದಲ್ಲಿಯೇ ದಾಖಲುಗೊಂಡಿದೆ. ಕಾಗೋಡು ಚಳುವಳಿ ನಡೆದಿದ್ದು ೧೯೫೦-೫೧ ರಲ್ಲಿ. ಕಾಗೋಡು ಗ್ರಾಮದಲ್ಲಿ ದೀವರ ಜಾತಿಯ ಜನರು ಪ್ರಧಾನವಾಗಿರುವಂಥ ಒಂದು ಕುಗ್ರಾಮ. ಪ್ರತಿಯೊಬ್ಬ ದೀವರು ಐದು ಎಕರೆಗಿಂತ ಕಡಿಮೆ ಭೂಮಿಯನ್ನು ಹೊಂದಿದ್ದರು. ಊರಿನ ಭೂಮಿಯೆಲ್ಲಾ ಒಂದು ಲಿಂಗಾಯತ ಮನೆತನದ ಕೈಯಲ್ಲಿತ್ತು. ಹೀಗಾಗಿ ದೀವರ ಜಾತಿಯ ಎಲ್ಲ ಕುಟುಂಬಗಳು ಗೌಡರ (ಲಿಂಗಾಯತ) ಗೇಣಿ ಒಕ್ಕಲುಗಳು ಆಗಿದ್ದವು. ರೈತರು ಗೌಡರ ಮನೆಯಲ್ಲಿ ವರ್ಷಕ್ಕೆ ೮ ದಿನ ಬಿಟ್ಟಿ ಕೆಲಸ ಮಾಡುವುದರ ಜೊತೆಗೆ ಬೆಳೆಯುತ್ತಿದ್ದ ಬೆಳೆಯಲ್ಲಿ ಅರ್ಧಕ್ಕಿಂತ ಅಧಿಕವಾಗಿ ಬೆಳೆಯನ್ನು ಭೂಮಿಯ ಮಾಲೀಕರಾದ ಜಮೀನ್ದಾರರಿಗೆ ಕೊಡಬೇಕಿತ್ತು. ''ಸಾಧಾರಣವಾಗಿ ಬೆಳೆಯ ಮೂರರಲ್ಲೊಂದು ಪಾಲನ್ನು ಗೇಣಿ ಕೊಡಬೇಕಾಗಿತ್ತು. ಧಣಿಗಳಿಗೆ ಪಾಲನ್ನು ಅಳೆದು ಕೊಡುವಾಗ ಖಂಡುಗದ ಲೆಕ್ಕದಲ್ಲಿ ಧಾನ್ಯವನ್ನು ಕೊಡುತ್ತಿದ್ದರು. ಒಂದು ಖಂಡುಗಕ್ಕೆ ಇಪ್ಪತ್ತು ಕೊಳಗ ಎಂದರೆ ಮೂರು ಸೇರು. ಆದರೆ ಇಲ್ಲಿಯ ಧಣಿಗಳು ಒಂದು ಕೊಳಗಕ್ಕೆ ಮೂರುವರೆ ಸೇರು ಅಳೆಯುತ್ತಿದ್ದರು." (ನಾಗೇಶ್ ಎಚ್.ವಿ., ೧೯೯೯, ಪು ೬೩) ಭೂ ಮಾಲೀಕರನ್ನು ಬಿಟ್ಟು ನೇರವಾಗಿ ಸರ್ಕಾರದ ಜೊತೆ ಸಂಪರ್ಕ ಬೆಳೆಯಿಸುವ ಸ್ವಾತಂತ್ರ್ಯವಂತು ಈ ದೀವರಿಗೆ ಇರಲಿಲ್ಲ. ಒಡೆಯರ ಆಜ್ಞೆ ಪಾಲಿಸದಿದ್ದರೆ ಅವರನ್ನು ಕಂಬಕ್ಕೆ ಕಟ್ಟಿ ಹೊಡೆಯುತ್ತಿದ್ದರು. ದೀವರು ಇಂಥ ಸಾಮಾಜಿಕ ದುಸ್ಥಿತಿಗೆ ಸಿಕ್ಕಿಕೊಂಡಿರುವುದಕ್ಕೆ ಕಾರಣ ಜೀವನ ನಿರ್ವಹಣೆಗಾಗಿ ಆಧಾರವಾಗಿದ್ದ ಭೂಮಿಯ ಒಡೆತನ ಅವರದಲ್ಲದೆ ಇರುವುದು. ''೧೯೪೮ರ ಹೊತ್ತಿಗೆ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿ ರೈತ ಸಂಘವು ಉದಯಿಸಿತು. ಈ ರೈತ ಸಂಘದಲ್ಲೆಲ್ಲ ದೀವರೇ ಇದ್ದರು. ಭೂ ಮಾಲೀಕರಿಗೆ ಸಂಘದ ಮೂಲಕ ಈ ರೀತಿಯ ಬೇಡಿಕೆಗಳನ್ನು ಇಟ್ಟರು-೧. ಹೆಚ್ಚಿನ ಅಳತೆ ತೂಕಗಳಿಗೆ ಬಲಾತ್ಕಾರವಾಗಿ ಹೆಚ್ಚು ಗೇಣಿ ತೆಗೆದು ಕೊಳ್ಳಬಾರದು. ೨. ಗೇಣಿ ಕೊಟ್ಟಿದ್ದಕ್ಕೆ ರಶೀದಿ ನೀಡಬೇಕು. ೩. ಸರ್ಕಾರದ ದಾಖಲೆಯಲ್ಲಿ ಗೇಣಿದಾರರ ಹೆಸರು

ಮತ್ತು ಪಹಣಿಗಳ ದಾಖಲೆ ನಮೂದಿಸಬೇಕು. ೪. ಹೆಚ್ಚು ಬೆಳೆದರೆ ಗೇಣಿಯನ್ನು ಹೆಚ್ಚಿಸಬಾರದು. ೫. ಪದೇ ಪದೇ ಜಮೀನು ಕೈ ಬದಲಾಯಿಸಬಾರದು. ೬. ಗೇಣಿಯ ಪ್ರಮಾಣ ಒಟ್ಟು ಬೆಳೆಯ ¹/₃ ಕ್ಕಿಂತ ಹೆಚ್ಚಾಗಬಾರದು ಎಂದು.'' (ಗಣಪತಿಯಪ್ಪ. ಎಚ್., ೨೦೦೨, ಪು ೪೦) ಆದರೆ ಭೂ ಮಾಲೀಕರು ತಲೆ-ತಲಾಂತರಗಳಿಂದ ನಡೆಸಿಕೊಂಡು ಬಂದಂಥ ಗೇಣಿ ರೈತರ ಮೇಲೆ ಅಧಿಕಾರದ ಬಿಗಿಯನ್ನು ಸಡಿಲಿಸಲು ಒಪ್ಪಲಿಲ್ಲ. ಆಗ ಸಿಟ್ಟಿಗೆದ್ದ ದೀವರೆಲ್ಲರೂ ಆದದ್ದಾಗಲಿ ನಾವು ಮೂರು ಸೇರು ಲೆಕ್ಕದಲ್ಲಿಯೇ ಅಳೆದು ಸರಕಾರದ ಮಿಲ್ಲುಗಳಿಗೆ ಭತ್ತ ಹಾಕಿ ರಶೀದಿ ಪಡೆಯುತ್ತೇವೆ ಎಂದಿದ್ದಕ್ಕೆ ಜಮೀನ್ದಾರರು ನಮ್ಮ ಜಮೀನಿನಲ್ಲಿ ಸಾಗುವಳಿ ಮಾಡಬೇಡಿ, ಜಮೀನನ್ನು ಬಿಟ್ಟು ಹೋಗಿ ಎಂದರು. ರೈತರು ಭೂಮಿ ಬಿಡುವುದಿಲ್ಲ ಎಂದು ಪಟ್ಟು ಹಿಡಿದು ೧೯೫೧ರಲ್ಲಿ ಸತ್ಯಾಗ್ರಹ ಪ್ರಾರಂಭಿಸಿದರು. ರೈತರು 'ಉಳುವವನೆ ಹೊಲದೊಡೆಯ' ಎಂಬ ಘೋಷಣೆಯೊಂದಿಗೆ ಜಮೀನುದಾರರು ಹಾಕಿದ್ದ ಬೇಲಿಗಳನ್ನು ಕಿತ್ತು ಹಾಕಿ ಭೂಮಿಯನ್ನು ಉತ್ತಲು ಪ್ರಾರಂಭಿಸಿದರು. ಆಗ ಗೌಡರು ಆಳುಗಳನ್ನು ಕಳಿಸಿ ಗೇಣಿದಾರರಿಗೆ ಹೊಲದಿಂದ ಓಡಿಸಿದರು. ಮತ್ತೆ ರೈತರು ಹೊಲದಲ್ಲಿ ಉಳಲು ಬಂದರು ಆಗ ಜಮೀನ್ದಾರರು ಸರಕಾರದ ಸಹಾಯದಿಂದ ಪೋಲೀಸರನ್ನು ಕಳುಹಿಸಿದರು. ಆಗ ಪೋಲೀಸರು ಗೇಣಿದಾರರಿಗೆ ಲಾಠಿಯಿಂದ ಹೊಡೆದು ಬೂಟುಕಾಲಿನಿಂದ ಒದ್ದು ದೈಹಿಕ ಹಿಂಸೆ ಕೊಟ್ಟು ದಬ್ಬಾಳಿಕೆ ನಡೆಸಿದರು. ಪೋಲೀಸರಿಂದ ಹಿಂಸೆ, ಬಂಧನ, ಲಾಠಿಚಾರ್ಜು ದಿನದಿನಕ್ಕೆ ಹೆಚ್ಚುತ್ತಾ ಹೋಯಿತು ಸಹಸ್ರಾರು ರೈತರು ಜೈಲು ಸೇರಿದರು. ಹೆಂಗಸರು - ಗಂಡಸರು ಎನ್ನುವ ಭೇದವಿಲ್ಲದೆ ಈ ಚಳುವಳಿಯಲ್ಲಿ ಭಾಗವಹಿಸಿದರು. ಈ ಚಳುವಳಿಯಲ್ಲಿ ಭಾಗವಹಿಸಿದ ಕೆಲವು ಮಹಿಳೆಯರಲ್ಲಿ ಷವಾಜಿ ಮಾಸ್ತ್ಯಮ್ಮ, ಬಿಳಿಯನ ಸಾವಿತ್ರಮ್ಮಾ, ಕೋಣೆ ಕನ್ನಮ್ಮ, ಮಡಿವಾಳ ಕನ್ನಮ್ಮ, ಬರ್ರಿನ ಚೌಡಮ್ಮ, ಕೆಂಚನ ಬೀರಮ್ಮ, ರೊಡ್ಡಿದೇವಮ್ಮ. ಈ ಎಲ್ಲಾ ಧೀರ ಮಹಿಳೆಯರು ರೈತ ಸಂಘದ ಮುಖಂಡರು ಆಗಿದ್ದ ಗಣಪತಿಯಪ್ಪನವರು ಹಾಗೂ ಸಮಾಜವಾದಿ ಮುಖಂಡರು ಆಗಿದ್ದ ಗೋಪಾಲ ಗೌಡರು ಇವರ ಕರೆಗೆ ಓಗೊಟ್ಟು ಹಿಂದೆ ಮುಂದೆ ಯೋಚಿಸದೆ ಚಳುವಳಿಯಲ್ಲಿ ಭಾಗವಹಿಸಿರುವರು. ಇವರು ತಮ್ಮ ಪತಿಯ ಜೊತೆ ಭೂಮಿಯನ್ನು ಉಳುಮೆ ಮಾಡುವ ಸಂದರ್ಭದಲ್ಲಿ ಪೋಲೀಸರು ಪುರುಷರೊಂದಿಗೆ ಮಹಿಳೆಯರನ್ನು ಬಂದಿಸಿದರು. ಆದರೆ ಮಹಿಳೆಯರನ್ನು ಸ್ವಲ್ಪದೂರದವರೆಗೂ ಕರೆದು ಕೊಂಡು ಹೋಗಿ ಅವರನ್ನು ಮಧ್ಯದಲ್ಲಿಯೇ ಬಿಟ್ಟು ಪುರುಷರನ್ನು ಮಾತ್ರ ಜೈಲಿಗೆ ಹಾಕಿದರು. ಈ ಚಳುವಳಿಯಲ್ಲಿ ಭಾಗವಹಿಸಿದಂಥ ಕೆಲವು ಮಹಿಳೆಯರಿಗೆ ಕೋರ್ಟಿಗೆ ಹಾಜರಾಗಲು ಹೇಳಿದರು, ಇನ್ನು ಕೆಲವು ಮಹಿಳೆಯರಿಂದ ಮುಚ್ಚಳಿಕೆಯನ್ನು ಬರೆಯಿಸಿಕೊಂಡರು. ಇವರಲ್ಲಿ ಕೆಲವರು ಭೂ ಮಾಲೀಕರ ಮನೆಯಲ್ಲಿ ಬಿಟ್ಟಿ ಚಾಕರಿಯನ್ನು ಮಾಡಿದರೆ, ಇನ್ನು ಕೆಲವರು ಗೇಣಿ ಭತ್ತವನ್ನು ಭೂ ಮಾಲೀಕರ ಮನೆಗೆ ಒಯ್ದಾಗ ಹೆಣ್ಣಾಳುಗಳಾಗಿ ಪುರುಷರಿಗೆ ಸಹಾಯ ಮಾಡುತ್ತಿದ್ದರು. ಇವರೆಲ್ಲರೂ 'ಉಳುವವನೆ ಹೊಲದೊಡೆಯ' ಮತ್ತು 'ಯಾರದು ಭೂಮಿ ನಮ್ಮದು ಭೂಮಿ' ಎಂಬ ಘೋಷಣೆಯ ಮೂಲಕ ಈ ಕಾಗೋಡು ಚಳುವಳಿಯಲ್ಲಿ ಭಾಗವಹಿಸಿದರು.

ಈ ಚಳುವಳಿಯಲ್ಲಿ ಕಾಗೋಡಿನ ಸುತ್ತಮುತ್ತಲಿನ ಹಳ್ಳಿಗಳಿಂದ ರೈತರು ಭಾಗವಹಿಸಿದರು. ಸತತವಾಗಿ ಆರು ತಿಂಗಳ ಹೋರಾಟದ ನಂತರ ಮಳೆಗಾಲದ ದಿನಗಳಲ್ಲಿ ಸತ್ಯಾಗ್ರಹದ ಜೋರು ಕಡಿಮೆಯಾಯಿತು. ಸುತ್ತ ಮುತ್ತಲಿನ ಹಳ್ಳಿಯವರು ತಮ್ಮ ಹೊಲಗದ್ದೆಗಳಿಗೆ ಮರಳಿ ಹೋದರು. ಕಾಗೋಡಿನಲ್ಲಿಯೇ ಕೆಲವು ರೈತರು ಬದುಕುವುದು ದುಸ್ತರವಾದ ಕಾರಣ ಭೂ ಮಾಲೀಕರೊಂದಿಗೆ ಸಂಧಾನದ ಮೂಲಕ ತಮ್ಮ ಪಾಲಿಗೆ ಬರುವ ಭೂಮಿಯನ್ನು ಪಡೆಯಲು ಪ್ರಯತ್ನಿಸಿದರು. ಈ ರೀತಿಯಾಗಿ ಹೋರಾಟದ ಬಲ ಕುಂದಿತು. ಆದರೆ ರಾಜ್ಯದಲ್ಲಿ ಹೊಸದಾಗಿ

ಆರಂಭವಾಗಿದ್ದ ಸಮಾಜವಾದಿ ಪಕ್ಷವು ರೈತರ ಬೆಂಬಲಕ್ಕೆ ನಿಂತಿತು. ಸಡಿಲಿಸಿದ ಈ ಆಂದೋಲನವನ್ನು ಮತ್ತೆ ಬಲಪಡಿಸಿತು. ಕೇವಲ ಗೇಣಿ ಅಳತೆಯ ತಕರಾರಿಗಾಗಿ ಮಾತ್ರ ಈ ಚಳುವಳಿಯು ಪ್ರಾರಂಭವಾಗಿತ್ತು. ಆದರೆ ಸಮಾಜವಾದಿ ಪಕ್ಷವು ಈ ಚಳುವಳಿಯಲ್ಲಿ 'ಉಳುವವನೆ ಹೊಲದೊಡೆಯ' ಎಂಬ ಘೋಷಣೆಯನ್ನು ಸೇರಿಸುವುದರ ಮೂಲಕ ಈ ಚಳುವಳಿಯನ್ನು ಒಂದು ಸೈದ್ಧಾಂತಿಕ ಆಂದೋಲನವನ್ನಾಗಿ ಮಾರ್ಪಡಿಸಿತು. ಕಾಗೋಡಿನ ನೆಲದಲ್ಲಿ ರೈತ ಚಳುವಳಿಯ ಬೀಜ ಅಂಕುರಿಸಿತು. ರೈತರೆಲ್ಲ ಸಂಘಟಿತರಾಗಿ ಇದುವರೆಗೆ ಒಡೆಯರ ಮಾತಿಗೆಲ್ಲ ತಲೆಯಾಡಿಸುತ್ತಿದ್ದವರು ಸೆಟೆದು ನಿಂತರು, ಭೂ ಮಾಲೀಕರ ಎದುರು ಬಾಗಿದ ಬೆನ್ನು ನೆಟ್ಟಗಾಯಿತು. ಹೊಲ ಉಳುಮೆ ಮಾಡುವುದು ನಮ್ಮ ಹಕ್ಕೆಂದು ಹೊಲಕ್ಕಿಳಿದರು. ಈ ರೀತಿ ಎರಡು ವರ್ಷಗಳವರೆಗೆ ಸಮಾಜವಾದಿ ನೇತೃತ್ವದಲ್ಲಿ ರೈತ ಚಳುವಳಿಯು ಹಲವು ಬಗೆಯಲ್ಲಿ ನಡೆಯಿತು. ಕೊನೆಗೆ ೧೯೭೪ ರಲ್ಲಿ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ದಿವಂಗತ ಡಿ. ದೇವರಾಜ ಅರಸರು ಭೂ ಸುಧಾರಣೆ ಕಾಯಿದೆಯನ್ನು ಜಾರಿಗೊಳಿಸಿದಾಗ ಈ ಚಳುವಳಿ ಸಾಫಲ್ಯ ಪಡೆದುಕೊಂಡಿತು. ಭೂ ಸುಧಾರಣಾ ಶಾಸನದ ಮೂಲಕ ಜನರು ಹಿಂದೆ ಗೇಣಿಗೆ ಪಡೆದು ಸಾಗುವಳಿ ಮಾಡುತ್ತಿರುವಂತಹ ತುಂಡು ಭೂಮಿಯ ಮಾಲೀಕರಾದರು.

ಈ ರೀತಿ ಕಾಗೋಡಿನಲ್ಲಿ ಶತಮಾನಗಳಿಂದ ಭೂ ಮಾಲೀಕರ ದಬ್ಬಾಳಿಕೆ, ದೌರ್ಜನ್ಯ, ಚಿತ್ರಹಿಂಸೆಗಳಿಂದ ತತ್ತರಿಸಿದ ರೈತರು ಹೋರಾಟಕ್ಕಿಳಿದರು. ಈ ಹೋರಾಟದಲ್ಲಿ ಮಹಿಳೆಯರು ಪುರುಷರ ಜೊತೆ ಚಳುವಳಿಯಲ್ಲಿ ಪಾಲ್ಗೊಂಡರು. ಸ್ತ್ರೀ ಮತ್ತು ಪುರುಷರ ಹಲವು ವರ್ಷಗಳ ಹೋರಾಟದ ಫಲವಾಗಿ 'ಉಳುವವನೆ ಹೊಲದೊಡೆಯ'ನಾಗುವಂತಾಯಿತು. ಈ ಕಾಗೋಡು ಚಳುವಳಿಯು ಮೊದಲು ರೈತ ಸಂಘದ ನೇತೃತ್ವದಲ್ಲಿ ಪ್ರಾರಂಭವಾಗಿ ಸಮಾಜವಾದಿ ಪಕ್ಷದ ನೇತೃತ್ವದಲ್ಲಿ ಕೊನೆಗೊಂಡಿತು. ಈ ಚಳುವಳಿಯ ಮೂಲಕ ಭೂ ಸುಧಾರಣ ಶಾಸನವನ್ನು ಜಾರಿಗೆ ತಂದರು. 'ಉಳುವವನೆ ಹೊಲದೊಡೆಯ'ನಾದನು, ಹೊರತಾಗಿ ಮಹಿಳೆಯು ಭೂ ಒಡೆತನವನ್ನು ಪಡೆಯಲಾಗಲಿಲ್ಲ.

**೬.೨.೨. ಹೆಬ್ಬಳ್ಳಿ ಭೂ ಹೋರಾಟ (೧೯೫೮ - ೧೮.೪.೧೯೫೮)**

ಹೆಬ್ಬಳ್ಳಿ ಧಾರವಾಡ ತಾಲೂಕಿನ ಒಂದು ಗ್ರಾಮ. ಜಾಗೀರದಾರ ವಂಶದವರೇ ಇಡೀ ಹೆಬ್ಬಳ್ಳಿ ಭೂಮಿಯ ಒಡೆತನ ಹೊಂದಿದ್ದರು. ಈಗಲೂ ಕೂಡ ಜಾಗೀರದಾರ ಮನೆತನದವರು ಹೆಬ್ಬಳ್ಳಿ ಗ್ರಾಮದಲ್ಲಿ ಇದ್ದಾರೆ. ಹೆಬ್ಬಳ್ಳಿ ಜಾಗೀರದಾರ ಮನೆತನಕ್ಕೆ ೨೫೦ ವರ್ಷಗಳ ಇತಿಹಾಸವಿದೆ. ಪೇಶ್ವೆಗಳು, ನವಾಬರು, ಬ್ರಿಟೀಷರು, ಜಾಗೀರದಾರರ ಮನೆತನದ ಏಳು-ಬೀಳುಗಳಿಗೆ ಕಾರಣರಾಗಿದ್ದಾರೆ. ೧೯೫೨ರಲ್ಲಿ ಬಾಂಬೆ ಸರಕಾರವು ಭೂ ಸುಧಾರಣಾ ಶಾಸನದ ಮೂಲಕ ಜಹಗೀರದಾರರ ವಶದಲ್ಲಿದ್ದ ಭೂಮಿಯನ್ನು ವಶಪಡಿಸಿಕೊಂಡು ಉಳುವ ರೈತರಿಗೆ ಹಾಗೂ ಭೂ ರಹಿತ ಕೃಷಿ ಕಾರ್ಮಿಕರಿಗೆ ಹಂಚಿತು. ೧೯೫೨ ರಲ್ಲಿ ಮಹಾರಾಷ್ಟ್ರ ಸರ್ಕಾರವು ಹೆಬ್ಬಳ್ಳಿ ಜಾಗೀರದಾರರಿಂದ ತನ್ನ ವಶಕ್ಕೆ ತೆಗೆದುಕೊಂಡಂಥ ಭೂಮಿ ೧೨,೬೫೫,೩೭ ಎಕರೆ. ಹೀಗೆ ಕಳೆದುಕೊಂಡಂಥ ಭೂಮಿಯನ್ನು ಪಡೆಯುವುದಕ್ಕೋಸ್ಕರ ಜಾಗೀರದಾರ ಮನೆತನದವರು ತೀವ್ರವಾಗಿ ಪ್ರಯತ್ನ ಮಾಡಿದರು. ಹೆಬ್ಬಳ್ಳಿಯ ಜಾಗೀರದಾರರು ಬಾಂಬೆ ಸರ್ಕಾರದ ಕಂದಾಯ ಸಚಿವರಿಗೆ ಭೇಟಿ ನೀಡಿ ಕಳೆದುಕೊಂಡ ಭೂಮಿಗೆ ಪರಿಹಾರ ಮೊತ್ತ ಕೊಡಬೇಕೆಂದು ಬೇಡಿಕೊಂಡರು. ಆಗಿನ ಕಾನೂನಿನ ಪ್ರಕಾರ ಜಾಗೀರದಾರರು ಭೂಮಿ ಕಳೆದುಕೊಂಡ ಪ್ರತೀ ಕುಟುಂಬದ ನಿರ್ವಹಣೆಗೆ ೧೧೦ ಎಕರೆ ಭೂಮಿ ನೀಡಲು ಒಪ್ಪಿದರು. ಆದರೆ ಮುರಾರ್ಜಿ ದೇಸಾಯಿಯವರು ಹೆಬ್ಬಳ್ಳಿ ಜಾಗೀರದಾರರಿಗೆ ತಲಾ ೭೦೦ ಎಕರೆ ಭೂಮಿಯನ್ನು ಮರಳಿಕೊಟ್ಟರು. ಅಲ್ಲದೆ ಹೆಬ್ಬಳ್ಳಿಯ ವೆಂಕಟೇಶ

ದೇವಾಲಯದ ಉಸ್ತುವಾರಿ ನೋಡಿಕೊಳ್ಳಲೆಂದು ಇದ್ದ ೪೫೦ ಎಕರೆ ಇನಾಂ ಭೂಮಿಯನ್ನು ಜಾಗೀರದಾರರಿಗೆ ಬಿಟ್ಟುಕೊಟ್ಟರು. ಅಧಿಕೃತವಾಗಿ ಈ ಸಂದರ್ಭದಲ್ಲಿ ಜಾಗೀರದಾರರಿಗೆ ಮರಳಿ ಬಂದ ಒಟ್ಟು ಭೂಮಿ ೩೦೦೦ ಎಕರೆ. ಇಡೀ ಹೆಬ್ಬಳ್ಳಿ ಭೂಮಿಯ ಒಡೆಯರಾಗಿರುವ ಜಾಗೀರದಾರರು ಕಡಿಮೆ ಭೂಮಿಯ ಒಡೆತನವನ್ನು ಹೊಂದುವುದರಿಂದ ಹತಾಶರಾದರು. ಈ ಸಂದರ್ಭದಲ್ಲಿ ಸ್ಥಳೀಯ ರೈತರು ಜಾಗೀರದಾರರಿಗೆ ಮೊದಲಿನಂತೆ ಹೆದರುತ್ತಿರಲಿಲ್ಲ. ಅನೇಕ ವರ್ಷಗಳಿಂದ ಜಾಗೀರ ಭೂಮಿಯನ್ನು ಉಲುಮೆ ಮಾಡುತ್ತಿದ್ದ ರೈತರನ್ನು ಭೂ ಸುಧಾರಣಾ ಕಾನೂನುಗಳು ಧೈರ್ಯವಂತರನ್ನಾಗಿ ಮಾಡಿತು. ''೧೯೪೮ ರ ಬಾಂಬೆ ಗೇಣಿ ಕಾನೂನಿನ ಪ್ರಕಾರ 'ನಿಗದಿತ' ಮೊತ್ತವನ್ನು ಪ್ರತಿವರ್ಷ ಗೇಣಿದಾರ ಭೂಮಾಲೀಕನಿಗೆ ಕೊಡಬೇಕು. ಭೂ ಮಾಲೀಕ ಬೇಕಾದ ಹಾಗೆ ಗೇಣಿ ಹೆಚ್ಚಿಸುವಂತಿಲ್ಲ. ಗೇಣಿದಾರರನ್ನು ಒಕ್ಕಲೆಬ್ಬಿಸುವಂತಿಲ್ಲ. ಭೂ ಮಾಲೀಕರು ವ್ಯವಸಾಯೇತರ ಉದ್ದೇಶಗಳಿಗಾಗಿ ಜಮೀನನ್ನು ಬಳಸುವಂತಿಲ್ಲ; ಜಮೀನು ಮಾರುವಂತಿದ್ದರೆ ಅದನ್ನು ಸುಲಭ ಕಂತುಗಳಲ್ಲಿ ಗೇಣಿದಾರನಿಗೆ ಮಾರಬೇಕು.'' (ಸತೀಶ್ ಪಾಟೀಲ, ೨೦೦೭, ಪು ೧೩) ಎಂದು ಉಳುವ ರೈತನಿಗೆ ಅನುಕೂಲವಾಗುವಂತೆ ಕಾನೂನುಗಳು ಇದ್ದವು. ಈ ಕಾನೂನಿನ ಪ್ರಕಾರ ರೈತರು ಜಾಗೀರದಾರರಿಂದ ಬಿಡುಗಡೆಯಾಗಲು ಸುಲಭವಾಯಿತು. ೧೯೫೨ ರಿಂದ ೧೯೫೮ ರ ಕಾಲಾವಧಿಯು ರೈತರಿಗೂ ಮತ್ತು ಭೂ ಮಾಲೀಕರಿಗೂ ಹೋರಾಟದ ಸಮಯ. ಈ ಸಮಯದಲ್ಲಿ ಬಂದ ವಿನೋಬಾ ಭಾವೆಯವರ ಭೂದಾನ ಚಳುವಳಿ, ಕರ್ನಾಟಕದ ಏಕೀಕರಣ, ಭೂ ಮಾಲೀಕ ಸಂಘಗಳ ಚಟುವಟಿಕೆಗಳು ಹಾಗೂ ಜತ್ತಿ ಸಮಿತಿಯ ಶಿಫಾರಸ್ಸುಗಳು ಒಟ್ಟಾರೆ ಈ ಭಾಗದ ರೈತರ ಜೀವನದಲ್ಲಿ ಮಹತ್ತರ ಪರಿಣಾಮವನ್ನು ಉಂಟುಮಾಡಿದವು. ೧೯೫೨ರಲ್ಲಿ ಮಹಾರಾಷ್ಟ್ರ ಸರ್ಕಾರ ಹೆಬ್ಬಳ್ಳಿಯ ಭೂಮಿಯನ್ನು ವಶಪಡಿಸಿಕೊಂಡ ಮೇಲೆ ರೈತರಿಗೆ ಭೂ ಹಂಚಿಕೆಯಾಯಿತು. ಹೆಬ್ಬಳ್ಳಿಯ ಒಟ್ಟು ಭೂಮಿಯ ವಿವರ ಇಂತಿದೆ.

''೧. ಹೆಬ್ಬಳ್ಳಿಯ ಜಾಗೀರದಾರ ಒಟ್ಟು ಭೂಮಿ - ೧೨,೬೫೫,೩೭ (ಎಕರೆಗಳು)

೨. ೧೯೫೨ ರಲ್ಲಿ ಸರಕಾರ ವಶಕ್ಕೆ ತೆಗೆದುಕೊಂಡ ಭೂಮಿ - ೧೨,೬೫೫,೩೭ (ಎಕರೆಗಳು)

೩. ಜಾಗೀರದಾರರಿಗೆ ಮರು ಹಂಚಿಕೆಯಾದ ಭೂಮಿ - ೩,೦೨೦,೩೭ (ಎಕರೆಗಳು)

೪. ಗೇಣಿದಾರರಿಗೆ ಮಂಜೂರಾದ ಭೂಮಿ - ೯,೫೫೫,೨೬ (ಎಕರೆಗಳು)

೫. ಯಾರಿಗೂ ಮಂಜುರಾಗದೆ ಉಳಿದ ಭೂಮಿ - ೮೦,೧೪ (ಎಕರೆಗಳು).'' (ಸತೀಶ್ ಪಾಟೀಲ, ೨೦೦೭, ಪು ೨೧)

ಗೇಣಿದಾರರಿಗೆ ಮಂಜೂರಾದಂಥ ಭೂಮಿಯ ದಾಖಲೆಗಳನ್ನು ಸರ್ಕಾರವು ವಿತರಿಸಲಿಲ್ಲ. ಈ ದಾಖಲೆಗಳನ್ನು ರೈತರು ಪಡೆಯಲಿಕ್ಕಾಗಿ ಹಾಗೂ ಹೆಚ್ಚುವರಿ ಉಳಿದ ಭೂಮಿಯನ್ನು ಕೃಷಿ ಕಾರ್ಮಿಕರಿಗೆ ಹಂಚಬೇಕೆಂದು ರೈತರು ಸರ್ಕಾರದೊಂದಿಗೆ ಹೋರಾಟಕ್ಕಿಳಿದರು. ಈ ಹೋರಾಟದ ನೇತೃತ್ವ ವಹಿಸಿದವರು ಸಮಾಜವಾದಿಗಳು.

ಸರ್ಕಾರವು ಹೆಬ್ಬಳ್ಳಿಯ ಭೂಮಿಯನ್ನು ಭೂ ರಹಿತರಿಗೆ ವಿತರಿಸಿದ ಮೇಲೆ ಭೂಮಿಯನ್ನು ಅನುಭೋಗಿಸುವವರು ಹೆಚ್ಚಿನವರು ಮಧ್ಯಮ ವರ್ಗದವರೇ ಆಗಿದ್ದರು. ಈ ಹಿನ್ನೆಲೆಯಲ್ಲಿ ಸಮಾಜವಾದಿ ಪಕ್ಷವು ೧೯೫೮ರಲ್ಲಿ ಹೆಬ್ಬಳ್ಳಿಯಲ್ಲಿ ಭೂ ರಹಿತ ಕೃಷಿ ಕಾರ್ಮಿಕರ ಹೋರಾಟಕ್ಕೆ ಸಿದ್ಧವಾಯಿತು. ಈ ಹೋರಾಟ ಕೈಗೊಳ್ಳದಿದ್ದರೆ ೨೫೦೦ ಎಕರೆ ಭೂಮಿಯು ಮಧ್ಯಮ ರೈತ ವರ್ಗದವರ ಪಾಲಾಗುತ್ತಿತ್ತು. ಈ ಹೆಚ್ಚುವರಿ ಭೂಮಿಯನ್ನು ಹೆಬ್ಬಳ್ಳಿಯ ಪ್ರತಿ ಕೃಷಿ ಕಾರ್ಮಿಕರಿಗೆ ಹಂಚುವ ಸಾಧ್ಯತೆ ಇರದಿದ್ದರೂ ಎಲ್ಲ ಕೃಷಿ ಕಾರ್ಮಿಕರು ಈ ಹೋರಾಟದಲ್ಲಿ

ಪಾಲ್ಗೊಂಡರು. ಮಹಿಳೆಯರು ಸಹ ಈ ಹೋರಾಟದಲ್ಲಿ ಭಾಗವಹಿಸಿದರು. ಸಮಾಜವಾದಿ ಮುಖಂಡರ ನೇತೃತ್ವದಲ್ಲಿ "ರೈತ ಕೂಲಿ ಕಾರ್ಮಿಕರಿಗೆ ಹೆಚ್ಚುವರಿಯಾಗಿ ಉಳಿದಿರುವ ಸುಮಾರು ೨೫೦೦ ಎಕರೆ ಭೂಮಿಯನ್ನು ಶೀಘ್ರವೇ ಹಂಚಿಕೆ ಮಾಡಿ ಅಧಿಕೃತ ಮಾನ್ಯತಾ ಪತ್ರ (ಪಹಣಿ ಪತ್ರ)ವನ್ನು ಸರ್ಕಾರ ನೀಡಬೇಕು, ಈಗಾಗಲೇ ರೈತರು ಉಳುತ್ತಿರುವ ಜಾಗೀರು ಭೂಮಿಗೆ ಮಾನ್ಯತೆ ನೀಡಿ ಅವರಿಗೂ ಸಹಿತ ಪಹಣಿ ಪತ್ರವನ್ನು ನೀಡಬೇಕೆಂದು ನಿರ್ಣಯಿಸಲಾಯಿತು." (ಸತೀಶ್ ಪಾಟೀಲ, ೨೦೦೭, ಪು ೨೫) ಈ ರೀತಿ ಮನವಿ ಪತ್ರವನ್ನು ಬರೆದು ೩೦೦ಕ್ಕಿಂತ ಹೆಚ್ಚು ಭೂ ರಹಿತ ಕೃಷಿ ಕಾರ್ಮಿಕರು ಮಹಿಳೆಯರು ಸೇರಿ ಧಾರವಾಡ ಜಿಲ್ಲಾಧಿಕಾರಿಗೆ ಭೇಟಿ ನೀಡಿ ಮನವಿ ಪತ್ರ ಸಲ್ಲಿಸಿದರು. ಈ ಮೇಲಿನ ಬೇಡಿಕೆಗಳನ್ನು ಈಡೇರಿಸಲು ೧೫ ದಿನಗಳ ಕಾಲಾವಕಾಶ ನೀಡಿದರು. ೧೫ ದಿನಗಳಲ್ಲಿ ಈಡೇರದಿದ್ದರೆ ಹೋರಾಟ ಮಾಡುತ್ತೇವೆಂದು ಸರ್ಕಾರಕ್ಕೆ ಎಚ್ಚರಿಸಿದರು. ೧೫ ದಿನಗಳಾದರೂ ಸರ್ಕಾರದಿಂದ ಯಾವುದೇ ಸೂಚನೆ ಕಂಡು ಬರದ ಕಾರಣ ಆಗ ಪ್ರತಿದಿನ ೧೦ ರಿಂದ ೧೫ ಜನ ರೈತರು ಜಿಲ್ಲಾ ಕಛೇರಿ ಎದುರು ಪಿಕೆಟಿಂಗ್ ಮಾಡಲಾರಂಭಿಸಿದರು. ಹೀಗೆ ಪ್ರತಿದಿನ ಹೊದವರಿಗೆಲ್ಲ ಜೈಲಿಗೆ ಹಾಕುವುದು, ಅವರನ್ನು ಬೀಡುವುದು ಮಾರನೆ ದಿನ ಬಂದವರನ್ನು ಹಾಕುವುದು ಮಾಡಿದರು. ಒಟ್ಟು ೯೧ ಜನ ರೈತರು ಬಂದಿತರಾಗಿದ್ದರು. ಕೆಲವರ ಮೇಲೆ ಖಟ್ಲೆ ಹಾಕಲಾಗಿತ್ತು. ಹೀಗೆ ೧೧ ದಿನಗಳವರೆಗೆ ಸತತ ನಡೆಯಿತು. ಆಗ ಮುಖ್ಯಮಂತ್ರಿಯಾಗಿರುವ ಬಿ.ಡಿ. ಜತ್ತಿಯವರು ರೈತರ ಬೇಡಿಕೆಗಳನ್ನು ಈಡೇರಿಸಿದರು. ಈ ಚಳುವಳಿಯ ಒಂದು ವಿಶೇಷವೇನೆಂದರೆ ಕೇವಲ ೧೧ ದಿನಗಳ ಹೋರಾಟವಾಗಿದ್ದು ಯಾವುದೇ ರೀತಿಯ ಗಲಭೆ ನಡೆಯದೆ ಇರುವುದು. ಈ ಹೋರಾಟದ ಮೆರವಣಿಗೆಯಲ್ಲಿ ಮಹಿಳೆಯರು ಭಾಗವಹಿಸಿದ್ದರೂ ಕೂಡ ಭೂಮಿಯನ್ನು ಹಂಚುವಾಗ ಪುರುಷರನ್ನೇ ಗಮನದಲ್ಲಿಟ್ಟುಕೊಂಡು ಭೂಮಿಯನ್ನು ಹಂಚಲಾಯಿತು.

**೬.೨.೩. ದಲಿತ ಸಂಘರ್ಷ ಸಮಿತಿಯ ಭೂ ಹೋರಾಟ (೧೯೭೦ - ೧೯೯೯)**

ದಲಿತರು ಸಮಾಜದಲ್ಲಿಯೇ ಅತ್ಯಂತ ಕೆಳಮಟ್ಟದವರಾಗಿರುವುದರಿಂದ ಸಮಾಜದಲ್ಲಿಯ ತಾರತಮ್ಯಕ್ಕೆ ಒಳಗಾಗಿರುವರು. ಆದುದರಿಂದಲೇ ಶಾಸನಾತ್ಮಕವಾಗಿ ಇವರಿಗೆ ಎಲ್ಲಾ ರೀತಿಯಿಂದ ಸೌಲಭ್ಯಗಳನ್ನು ಒದಗಿಸಿದರೂ ಸಹ ದಲಿತರ ಸ್ಥಾನಮಾನದಲ್ಲಿ ಸುಧಾರಣೆಯಾಗಿಲ್ಲ. ಕರ್ನಾಟಕದಲ್ಲಿ ದಲಿತರು ಅಧಿಕವಾಗಿ ಕೃಷಿಯನ್ನೇ ಅವಲಂಬಿಸಿರುವುದರಿಂದ ಇವರಲ್ಲಿ ಅಧಿಕವಾಗಿ ಕೃಷಿ ಕಾರ್ಮಿಕರಿದ್ದಾರೆ. 'ಉಳುವವನಿಗೇ ಭೂಮಿ' ಎಂಬ ಘೋಷಣೆಯಿದ್ದರೂ ದಲಿತರು ಭೂ ಒಡೆತನ ಹೊಂದಿಲ್ಲ. 'ಉಳುವವನಿಗೆ ಭೂಮಿ' ಎಂಬ ಕಾನೂನು ಇದ್ದರೂ ಸಮರ್ಪಕವಾಗಿ ಜಾರಿಯಾಗಿಲ್ಲ. ವಾಸ್ತವದಲ್ಲಿ ಇನ್ನೂ ಸಾವಿರಾರು ದಲಿತರು ಭೂ ರಹಿತರಾಗಿಯೆ ಉಳಿದಿರುವರು. ಕೆಲವು ರೈತರು ಭೂ ಮಾಲೀಕರಾದರೂ ಸಣ್ಣ ಮತ್ತು ಅತಿ ಸಣ್ಣ ಭೂ ಹಿಡುವಳಿಯ ಒಡೆತನವನ್ನು ಹೊಂದಿದ್ದಾರೆ. ದಲಿತರಿಗೆ ಸರ್ಕಾರದಿಂದ ಹಂಚಿಕೊಟ್ಟಂಥ ಭೂಮಿಯನ್ನು ಜಮೀನುದಾರರು ಮೋಸದಿಂದ ಕೈವಶ ಮಾಡಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಪೋಲಿಸರು, ಕಾನೂನು ಅಧಿಕಾರಿಗಳು ಜಮೀನ್ದಾರರ ಪರವಾಗಿಯೇ ಇದ್ದಾರೆಯೇ ಹೊರತಾಗಿ ದಲಿತರ ಪರವಾಗಿ ಇಲ್ಲ. ದಲಿತ ಮಹಿಳೆಯು ದಲಿತ ಪುರುಷನಿಗಿಂತ ಅಧಿಕವಾಗಿ ಕೃಷಿ ಕೆಲಸಗಳಲ್ಲಿ ಪಾಲ್ಗೊಳ್ಳುತ್ತಾಳೆ. ಭೂ ಸುಧಾರಣಾ ಕಾನೂನಿಗಿಂತ ಭೂಮಿತಿ ಶಾಸನವು ದಲಿತರಿಗೆ ಭೂಮಿಯನ್ನು ನೀಡಿತು. ೧೯೭೮ರಲ್ಲಿ ಸರ್ಕಾರವು ಕಾನೂನನ್ನು ಜಾರಿಗೆ ತರುವುದರ ಮೂಲಕ ದಲಿತರಿಗೆ ದೊರೆತ ಭೂಮಿಯ ಪರಭಾರೆಯನ್ನು ನಿಷೇಧಿಸಿತು. ಇದರಿಂದ ಭೂಮಿಯನ್ನು ಕಳೆದುಕೊಂಡ ದಲಿತರು ಜಮೀನನ್ನು ವಾಪಸ್ಸು ಪಡೆಯಲಾಗಲಿಲ್ಲ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಕೆಲವು ಭೂ ಹೋರಾಟಗಳನ್ನು ಮಾಡಿ ದಲಿತರಿಗೆ ಭೂಮಿಯನ್ನು ಒದಗಿಸಿದೆ, ಅವುಗಳಲ್ಲಿ ಮುಖ್ಯವಾದಂಥವು.

೧. **ಸಿದ್ಲಿಪುರ ಭೂ ಹೋರಾಟ** - ಸಿದ್ಲಿಪುರ ಭದ್ರಾವತಿ ತಾಲೂಕಿನ ಒಂದು ಚಿಕ್ಕ ಗ್ರಾಮ. ಇಲ್ಲಿ ೩೩ ಎಕರೆ ನೀರಾವರಿ ಭೂಮಿ ದಲಿತರಿಗೆ ಮಂಜೂರು ಆಗಿತ್ತು. ಆದರೆ ಆರ್.ಎಸ್.ಎಸ್. ಗೆ ಸೇರಿದ ಭೂಪಾಳಂ ಎನ್ನುವ ಜಮೀನ್ದಾರ ಈ ಭೂಮಿಯನ್ನು ಕಬಳಿಸಿದ. ಈತ ಜನರಿಂದ ಎರಡು ವರ್ಷಕ್ಕೊಮ್ಮೆ ರಿಗ್ರಾಂಟ್‌ಗಾಗಿ ಅರ್ಜಿ ಹಾಕಿಸುವುದನ್ನೇ ಮಾಡುತ್ತಿದ್ದ ಹೊರತಾಗಿ ಒಡೆತನವನ್ನು ತನ್ನಲ್ಲಿ ಇಟ್ಟುಕೊಂಡು ಜನರಿಂದ ಖರೀದಿಸಿರುವೆನೆಂದು ಹೇಳುತ್ತಾ ಅಕ್ರಮವಾಗಿ ಸಾಗುವಳಿ ಮಾಡುತ್ತಿದ್ದನು. ಆದರೆ ೧೯೭೭ರಲ್ಲಿ ಡಿ.ಎಸ್.ಎಸ್.ದವರು ಜಮೀನ್ದಾರನಿಂದ ಭೂಮಿಯನ್ನು ಪಡೆಯಲು ಸತ್ಯಾಗ್ರಹದ ಮೂಲಕ ಹೋರಾಟವನ್ನು ಪ್ರಾರಂಭಿಸಿದರು. ಆದರೆ ೧೯೭೮ರಲ್ಲಿ ಸರ್ಕಾರವು ಒಂದು ವಿಶೇಷ ಆಜ್ಞೆ ಹೊರಡಿಸಿತು. ಅದರಂತೆ ''೧೯೭೫ ರಿಂದ ಈಚೆಗೆ ಯಾವನೇ ವ್ಯಕ್ತಿ ಹರಿಜನರಿಂದ ಇನಾಮತಿ ಭೂಮಿಯನ್ನು ಅಕ್ರಮವಾಗಿ ಸ್ವಾಧೀನಪಡಿಸಿಕೊಂಡಿದ್ದರೆ ಕೂಡಲೇ ಅವರಿಂದ ಭೂಮಿ ತೆರವು ಮಾಡಿಸಿ ಹರಿಜನರಿಗೆ ಹಂಚತಕ್ಕದ್ದು ಎಂದು ಸರಕಾರ ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಿತು.'' (ದೇವರಾಜ ಜಿ.ಪಿ., ೨೦೦೬, ಪು ೭೧) ಇದರಿಂದ ಕರ್ನಾಟಕ ಸರ್ಕಾರ ಭೂ ಪರಭಾರೆ ನಿಷೇಧ ಕಾಯ್ದೆ ಜಾರಿಗೆ ತರಬೇಕಾಯಿತು. ಈ ಕಾಯ್ದೆಯ ವಿರುದ್ಧ ಭೂಪಾಳಂ ಜಮೀನ್ದಾರ ಹೈಕೋರ್ಟಿನಲ್ಲಿ ದಾವೆ ಹೂಡಿದ. ಆದರೆ ೧೯೭೮ ರಲ್ಲಿ ದಲಿತರಿಗೆ ಭೂಮಿ ದೊರೆಯುವಂತಾಯಿತು. ದಲಿತರಿಗೆ ಈ ಭೂಮಿಯನ್ನು ತಲಾ ಒಂದು ಎಕರೆಯಂತೆ ಹಂಚಲಾಯಿತು.

೨. **ಚಂದಗೋಡು ಭೂ ಹೋರಾಟ** - ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ಒಂದು ಗ್ರಾಮ ಚಂದಗೋಡು. ೧೯೭೯ ರಲ್ಲಿ ಈ ಗ್ರಾಮದ ೬೦೦ ಎಕರೆ ಬಗರ್ ಹುಕುಂ ಭೂಮಿಯಲ್ಲಿ ೩೦೦ ಎಕರೆ ಭೂಮಿಯು ಡಿ.ಎಸ್.ಎಸ್. ನೇತೃತ್ವದಲ್ಲಿ ದಲಿತರಿಗೆ ದೊರಕಿದೆ. ಆದರೆ ಇನ್ನು ಉಳಿದಿರುವ ೩೦೦ ಎಕರೆ ಭೂಮಿಯನ್ನು ಬಲಿಷ್ಠ ಭೂ ಮಾಲೀಕರು ಆಕ್ರಮಿಸಿಕೊಂಡು ಕಾಫಿ ಗಿಡ ಬೆಳೆದಿದ್ದರು. ಈ ಭೂ ಮಾಲೀಕರಿಂದ ಭೂಮಿಯನ್ನು ಕಿತ್ತುಕೊಳ್ಳಲು ಸಿಪಿಐ ಜಿಲ್ಲಾ ಶಾಖೆಯ ನೇತೃತ್ವದಲ್ಲಿ ಹೋರಾಟವು ಪ್ರಾರಂಭಿಸಲಾಯಿತು. ಸುತ್ತ ಮುತ್ತಲಿನ ಗ್ರಾಮದ ಜನರು ಮತ್ತು ಮಹಿಳೆಯರು ಸೇರಿದಂತೆ ಈ ಹೋರಾಟದಲ್ಲಿ ೧೫೦೦ ಕ್ಕೂ ಹೆಚ್ಚು ಜನ ಪ್ರತಿಭಟಿಸಿದರು. ಆಗ ಭೂ ಮಾಲೀಕರು ಭೂಮಿಯನ್ನು ದಲಿತರಿಗೆ ಮರಳಿಸಿದರು. ಈ ಹೋರಾಟದಿಂದ ಚಂದಗೋಡು ಗ್ರಾಮದ ೩೦೦ ಎಕರೆ ಬಗರ್ ಹುಕುಂ ಭೂಮಿಯನ್ನು ೬೦ ಕುಟುಂಬಗಳಿಗೆ ತಲಾ ಐದು ಎಕರೆಯಂತೆ ಹಂಚಲಾಯಿತು.

೩. **ಬಿದಿರೆ ಕಾವಲು ಭೂ ಹೋರಾಟ** - ಬಿದಿರೆ ಗ್ರಾಮವು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿದೆ. ಬಿದಿರೆ ಗ್ರಾಮದಲ್ಲಿ ೮೦೦ ಎಕರೆ ಅರಣ್ಯ ಭೂಮಿಯನ್ನು ಮತ್ತು ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಕಾಳನಹಟ್ಟಿ ಗ್ರಾಮದ ೧೫೦ ಎಕರೆ ಅರಣ್ಯ ಭೂಮಿಯನ್ನು ಭೂ ರಹಿತ, ರೈತ ಕಾರ್ಮಿಕರು ಆಕ್ರಮಿಸಿಕೊಂಡು ಸುಮಾರು ೨೫ ವರ್ಷಗಳಿಂದ ಸಾಗುವಳಿಯನ್ನು ಮಾಡುತ್ತಿದ್ದರು. ಆದರೆ ಅವರಿಗೆ ಆ ಭೂಮಿಯ ಹಕ್ಕು ಪತ್ರ ಸಿಕ್ಕಿರಲಿಲ್ಲ. ಸರ್ಕಾರವು ಹಕ್ಕು ಪತ್ರ ನೀಡದ ಕಾರಣ ಹಕ್ಕು ಪತ್ರ ನೀಡಬೇಕೆಂದು ಹೋರಾಟವು ಪ್ರಾರಂಭವಾಯಿತು. ಕಾಳನಹಟ್ಟಿ ಗ್ರಾಮದವರಿಗೆ ಈ ಹೋರಾಟದಿಂದ ಹಕ್ಕು ಪತ್ರ ದೊರೆಯಿತು. ಅದೇ ರೀತಿ ಬಿದಿರೆ ಗ್ರಾಮದವರಲ್ಲಿ ಇರುವ ಎಲ್ಲಾ ಜಾತಿಯ ಬಡವರಿಗೆ ೮೦೦ ಎಕರೆ ಅರಣ್ಯ ಭೂಮಿಯನ್ನು ಉಳಲು ಅನುವು ಮಾಡಿಕೊಡಲಾಗಿದೆ.

ಡಿ.ಎಸ್.ಎಸ್. ನೇತೃತ್ವದಲ್ಲಿ ಅನೇಕ ಭೂ ಹೋರಾಟ ಚಳುವಳಿಗಳು ನಡೆದರೂ ಭೂಮಿಯನ್ನು ಪಡೆದ ದಲಿತ ರೈತರಲ್ಲಿಯೇ ಭೂಮಿಯನ್ನು ಹಂಚುವಾಗ ನ್ಯಾಯಯುತವಾಗಿ ನಡೆಯಲಿಲ್ಲ. ಭೂಮಿಯ ಬಗೆಗಿರುವ

ದಲಿತರ ಹಕ್ಕೊತ್ತಾಯವನ್ನು ದಲಿತೇತರರು ಒಪ್ಪದ ಕಾರಣ ಭೂಮಿಯನ್ನು ಮುಖ್ಯ ಪ್ರಶ್ನೆಯನ್ನಾಗಿ ಮಾಡಿಕೊಂಡು ದಲಿತರು ಮತ್ತು ದಲಿತೇತರರ ನಡುವೆ ಹೋರಾಟಗಳು ನಡೆಯುತ್ತಾ ಬಂದವು. ಈ ಭೂ ಹೋರಾಟದಲ್ಲಿ ದಲಿತ ಮಹಿಳೆಯರು ಪುರುಷರಂತೆ ಭಾಗವಹಿಸಿದ್ದರೂ ಕೂಡ ಅವರ ಹೆಸರು ಎಲ್ಲಿಯೂ ಕೇಳಿಬರಲಿಲ್ಲ. ದಲಿತ ಸಂಘರ್ಷ ಸಮಿತಿಯ ನೇತೃತ್ವದ ಹೋರಾಟದಲ್ಲೇ ಆಗಲೀ ಅಥವಾ ಇತರ ಭೂ ಹೋರಾಟದಲ್ಲೇ ಆಗಲೀ ಮಹಿಳೆಯರು ಭಾಗವಹಿಸಿದ್ದರು. ಅವರು ಈ ಹೋರಾಟದಲ್ಲಿ ಅಗೋಚರರಾಗಿರುವರು. ಕಾರಣ ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ, ದಲಿತರಲ್ಲಾಗಲಿ, ದಲಿತೇತರರಲ್ಲಾಗಲಿ ಭೂಮಿಯ ಒಡೆಯ ಪುರುಷನೇ ಆಗಿರುವುದು. ದಲಿತ ಸಂಘರ್ಷ ಸಮಿತಿಯು ದಲಿತರಿಗೆ ನ್ಯಾಯ ಒದಗಿಸಲು ಹೋರಾಡಿದೆ. ಆದರೆ ಈ ಸಮಿತಿಯು ಕೂಡ ಮಹಿಳೆಯರನ್ನು ಪರಿಗಣಿಸಲೆ ಇಲ್ಲ. ಮಹಿಳೆಯು ಹೋರಾಟದಲ್ಲಿ ಭಾಗವಹಿಸಿದರೂ ಕೂಡ ಭೂಮಿಯನ್ನು ಹಂಚುವ ಸಂದರ್ಭದಲ್ಲಿ ಪುರುಷನೇ ಗೋಚರಿಸಿರುವನು ಹೊರತಾಗಿ ಮಹಿಳೆಯಲ್ಲ. ಹೀಗಾಗಿ ದಲಿತರು ತುಳಿತಕ್ಕೆ ಒಳಗಾದವರಾದರೂ ಅಧಿಕಾರದ ಸಂದರ್ಭದಲ್ಲಿ ದಲಿತ ಮಹಿಳೆ ದಲಿತ ಪುರುಷನಿಂದಲೂ ತುಳಿತಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಹೀಗಾಗಿ ದಲಿತ ಮಹಿಳೆಯರು ಭೂ ಒಡೆತನದಿಂದ ವಂಚಿತರಾದರು.

**೬.೨.೪. ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿ ಕಾರ್ಮಿಕರ ಸಂಘದ ರಾಯಚೂರು ಹೋರಾಟ (೧೯೯೭ - ೧೯೯೯)**

ರಾಯಚೂರು ಜಿಲ್ಲೆಯಲ್ಲಿ ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿ ಕಾರ್ಮಿಕರ ಸಂಘದ ನೇತೃತ್ವದಲ್ಲಿ ಹೋರಾಟ ನಡೆದಿದೆ. ರಾಯಚೂರು ಜಿಲ್ಲೆಯು ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಜಿಲ್ಲೆಯಾಗಿದೆ. ಈ ಸಂಘವು ದಲಿತರಿಗಾಗಿ ಜಮೀನ್ದಾರರ ವಿರುದ್ಧ ಹೋರಾಡಿದ್ದೇ ಅಲ್ಲದೆ ಅನ್ಯಾಯದ ವಿರುದ್ದ ಕೂಡ ಹೋರಾಡಿದೆ. ರಾಯಚೂರು ಜಿಲ್ಲೆಯಲ್ಲಿ ಭೂಮಿಗೆ ಸಂಬಂಧಿಸಿದ ಸಮಸ್ಯೆಗಳು ಅಧಿಕವಾಗಿವೆ. ಇಲ್ಲಿಯ ಭೂ ಮಾಲೀಕರು ಇನಾಮ್ತಿ ಭೂಮಿಯನ್ನು ಅನುಭವಿಸುತ್ತಿರುವುದು ಕಂಡು ಬಂದಿದೆ. ರಾಯಚೂರಿನ ಜೇಗರ್‌ಕಲ್‌ನಲ್ಲಿ ೧೪೦ ಎಕರೆ ಇನಾಮ್ತಿ ಭೂಮಿಯನ್ನು ಅಲ್ಲಿಯ ಭೂ ಮಾಲೀಕನೊಬ್ಬ ಅನುಭವಿಸುತ್ತಿದ್ದನು. ಕೂರ್ತಕುಂದಾ, ದೇವಸುಗೂರುಗಳಲ್ಲಿಯೂ ಸಹ ಭೂ ಮಾಲೀಕರು ಅಕ್ರಮವಾಗಿ ಹೆಚ್ಚುವರಿ ಭೂಮಿಯನ್ನು ಅನುಭವಿಸುತ್ತಿದ್ದರು. ಅದಕ್ಕಾಗಿ ಅಲ್ಲಿಯ ಬಡರೈತರ ಸಮಸ್ಯೆಯನ್ನು ಗುರುತಿಸಿ ರೈತ ಕೂಲಿಕಾರ್ಮಿಕರ ಸಂಘವು ತನ್ನ ನೇತೃತ್ವದಲ್ಲಿ ರೈತರನ್ನು ಸಂಘಟಿಸಿ ಭೂ ಸಂಬಂಧಿತ ವಿಷಯಗಳನ್ನು ಪರಿಹರಿಸಲು ಕೂಡಲೇ ಕ್ರಮ ತೆಗೆದುಕೊಳ್ಳುವುದಕ್ಕಾಗಿ ಮತ್ತು ಭೂ ಸುಧಾರಣೆಯು ಸಂಪೂರ್ಣವಾಗಿ ಜಾರಿಗೆ ತರಬೇಕೆಂದು ಒತ್ತಾಯಿಸಿತು. ರೈತರನ್ನು ಬಡ್ಡಿಕೋರರ ಶೋಷಣೆಯಿಂದ ಮುಕ್ತಗೊಳಿಸಲು ಸುಲಭ ದರದ ಸಾಲ ಒದಗಿಸಬೇಕೆಂದು ಸಂಘವು ಸರಕಾರಕ್ಕೆ ಒತ್ತಾಯಿಸಿತು. ಸರಕಾರದವರು ರೈತರಿಗೆ ಭೂಮಿಯು ದೊರೆಯುವಂತೆ ಮಾಡಿದರು.

''ಭಾರತದಲ್ಲಿನ ಪ್ರಜಾಪ್ರಭುತ್ವ ಮಾದರಿಯನ್ನೇ ನಿರಾಕರಿಸುವ ಈ ಸಂಸ್ಥೆ/ಸಂಘಟನೆ ಕಡು ಎಡಪಂಥೀಯ ಧೋರಣೆಯನ್ನು ಹೊಂದಿದೆ. ರಾಜಕೀಯವಾಗಿ ಸಿ.ಪಿ.ಐ (ಎಂ-ಎಲ್) ಪೀಪಲ್ಸ್ ವಾರ್ ಗ್ರೂಪ್ ಎನ್ನುವ ಸಂಘಟನೆಯೊಂದಿಗೆ ಗುರುತಿಸಿಕೊಳ್ಳುವ ರೈತ ಕೂಲಿ ಕಾರ್ಮಿಕರ ಸಂಘದ ಜೊತೆ ಜೊತೆಗೆ ಪಿ.ಡಬ್ಲ್ಯೂ.ಜಿ.ಯ. ಇನ್ನಿತರ ಘಟಕಗಳಾದ ಕರ್ನಾಟಕ ವಿಮೋಚನಾ ರಂಗ, ಪೀಪಲ್ಸ್ ಡೆಮಾಕ್ರೆಟಿಕ್ ಫಾರಂ, ಪ್ರಗತಿಪರ ವಿದ್ಯಾರ್ಥಿ ಕೇಂದ್ರ ಹಾಗೂ ಪ್ರಗತಿಪರ ಯುವಜನ ಸಂಘಗಳ ಸಹಕಾರದೊಂದಿಗೆ ರೈತರ ಸಮಸ್ಯೆಗಳಿಗೆ ತನ್ನದೇ ರೀತಿಯಲ್ಲಿ ಪರಿಹಾರ ಕಂಡುಕೊಳ್ಳಲು ಕಾರ್ಯಗಳನ್ನು ಹಮ್ಮಿಕೊಂಡಿದೆ.'' (ತಂಬಂಡ ವಿಜಯ್ ಪೂಣಚ್ಚ, ೧೯೯೯, ಪು ೫೪,೫೫) ಭೂಮಾಲೀಕರು ಪೋಲಿಸರ ಸಹಾಯದಿಂದ ಭೂಹೀನ ರೈತರನ್ನು ಬಗ್ಗು ಬಡಿಯುತ್ತಿದೆಯೆಂದು ಸಂಘವು

ಆಪಾದಿಸಿತು. ಭೂಮಾಲೀಕರು ಜಿಲ್ಲೆಯಲ್ಲಿ ಮಾಡಿರುವ ಅನ್ಯಾಯ, ಅಕ್ರಮ, ಅತ್ಯಾಚಾರಗಳಿಗೆ ಸೂಕ್ತ ಶಿಕ್ಷೆಯನ್ನು ನೀಡಬೇಕೆಂದು ಹೋರಾಟ ಮಾಡುತ್ತಲೇ ಬಂದಿದೆ. ತಮ್ಮ ಮುಖವಾಣಿಯಾದ 'ಜನವಿಮುಕ್ತಿ'ಯಲ್ಲಿ ಜಿಲ್ಲೆಯ ಎಲ್ಲಾ ಭೂಹೀನರನ್ನು ಒಗ್ಗೂಡಿಸುವ ಕೆಲಸ ಕೈಗೊಂಡಿತು. ತಮ್ಮ ನಿರೀಕ್ಷೆಯಂತೆ ಹೋರಾಡಿ ಭೂಮಿಯನ್ನ ಪಡೆದುಕೊಳ್ಳುವಲ್ಲಿ ವಿಫಲವಾಯಿತು ಎಂದೇ ಹೇಳಬೇಕು. ಇಂದಿಗೂ ಜಿಲ್ಲೆಯಲ್ಲಿ ಅನೇಕ ಭೂರಹಿತ ಕೂಲಿಕಾರರಿರುವುದು ಇದಕ್ಕೆ ಸಾಕ್ಷಿಯಾಗಿದೆ. ನೆರೆಯ ಆಂದ್ರ ಪ್ರದೇಶದಲ್ಲಿರುವ ಈ ರೀತಿಯ ಸಂಘಟನೆಯಲ್ಲಿ ಅನೇಕ ಮಹಿಳೆಯರು ಪಾಲ್ಗೊಂಡಿರುವುದು ಕಂಡುಬರುತ್ತದೆ. ಸರಕಾರದ ವಿರೋಧದ ನಡುವೆ ಕಾರ್ಯಾಚರಿಸುವ ಈ ಸಂಘಟನೆಯ ವಿರುದ್ಧ ಅಲ್ಲಿನ ಸರ್ಕಾರ ಮಟ್ಟಹಾಕಲು ಯತ್ನಿಸುತ್ತಿರುವುದನ್ನು ಕಾಣಬಹುದು. ರಾಯಚೂರು ಜಿಲ್ಲೆಯಲ್ಲಿಯೂ ಕೂಡ ಜಿಲ್ಲೆಯ ಸಂಘಟನೆ ವೈಫಲ್ಯವನ್ನು ಕಂಡಿದೆ ಎಂದೇ ಹೇಳಬಹುದು. ಇಲ್ಲಿ ಪುರುಷ ರೈತರನ್ನು ರೈತರೆಂದೇ ಪರಿಗಣಿಸುತ್ತಾರೆಯೇ ವಿನಃ ರೈತ ಕುಟುಂಬದಲ್ಲಿನ ಮಹಿಳೆಯರನ್ನಲ್ಲ ಎಂಬುದನ್ನು ಗಮನಿಸಬೇಕು. ಹಾಗಾಗಿ ಇಲ್ಲಿಯೂ ಮಹಿಳೆಯು ನಗಣ್ಯಳಾಗಿರುತ್ತಾಳೆ ಮತ್ತು ಭೂಮಿ ವಿಚಾರ ಬಂದಾಗ ಆಕೆಯ ಪತಿಗೆ ಮೊದಲ ಆದ್ಯತೆಯಿರುವುದನ್ನು ಕಾಣಬಹುದು.

**೬.೨.೫. ಕರ್ನಾಟಕ ಪ್ರಾಂತ ರೈತ ಸಂಘದ ಚಳುವಳಿಗಳು (೧೯೫೦ - ೧೯೭೦)**

ಕರ್ನಾಟಕ ಪ್ರಾಂತ ರೈತ ಸಂಘವು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ರೈತರನ್ನು ಸಂಘಟಿಸಿ ಚಳುವಳಿಗಳನ್ನು ಮಾಡಿದೆ. ಮೈಸೂರು ರಾಜ್ಯದ ಉಗಮದ ಜೊತೆ ಜೊತೆಗೇನೇ ಕರ್ನಾಟಕದಲ್ಲಿ ರೈತ ಸಂಘವು ಹುಟ್ಟಿಕೊಂಡಿದೆ. ಕರ್ನಾಟಕ ಪ್ರಾಂತ ರೈತ ಸಂಘವು ಕರ್ನಾಟಕದ ರೈತ ಹೋರಾಟಗಳಲ್ಲಿಯೇ ಬಹಳ ಪ್ರಮುಖವಾದ ಪಾತ್ರ ವಹಿಸಿದೆ. ಭೂ ಮಾಲೀಕರ ಬಂಡವಾಳಶಾಹಿ ಪದ್ಧತಿಯನ್ನು ನಾಶ ಮಾಡುವುದು ಮತ್ತು ಸ್ವಾತಂತ್ರ್ಯ ಹೋರಾಟದೊಂದಿಗೆ ರೈತ ಹೋರಾಟವನ್ನು ಬೆಸೆಯುತ್ತಾ ಭಾರತದಲ್ಲಿಯ ರೈತರನ್ನು ಒಂದುಗೂಡಿಸುವುದು ಮತ್ತು ಗ್ರಾಮೀಣ ಸಮಸ್ಯೆಗಳಿಗೆ ಹೋರಾಟದ ಮೂಲಕ ಪರಿಹಾರ ಕಂಡುಕೊಳ್ಳುವುದೇ ಸಂಘಟನೆಯ ಉದ್ದೇಶವಾಗಿತ್ತು. ಈ ಸಂಘವು ಅನೇಕ ಭೂ ಹೋರಾಟಗಳನ್ನು ಮಾಡಿ ಭೂಮಿಯಿಲ್ಲದವರಿಗೆ ಭೂಮಿಯನ್ನು ಒದಗಿಸಿಕೊಟ್ಟಿದೆ.

ಉಪಲಬ್ಧವಿರುವ ಮಾಹಿತಿಗಳ ಪ್ರಕಾರ ಕೆಲವು ರೈತ ಸಂಘದ ಚಳುವಳಿಗಳಲ್ಲಿ ಮಹಿಳೆಯರು ಭಾಗವಹಿಸಿ ಬಂಧನಕ್ಕೊಳಗಾಗಿರುವುದು ಕಂಡುಬರುತ್ತದೆ. ೧೯೫೫-೬೦ನೇ ಇಸವಿಯಲ್ಲಾದ ಮಂಗಳೂರಿನಲ್ಲಿ ರೈತ ಸಂಘದ ಒತ್ತಾಯದ ಮೇರೆಗೆ ಮಂಗಳೂರು ರೈತರಿಗೆ ನ್ಯಾಯಗೇಣಿ ವಿಚಾರದಲ್ಲಿ ವಿಜಯ ಲಭಿಸಿತು. ೧೯೬೧ರಲ್ಲಿ ಶ್ರೀರಂಗಪಟ್ಟಣದಲ್ಲಿ ಬೆಳಗಾಂ ಜಿಲ್ಲೆಯ ಘಟಪ್ರಭಾ ಯೋಜನೆಗೆ ಸಂಬಂಧಿಸಿದಂತೆ ಪ್ರತಿಭಟನೆ ನಡೆಸಲಾಯಿತು. ೧೯೬೯ರಲ್ಲಿ ಚಿಕ್ಕಬಳ್ಳಾಪುರದಲ್ಲಿ ಹೋರಾಟ ನಡೆದು ೩೦೦ ಎಕ್ರೆ ಭೂಮಿ ರೈತರ ವಶವಾಯಿತು. ೧೯೭೮ - ೭೯ರಲ್ಲಿ ಕೊಡಗು ಜಿಲ್ಲೆಯ ತಿತಿಮತಿ ಪ್ರದೇಶದಲ್ಲಿ ಬಡರೈತರ ಮೇಲೆ ನಡೆದ ದೌರ್ಜನ್ಯ ವಿರೋಧಿಸಿ ರೈತ ಸಂಘದಿಂದ ಪ್ರತಿಭಟನೆ ನಡೆಯಿತು. ೧೯೭೯ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲೂಕಿನಲ್ಲಿ ಅರಣ್ಯಭೂಮಿ ಸ್ವಾಧೀನಕ್ಕೆ ಸಂಬಂಧಿಸಿದಂತೆ ಪ್ರತಿಭಟನೆ ನಡೆದು, ಪೋಲಿಸ್ ಗೋಲಿಬಾರ್‌ನಿಂದ ಓರ್ವ ರೈತನ ಸಾವು ನಡೆಯಿತು. ೧೯೭೯ರಲ್ಲಿ ಬೆಂಗಳೂರಿನ ತಾತಗುಣಿ ಎಸ್ಟೇಟ್ ಕೃಷಿ ಕಾರ್ಮಿಕರ ಹೋರಾಟ ನಡೆಯಿತು. ೧೯೮೦ರಲ್ಲಿ ರಾಯಚೂರು ಉಷ್ಣ ವಿದ್ಯುತ್ ಸ್ಥಾವರಕ್ಕೆ ಭೂಮಿ ಕೊಟ್ಟ ರೈತರಿಗೆ ಸಂಬಂಧಿಸಿದಂತೆ ಪ್ರತಿಭಟನೆ ನಡೆಯಿತು. ೧೯೮೧ರಲ್ಲಿ ಹೊಸಕೋಟೆಯ ನಾಗನಾಯಕನ ಕೋಟೆಯಲ್ಲಿ ಬಂಜರು ಭೂಮಿಗೆ ಸಂಬಂಧಿಸಿದಂತೆ ರೈತಸಂಘದ ಬೆಂಬಲ ಮೂಲಕ ಪ್ರತಿಭಟನೆ ನಡೆಯಿತು. ೧೯೮೨ರಲ್ಲಿ ಹೋರಾಟದ ಮೂಲಕ ದಲಿತರು ಭೂಮಿಯನ್ನು ದಕ್ಕಿಸಿಕೊಂಡರು.

೧೯೮೦ರಲ್ಲಿ ಮಲಪ್ರಭ ರೈತ ಹೋರಾಟವು ರಾಜ್ಯದ ರೈತ ಚಳುವಳಿಯ ಒಂದು ಮೈಲಿಗಲ್ಲು. ಅನ್ಯಾಯವಾಗಿ ಹಾಕಿದ್ದ ಜಲ - ನೀರಾವರಿ ತೆರಿಗೆಯ ವಿರುದ್ಧ ರೈತರೆಲ್ಲಾ ಪ್ರತಿಭಟಿಸಿದರು. ೧೯೮೧ರಲ್ಲಿ ಗಂಗಾವತಿ ಮತ್ತು ಬಳ್ಳಾರಿಯಲ್ಲಿ ನಡೆದ ದಲಿತ ರೈತರ ಹೋರಾಟ ಗಮನಾರ್ಹವಾದುದು. ಪ್ರತಿಭಟನೆ ಸತ್ಯಾಗ್ರಹ ನಡೆದು ರೈತರು ಉತ್ತಿ ಬೆಳೆದ ಭೂಮಿಯನ್ನು 'ಪಟ್ಟಾ' ಮಾಡಿ ಹಂಚಲಾಯಿತು.

೧೯೯೪ - ೯೫ರಲ್ಲಿ ಹಾನಗಲ್ಲು-ಬ್ಯಾಡಗಿಯಲ್ಲಿ ರೈತ ಸಂಘದ ನೇತೃತ್ವದಲ್ಲಿ ಭೂ ಆಕ್ರಮಣ ಮಾಡಿ ಯಶಸ್ವಿಯಾಯಿತು. ''೧೩ ಗ್ರಾಮಗಳಲ್ಲಿ ೧೫೦೦ಕ್ಕೂ ಹೆಚ್ಚು ಎಕರೆ ಭೂ ಆಕ್ರಮಣ ಮಾಡಲಾಗಿದೆ. ೧೯೯೬ರ ನಂತರ ಈ ಭಾಗದಲ್ಲಿ ೬೦೦ ಜನಕ್ಕೂ ಹೆಚ್ಚು ರೈತರು ಜೈಲು ವಾಸ ಅನುಭವಿಸಿದ್ದಾರೆ. ಇದರಲ್ಲಿ ೧೦೦ ಜನ ಮಹಿಳೆಯರಿದ್ದಾರೆ. ೧೯೯೭ರಲ್ಲಿ ಪುನಃ ಈ ಕೃಷಿ ಕೂಲಿಕಾರರು ತಹಶೀಲ್ದಾರರ ಮುಂದೆ ಸಾವಿರಾರು ಸಂಖ್ಯೆಯಲ್ಲಿ ಕುಳಿತು ತಾವು ಕೃಷಿ ಮಾಡುತ್ತಿರುವ ಭೂಮಿಯ ಹಕ್ಕು ಪತ್ರಗಳನ್ನು ಕೊಡಬೇಕೆಂದು ಒತ್ತಾಯಿಸಿದರು. ಈ ಹೋರಾಟಗಳಿಗೆ ಧಾರವಾಡದ ಕಾರ್ಮಿಕ ಸಂಘಟನೆಗಳು, ಎಲ್.ಐ.ಸಿ. ನೌಕರರೂ ಗಣನೀಯ ಪ್ರಮಾಣದಲ್ಲಿ ಬೆಂಬಲ ನೀಡಿರುವುದು ಗಮನಾರ್ಹವಾಗಿದೆ.'' (ತಂಬಂಡ ವಿಜಯ್ ಪೂಣಚ್ಚ, ೧೯೯೯, ಪು ೧೭) ಪುರುಷರಂತೆ, ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸಿರುವುದನ್ನು ಇಲ್ಲಿ ಕಾಣಬಹುದು.

### ೬.೨.೬. ಬಾಗೂರು - ನವಿಲೆ ರೈತ ಹೋರಾಟ (೧೯೯೮)

ಬಾಗೂರು - ನವಿಲೆ ರೈತ ಹೋರಾಟವು ಜೆ.ಎಚ್.ಪಟೇಲರು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ನಡೆದಂಥ ಹೋರಾಟವಾಗಿದೆ. ಬಾಗೂರು - ನವಿಲೆ ರೈತ ಹೋರಾಟಕ್ಕೆ ಕಾರಣವೇನೆಂದರೆ, ಹಾಸನ ಜಿಲ್ಲೆಯ ಬಾಗೂರು ಗ್ರಾಮದ ಹತ್ತಿರವಿರುವ ಗೊರೂರಿನಲ್ಲಿ ಹೇಮಾವತಿ ನದಿಗೆ ಅಣೆಕಟ್ಟನ್ನು ಕಟ್ಟಿ ತುಮಕೂರು ಮತ್ತು ಮಂಡ್ಯ ಜಿಲ್ಲೆಗಳಿಗೆ ನೀರು ಸರಬರಾಜು ಮಾಡಲಾಗುತ್ತಿತ್ತು. ಗೊರೂರಿನಿಂದ ಬಾಗೂರಿನವರೆಗೂ ಬಂದ ಕಾಲುವೆ ಮುಂದೆ ಹೋಗಲು ಏರು ಪ್ರದೇಶ ಎದುರಾಗಿರುವುದರಿಂದ ಬಾಗೂರಿನಿಂದ ಹತ್ತು ಕಿ.ಮೀ. ದೂರದಲ್ಲಿರುವ ನವಿಲೆಯವರೆಗೂ ಸುರಂಗವನ್ನು ತೋಡಿದರು. ಈ ಸುರಂಗದ ಕಾಮಗಾರಿ ಮುಗಿಯುವಷ್ಟರಲ್ಲಿ ರೈತರ ಬದುಕಿನಲ್ಲಿ ದುರಂತ ಉಂಟಾಯಿತು. ಕಾರಣ ಬಾಗೂರು ಮತ್ತು ನವಿಲೆ ನಡುವಿನ ತೆಂಗಿನ ತೋಟಗಳು ಒಣಗಿ ಹೋಗಲು ಆರಂಭಿಸಿದವು. ಮರಗಳಿಗೆ ರೋಗ ತಗುಲಿರಬಹುದೆಂದು ತಿಳಿದ ರೈತರು ಔಷಧಿಯನ್ನು ಬಳಸಿದರು. ನಂತರ ಅವು ಫಸಲು ಬಿಡದ ಕಾರಣ ನೀರಿನ ಕೊರತೆ ಇರಬಹುದೆಂದು ತಿಳಿದು ಕೊಳವೆ ಬಾವಿ ತೋಡಿದರು. ಕೊಳವೆ ಬಾವಿಯ ನೀರು ಸಹ ಬತ್ತಿ ಹೋಗಿದ್ದವು. ಇದಕ್ಕೆಲ್ಲಾ ಕಾರಣ ಅಲ್ಲಿಯ ಅಂತರ್ಜಲವೆಲ್ಲಾ ಸುರಂಗದಲ್ಲಿ ಬಸಿದು ಹೋಗಿತ್ತು. ಕ್ರಮೇಣ ಕೆರೆ ಮತ್ತು ಬಾವಿಯ ನೀರು ಸಹ ಬತ್ತಿ ಹೋಗಿದ್ದರಿಂದ ಕುಡಿಯಲು ನೀರಿಲ್ಲದೆ ರೈತರು ಪರದಾಡಬೇಕಾಯಿತು. ಇಲ್ಲಿಯ ಹಳ್ಳಿಯ ಜನರಿಗೆ ವ್ಯವಸಾಯವೇ ಜೀವನಕ್ಕೆ ಮೂಲ ಆಧಾರವಾಗಿರುವುದರಿಂದ ಅಂತರ್ಜಲ ಕುಗ್ಗಿರುವುದರಿಂದ ಜನರು ಸಂಕಷ್ಟಕ್ಕೆ ಒಳಗಾದರು.

ಹತ್ತು ವರ್ಷಗಳಿಂದ ಫಸಲು ನೀಡದ ಕಾರಣ ಬಡ ರೈತರು ಜೀವನ ನಡೆಸುವುದೇ ಕಷ್ಟಕರವಾಯಿತು. ಆಗ ಅಖಿಲ ಭಾರತ ಕಿಸಾನ್ ಸಭಾ ರೈತ ಸಂಘದವರೊಂದಿಗೆ ಬಾಗೂರು ಮತ್ತು ನವಿಲೆಯ ರೈತರೆಲ್ಲರೂ ಸೇರಿಕೊಂಡು ಸಂಬಂಧ ಪಟ್ಟ ಅಧಿಕಾರಿಗಳಿಗೆ ಮನವಿ ಮಾಡಿಕೊಂಡರೂ ಪ್ರಯೋಜನವಾಗಲಿಲ್ಲ. ಆಗ ರೈತರೆಲ್ಲರೂ ಸೇರಿ ಚಳುವಳಿಯನ್ನು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಮುಖ್ಯಮಂತ್ರಿಗಳು ಹಾಸನ ಜಿಲ್ಲೆಗೆ ಭೇಟಿ ನೀಡಿ ಅಲ್ಲಿಯ ಸಮಸ್ಯೆಯ ಕುರಿತು ಅಧ್ಯಯನ ಮಾಡಲು ಸಮಿತಿಯನ್ನು ರಚಿಸಿದರು. ಈ ಸಮಿತಿಯ ವರದಿ ''ಕಳೆದ ಹತ್ತು

ವರ್ಷದ ಅವಧಿಯಲ್ಲಿ ಹತ್ತು ಕಿ.ಮೀ. ಉದ್ದಕ್ಕೂ ೨ ಲಕ್ಷ ೧೮ ಸಾವಿರಕ್ಕೂ ಹೆಚ್ಚಿನ ತೆಂಗಿನ ಮರಗಳು ಫಸಲು ಕಳೆದುಕೊಂಡಿವೆ. ೨೮ ಹಳ್ಳಿಗಳು ನಷ್ಟ ಅನುಭವಿಸಿವೆ. ೨೫೭೫ ರೈತ ಕುಟುಂಬಗಳು ಸಂಕಷ್ಟಕ್ಕೀಡಾಗಿವೆ. ಸರಕಾರ ಈ ಎಲ್ಲಾ ರೈತರಿಗೆ ಒಟ್ಟು ೨೫ ಕೋಟಿ ೬೧ ಲಕ್ಷ ರೂಪಾಯಿಗಳ ನಷ್ಟ ತುಂಬಬೇಕು. ಮಾವು - ಹಲಸುಗಳಿಗೂ ಆದ ನಷ್ಟ ತುಂಬಿ ಕೊಡಬೇಕಲ್ಲದೆ, ರೈತರ ನೀರಾವರಿ ಮೂಲ ಬತ್ತಿ ಹೋಗಿರುವುದರಿಂದ ಹನಿ ನೀರಾವರಿ ಮೂಲಕ ವ್ಯವಸ್ಥೆ ಮಾಡಬೇಕು ಎಂದಿತು.'' (ತಂಬಂಡ ವಿಜಯ್ ಪೂಣಚ್ಚ, ೨೦೦೨, ಪು ೩೬೩) ಆದರೆ ಈ ವರದಿಯು ಧೂಳನ್ನು ತಿನ್ನುತ್ತಾ ಕಛೇರಿಯಲ್ಲಿ ಕುಳಿತು ಬಿಟ್ಟದ್ದರಿಂದ ಆಗ ರೈತರೆಲ್ಲರೂ ಮುಖ್ಯಮಂತ್ರಿಯ ಮನೆ ಎದುರು ಧರಣಿ ಕುಳಿತರು. ಮುಖ್ಯಮಂತ್ರಿಗಳು ಆಶ್ವಾಸನೆ ನೀಡಿದ್ದರಿಂದ ರೈತರು ಮರಳಿ ಬಂದರು. ಆದರೆ ಆಶ್ವಾಸನೆ ಆಶ್ವಾಸನೆಯಾಗಿಯೇ ಉಳಿಯಿತು. ಆಗ ರೈತರು ಬಾಗೂರಿನಲ್ಲಿಯ ಸುರಂಗ ಮಾರ್ಗಕ್ಕೆ ಮಣ್ಣು ಹಾಕಿ ನೀರು ಹೋಗದಂತೆ ಬಂದ್ ಮಾಡಿ ಧರಣಿ ಕುಳಿತರು. ಬಾಗೂರಿನಿಂದ ನವಿಲೆವರೆಗೂ ಮಾನವ ಸರಪಳಿ ಮಾಡಿ ಪ್ರತಿಭಟಿಸಿದರು. ಹಾಸನ ಬಂದ್ ಮಾಡಿದರು. ಅದಕ್ಕೂ ಸರಕಾರ ಜಗ್ಗದಿದ್ದಾಗ ರೈತರು ರಸ್ತೆ ತಡೆ ಚಳುವಳಿ ಆರಂಭಿಸಿದರು. ಆಗ ಪೋಲಿಸರು ರೈತರ ಮೇಲೆ ಲಾಠಿಪ್ರಹಾರ ಮಾಡಿದರು. ''ಬಾಗೂರಿನ ಸುತ್ತಮುತ್ತಲಿನ ಗ್ರಾಮದ ಮಹಿಳೆಯರೆಲ್ಲರೂ ನ್ಯಾಯಕ್ಕಾಗಿ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದ್ದರಿಂದ ಪೋಲಿಸರು ಬಾಗೂರನ್ನು ನುಗ್ಗಿ ಜನರ ಮೇಲೆ ಲಾಠಿಚಾರ್ಜ ಮಾಡಿದರು. ಕೆಲವರನ್ನು ಜೈಲಿಗೆ ಹಾಕಿದರು. ಇನ್ನುಳಿದ ಜನರನ್ನು ಪೋಲಿಸರು ಎರಡನೆ ಬಾರಿ ಸೆರೆ ಹಿಡಿಯಲು ಬಂದಾಗ ಪುರುಷರೆಲ್ಲರೂ ತಲೆ ಮರೆಸಿಕೊಂಡಿದ್ದರಿಂದ ಸಿಕ್ಕಿದ್ದ ೪೦೦ ಮಹಿಳೆಯರನ್ನು ಥಳಿಸಿದರು. ಯುವತಿಯರ ಜಡೆಗಳನ್ನು ಹಿಡಿದೆಳೆದು ಹೊರಗಡೆ ತಂದರು. ಮುಟ್ಟಾದ ಮಹಿಳೆಯರ ಸೀರೆಗಳನ್ನು ಲಾಠಿಯಿಂದ ಕಳಚಿ ಬೆತ್ತಲೆಯನ್ನಾಗಿ ಮಾಡಿ ಕುಣಿದು ಕೇಕೆ ಹಾಕಿದರು. ಇಬ್ಬರು ತುಂಬು ಬಸುರಿಯರನ್ನು ಬೆತ್ತಲೆಯನ್ನಾಗಿ ಮಾಡಿ ಇವರಿಗೆ ಹೆರಿಗೆ ಮಾಡಿ ಎಂದು ಕಿರುಚಾಡಿದ್ದಾರೆ. ಇನ್ನು ಕೆಲವು ಮಹಿಳೆಯರ ತಾಳಿ ಮತ್ತು ಚಿನ್ನದ ಸರಗಳನ್ನು ಕಿತ್ತು ಹಾಕಿದ್ದಾರೆ.'' (ವೆಂಕೋಬರಾವ್ ಡಿ., ೨೦೦೦, ಪು ೧೪೧)

ಬಾಗೂರು-ನವಿಲೆ ರೈತ ಮಹಿಳೆಯರು ಉಪವಾಸ ಸತ್ಯಾಗ್ರಹ ಆರಂಭಿಸಿದುದರಿಂದ ಪೋಲಿಸರು ಅವರ ಮೇಲೆ ದಾಳಿ ಮಾಡಿ ಹಿಂಸಿಸಿದರು. ಇಂತಹ ಅಹಿತಕರ ಘಟನೆಗಳ ವಿರುದ್ಧ ಮೊಕದ್ದಮೆ ಹೂಡಿ ನ್ಯಾಯ ದೊರಕಿಸಿಕೊಳ್ಳಲು ಸಾರ್ವಜನಿಕರು, ಮಹಿಳಾ ಮಂಡಳಿಗಳಿಗೆ ಕರೆ ನೀಡಿದ್ದ ಕಾರಣ ಇದಕ್ಕೆ ಬೆಂಬಲ ನೀಡಿದವರು ''ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಶಾಂತಿ ಮತ್ತು ಸೌಹಾರ್ದತಾ ಸಂಘಟನೆ, ಮಾನಸ ಬಳಗ, ಜನವಾದಿ ಮಹಿಳಾ ಸಂಘಟನೆ, ಸಮುದಾಯ ಸಮಕಾಲೀನ ಅಧ್ಯಯನ ವೇದಿಕೆ, ಹಾಸನ ಜಿಲ್ಲಾ ಪತ್ರಕರ್ತರ ಸಂಘ, ಭಾರತ ಜನ ಕಲಾ ಸಮಿತಿ (ಐ.ಪಿ.ಟಿ.ಎ), ಅಖಿಲ ಭಾರತ ಯುವ ಜನ ಫೆಡರೇಷನ್ (ಎ.ಐ.ವೈ.ಎಫ್), ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್, ರಾಜ್ಯ ಸಮಿತಿ ಬೆಂಗಳೂರು, ಪತ್ರಿಕಾ ಸಂಪಾದಕರು.'' (ವೆಂಕೋಬರಾವ್ ಡಿ., ೨೦೦೦, ಪು ೧೪೨) ಹೀಗೆ ಇನ್ನು ಅನೇಕ ಸಾರ್ವಜನಿಕರು ನ್ಯಾಯಕ್ಕಾಗಿ ಹೋರಾಟದಲ್ಲಿ ಭಾಗವಹಿಸಿದರು. ಈ ಘಟನೆಯನ್ನು ರಾಷ್ಟ್ರ ಮಟ್ಟದ ವಿಚಾರವನ್ನಾಗಿ ಮಾಡಿ ಚರ್ಚಿಸಲು ವಿಫಲವಾಗಿದೆ. ಬಾಗೂರು - ನವಿಲೆಯ ಸಮಸ್ಯೆ, ಸಮಸ್ಯೆಯಾಗಿಯೇ ಉಳಿಯಿತು.

ಈ ಚಳುವಳಿಯಲ್ಲಿ ಪುರುಷರು ಮತ್ತು ಮಹಿಳೆಯರು ಭಾಗವಹಿಸಿದ್ದರೂ ಪೋಲೀಸರ ಹಿಂಸೆಗೆ ಒಳಗಾದವರು ಇಲ್ಲಿ ಅಧಿಕವಾಗಿ ಮಹಿಳೆಯರೆ. ಪೋಲಿಸರು ಊರುಗಳಿಗೆ ನುಗ್ಗುವರು ಎಂಬ ವಿಷಯವನ್ನು ತಿಳಿದ ಕೂಡಲೇ ಅಲ್ಲಿಯ ರೈತರು ಬೇರೆ ಊರುಗಳಿಗೆ ತಲೆಮರೆಸಿಕೊಂಡು ಹೋದರು. ಆದರೆ ಮಹಿಳೆಯರಿಗೆ ಮನೆ, ಮಕ್ಕಳು,

ವೃದ್ಧರನ್ನು ಬಿಟ್ಟು ಹೋಗಲು ಸಾಧ್ಯವಾಗದ ಕಾರಣ ಅವರು ಅತಿಯಾಗಿ ಹಿಂಸೆಗೆ ಒಳಗಾಗಬೇಕಾಯಿತು. ಅವರು ಅನುಭವಿಸಿದ ಹಿಂಸೆಗೆ ನ್ಯಾಯ ದೊರೆಯಬೇಕೆಂದು ಅನೇಕ ಸಂಘ ಸಂಸ್ಥೆಗಳು ನೆರವಾದರೂ ನ್ಯಾಯ ದೊರೆಯುವಲ್ಲಿ ವಿಫಲವಾಯಿತು.

ದಲಿತ ಸಂಘರ್ಷ ಸಮಿತಿಯ ಭೂ ಹೋರಾಟವೆ ಆಗಲಿ, ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿ ಕಾರ್ಮಿಕ ಸಂಘದ ಭೂ ಹೋರಾಟವೇ ಆಗಲಿ ಮತ್ತು ಕರ್ನಾಟಕ ಪ್ರಾಂತ ರೈತ ಸಂಘದ ಭೂ ಹೋರಾಟವೇ ಆಗಲಿ ಈ ಎಲ್ಲ ಸಂಘಗಳು ದಲಿತರಿಗೆ ಭೂಮಿಯನ್ನು ಒದಗಿಸಿಕೊಡುವಲ್ಲಿ ಹೋರಾಡಿವೆ. ಈ ಎಲ್ಲಾ ಹೋರಾಟಗಳಲ್ಲಿ ಮಹಿಳೆಯರು ಭಾಗವಹಿಸಿದ್ದರೂ ಅವರು ಪ್ರಧಾನವಾಗಿ ಕಾಣದೆ ಹೋಗಿರುವರು. ಹೋರಾಟದಿಂದ ಪಡೆದ ಭೂಮಿಯನ್ನು ಹಂಚಿಕೊಳ್ಳುವಾಗಲೂ ಪುರುಷ - ಪುರುಷರಲ್ಲಿಯೆ ಭೂಮಿಯನ್ನು ಹಂಚಿಕೊಂಡಿರುವರೇ ಹೊರತಾಗಿ ಮಹಿಳೆಗೆ ಇಲ್ಲಿ ಒಡೆತನದ ಹಕ್ಕು ದೊರೆತಿಲ್ಲ. ಇಲ್ಲಿ ಕಂಡು ಬರುವುದೇನೆಂದರೆ ಯಾವುದೇ ರೈತ ಸಂಘದವರಾಗಲಿ ಮಹಿಳೆಯರನ್ನು ಪರಿಗಣಿಸದೆ ಇರುವುದು. ಯಾವುದೇ ಸಂಘವು ಹೋರಾಡಿರುವುದು ಪುರುಷರಿಗೆ ಭೂಮಿ ದೊರೆಯಲೆಂದೆ ಅಂದರೆ ಭೂಮಿಯ ಅಧಿಕಾರವಿರುವುದು ಪುರುಷರಿಗೆ ಮಾತ್ರ ಎನ್ನುವುದು ಸ್ಪಷ್ಟವಾಗುತ್ತದೆ. ದಲಿತರಲ್ಲಿಯೇ ದಲಿತ ಮಹಿಳೆಯರು ಅಧಿಕವಾಗಿ ಕೃಷಿಯನ್ನು ಅವಲಂಬಿಸಿರುವುದರಿಂದ ಅವರಿಗೆ ಭೂಮಿಯಲ್ಲಿ ಹಕ್ಕು ದೊರೆಯದೆ ಪುರುಷರು ಮಾತ್ರ ಭೂಮಿಯ ಹಕ್ಕುದಾರರಾಗಿರುವರು.

ಭೂ ಮಾಲೀಕರ ದಬ್ಬಾಳಿಕೆಗೆ ಅತೀ ಹೆಚ್ಚು ಒಳಗಾದವರು ಮಹಿಳೆಯರು. ನಮ್ಮ ಪಿತೃ ಪ್ರಧಾನ ಸಮಾಜದಲ್ಲಿ ಮಹಿಳೆಯರನ್ನು ಪುರುಷರ ಉಪಭೋಗದ ವಸ್ತುವಾಗಿ ಪರಿಭಾವಿಸುವುದರಿಂದ ಭೂ ಮಾಲೀಕರು ತಮ್ಮ ಕೂಲಿಕಾರ ಹೆಣ್ಣು ಮಕ್ಕಳನ್ನು ಲೈಂಗಿಕ ದೌರ್ಜನ್ಯಕ್ಕೆ ಒಳಪಡಿಸುತ್ತಿದ್ದರು. ಕೃಷಿ ಕ್ಷೇತ್ರದಲ್ಲಿ ಉಂಟಾದ ಸಂಕಷ್ಟಗಳಿಂದ ಈ ದೌರ್ಜನ್ಯಗಳು ಮತ್ತಷ್ಟು ಹೆಚ್ಚಿದವು. ಇದರಿಂದ ಕೂಲಿಕಾರ ಹೆಣ್ಣು ಮಕ್ಕಳೆಲ್ಲ ಭೂ ಮಾಲೀಕರ ಸ್ವತ್ತಾಗತೊಡಗಿದರು. ಭೂ ಮಾಲೀಕರ ದಬ್ಬಾಳಿಕೆಯನ್ನು ಕೂಲಿಕಾರ ಪುರುಷ ಸಮುದಾಯವು ಅಸಹಾಯಕವಾಗಿ ಎದುರಿಸಬೇಕಾಯಿತು. ಭೂ ಮಾಲೀಕರ ಹಿಂಸೆಯನ್ನು ತಾಳಲಾರದೆ ಕೆಲವು ಕೂಲಿಕಾರರು ನಗರ ಪ್ರದೇಶಗಳಿಗೆ ವಲಸೆ ಹೋದರು. ವಲಸೆ ಹೋಗುವುದು ಮಹಿಳೆಗೆ ಸಾಧ್ಯವಾಗಲಿಲ್ಲ. ಕಾರಣ ಕುಟುಂಬದ ಜವಾಬ್ದಾರಿ, ಮಕ್ಕಳನ್ನು ಮತ್ತು ಕುಟುಂಬದ ಹಿರಿಯ ಸದಸ್ಯರನ್ನು ನೋಡಿಕೊಳ್ಳುವ ಜವಾಬ್ದಾರಿ ಮಹಿಳೆಯರ ಮೇಲಿರುವುದರಿಂದ ವಲಸೆ ಹೋಗದೆ ಅಲ್ಲಿಯೇ ಉಳಿಯಬೇಕಾಯಿತು. ಅಲ್ಲದೆ ಸಾಂಪ್ರದಾಯಿಕ ಸಮಾಜದಲ್ಲಿ ಮಹಿಳೆಯ ಚಲನೆಯನ್ನು ನಿಯಂತ್ರಿಸುವ ಸಾಂಸ್ಕೃತಿಕ ಮೌಲ್ಯ ಹಾಗೂ ಆ ಕುರಿತು ಇರುವ ಪುರುಷ ಸಮಾಜದ ಧೋರಣೆಗಳು ಅವರ ವಲಸೆಯ ಸಾಧ್ಯತೆಗಳನ್ನು ನಿರಾಕರಿಸಿದವು. ಪುರುಷರ ವಲಸೆಯಿಂದ ಅವಳು ಸಮುದಾಯದ ಒಳಗೂ ಹಾಗೂ ಹೊರಗೂ ಸಮಸ್ಯೆಗಳನ್ನು ಎದುರಿಸಬೇಕಾಯಿತು.

ಭೂ ಹೋರಾಟವು ರಾಷ್ಟ್ರೀಯ ಹೋರಾಟದ ಜೊತೆಯಲ್ಲಿಯೇ ನಡೆಯಿತು. ಯಾವುದೇ ಭೂ ಹೋರಾಟಗಳಾಗಲಿ ಮತ್ತು ರಾಷ್ಟ್ರೀಯ ಹೋರಾಟಗಳಾಗಲಿ ಮಹಿಳಾ ಕೇಂದ್ರಿತ ಹೋರಾಟಗಳಾಗಿರದೆ ಪುರುಷ ಕೇಂದ್ರಿತ ಹೋರಾಟಗಳಾಗಿದ್ದವು. ಮಹಿಳೆಯರು ಪುರುಷರಿಗೆ ಸರಿಸಮಾನವಾಗಿ ಹೋರಾಟದಲ್ಲಿ ಭಾಗವಹಿಸಿದ್ದರೂ ಕೂಡ ಅವಳು ಸಮಾಜದಲ್ಲಿ ಎರಡನೆಯ ದರ್ಜೆಯ ಪ್ರಜೆಯಾಗಿರುವುದರಿಂದ ರಾಷ್ಟ್ರೀಯ ಚಳುವಳಿಯಲ್ಲಾಗಲಿ, ಭೂ ಹೋರಾಟದ ಚಳುವಳಿಯಲ್ಲಾಗಲಿ ಹೋರಾಟದ ಕೇಂದ್ರ ಸ್ಥಾನವನ್ನು ಪಡೆಯದೆ ಹೋದಳು. ರಾಷ್ಟ್ರೀಯ ಹೋರಾಟದ ನಾಯಕರು ಮತ್ತು ಭೂ ಹೋರಾಟದ ನಾಯಕರು ಪುರುಷರೆ ಆಗಿದ್ದರು. ಕೆಲವೊಂದು ಕಡೆ ಮಹಿಳೆಯರು

ಹೋರಾಟದ ನಾಯಕಿಯರಾಗಿದ್ದರೂ ಅವರು ಪುರುಷರ ಧೋರಣೆಯಲ್ಲಿಯೇ ನಡೆಯಬೇಕಾಗಿತ್ತು. ಅಂದರೆ ಹೆಸರಿಗೆ ಮಾತ್ರ ನಾಯಕಿಯರಾಗಿದ್ದು ಅಲ್ಲಿಯ ಕಾರ್ಯ ಚಟುವಟಿಕೆಗಳೆಲ್ಲವೂ ಪುರುಷರ ನಾಯಕತ್ವದಲ್ಲಿಯೇ ನಡೆಯುತ್ತಿದ್ದವು. ರೈತ ಚಳುವಳಿಯಲ್ಲಾಗಲಿ, ರಾಷ್ಟ್ರೀಯ ಚಳುವಳಿಯಲ್ಲಾಗಲಿ ಮಹಿಳೆಯರು ಅಸಂಘಟಿತರಾಗಿರುವುದರಿಂದ ಪುರುಷರ ಜೊತೆಯಲ್ಲಿಯೇ ಭಾಗವಹಿಸಿದರು. ನಾಯಕರ ಪ್ರಭಾವಕ್ಕೆ ಒಳಗಾಗಿ ಮಹಿಳೆಯರು ಭಾಗವಹಿಸಿದರೆ ಇನ್ನು ಕೆಲವು ಮಹಿಳೆಯರು ತಮ್ಮ ಜನಾಂಗದ ಪುರುಷನ ಬಿಡುಗಡೆಯಲ್ಲಿ ತನ್ನ ಹಿಂಸೆಯು ಕಡಿಮೆಯಾಗುವುದು ಎಂದು ಮತ್ತು ನಮ್ಮ ಧರ್ಮದಲ್ಲಿ ಪತಿ ತುಳಿದ ಹಾದಿಯನ್ನೇ ಪತ್ನಿಯು ತುಳಿಯಬೇಕೆಂದಿರುವುದರಿಂದ ಪತಿಯ ಜೊತೆಯಲ್ಲಿ ಮಹಿಳೆಯು ಭಾಗವಹಿಸಿರುವಳು.

ಸ್ವಾತಂತ್ರ್ಯದ ನಂತರವೂ ಅನೇಕ ಹೋರಾಟಗಳು ನಡೆದರೂ ಮಹಿಳೆಯು ಭೂ ಒಡೆತನದಿಂದ ವಂಚಿತಳಾಗುತ್ತಲೇ ಬಂದಿದ್ದಾಳೆ. ಸ್ವಾತಂತ್ರ್ಯದ ನಂತರ ಭೂ ಸುಧಾರಣೆಯ ಮೂಲಕ ಸರ್ಕಾರವು ಅನೇಕ ಕ್ರಮಗಳನ್ನು ಕೈಗೊಂಡು ಪರಿಣಾಮಕಾರಿಯಾಗಿ ಜಾರಿಗೊಳಿಸಿದರೂ ಅಲ್ಪ ಪ್ರಮಾಣದಲ್ಲಿ ರೈತರು ಒಡೆಯರಾದರು. ಆದರೆ ಮಹಿಳೆಯು ಭೂ ಸುಧಾರಣೆ ಕಾಯ್ದೆಯ ಮೂಲಕವು ಒಡೆತನವನ್ನು ಪಡೆಯುವಲ್ಲಿ ವಂಚಿತಳಾಗಿರುವಳು. ಯಾವುದೇ ರೈತ ಚಳುವಳಿಗಳು ಮಹಿಳೆಯರನ್ನು ಚಳುವಳಿಯ ಒಂದು ಭಾಗವೆಂದು ಪರಿಗಣಿಸದೆ ಇರುವುದು ದುರದೃಷ್ಟಕರ ಸಂಗತಿಯಾಗಿದೆ. ಯಾವುದೇ ಚಳುವಳಿಯಲ್ಲಿ ಭಾಗವಹಿಸಿದರೂ ಅವಳಿಗೆ ನ್ಯಾಯ ದೊರೆಯದೆ ಮೊದಲಿನ ಹಾಗೇ ಅಧೀನ ಸ್ಥಿತಿಯಲ್ಲಿಯೇ ಬದುಕುತ್ತಿರುವುದನ್ನು ಕಾಣಬಹುದಾಗಿದೆ. ಈ ಎಲ್ಲ ರೈತ ಚಳುವಳಿಗಳು ನಡೆದರು ಅದರ ಲಾಭ ಮಾತ್ರ ಪುರುಷರಿಗೆ ಆಗಿದೆ ಎಂದು ಹೇಳಬಹುದು. ಆರ್ಥಿಕವಾಗಿ, ಸಾಮಾಜಿಕವಾಗಿ ಮಹಿಳೆಯರಲ್ಲಿ ಯಾವುದೇ ರೀತಿಯ ಗುರುತರವಾದ ಬದಲಾವಣೆಗಳು ಆಗಿಲ್ಲ. ಕುಟುಂಬದ ಸದಸ್ಯಳಾಗಿ ಮಹಿಳೆ ಕೆಲವೊಂದು ಸಣ್ಣ ಪುಟ್ಟ ಅನುಕೂಲಗಳನ್ನು ಚಳುವಳಿ ಹೋರಾಟದ ಮೂಲಕ ಪಡೆದಿರುವುದನ್ನು ಅಲ್ಲಗಳೆಯಲಾಗದು. ಆದರೆ ಭೂಮಿಯ ಹಕ್ಕು, ಆರ್ಥಿಕ ಸ್ವಾತಂತ್ರ್ಯ ಸಮಾನತೆಯಂತಹ ಬದಲಾವಣೆಯನ್ನು ಕಾಣಲು ಸಾಧ್ಯವಾಗಿಲ್ಲ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

## ಉಲ್ಲೇಖಗಳು


೧. ಗಾಯತ್ರಿ ಎನ್, **ಮಹಿಳಾ ಚಳುವಳಿಯ ಮಜಲುಗಳು**, ೧೯೯೮, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೨. ಅಶೋಕ್ ಕುಮಾರ್ ಯು.ಬಿ., **ಕೃಷಿ ಕೂಲಿಕಾರರ ಬದುಕು: ಬವಣೆ,** ೨೦೦೧, ಚೇತನ ಬುಕ್ ಹೌಸ್, ಮೈಸೂರು.

೩. ನಾಗೇಶ್ ಎಚ್.ವಿ., **ಸಾಮಾಜಿಕ ಚಳುವಳಿಗಳು**, ೧೯೯೯, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಶಂಕರನಾರಾಯಣರಾವ್ ಎನ್.ಪಿ., **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, ೧೯೯೧, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫. ತಂಬಂಡ ವಿಜಯ್ ಪೂಣಚ್ಚ, **ರೈತ ಚಳುವಳಿಗಳು**, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಗೋದಾವರಿ ಪರುಳೇಕರ್, **ಮಾನವ ಎಚ್ಚೆತ್ತಾಗ**, ಸರಸ್ವತಿ ರಿಸಬೂಡ್ (ಅನು), ೨೦೦೦, ಅಧ್ಯಯನ ಪ್ರಕಾಶನ, ಸಿರಸಿ, ಉತ್ತರ ಕನ್ನಡ.

೭. ಪ್ರೀತಿ ಶುಭಚಂದ್ರ, **ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು**, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ನಾಗೇಶ ಎಚ್.ವಿ., **ಭಾರತದಲ್ಲಿ ರೈತ ಹೋರಾಟಗಳು**, ೧೯೮೪, ಚಂದ್ರನಾಥ ಪ್ರಕಾಶನ, ಧಾರವಾಡ.

೯. ಜೆರಾಲ್ಡಿನ್ ಫೋರ್ಬ್ಸ್, **ಆಧುನಿಕ ಭಾರತದಲ್ಲಿ ಮಹಿಳೆ**, ಶ್ರೀಮತಿ ಎಚ್.ಎಸ್. (ಅನು), ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಸುಜ್ಞಾನ ಮೂರ್ತಿ (ಲೇ), ತೆಲಂಗಾಣ ಹೋರಾಟದಲ್ಲಿ ಮಹಿಳೆಯರ ಪಾತ್ರ, **ಮಹಿಳಾ ಅಧ್ಯಯನ**, ಸಂಪುಟ - ೮, ಸಂಚಿಕೆ - ೨, ಶೈಲಜ ಹಿರೇಮಠ (ಸಂ), ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಚೆನ್ನಣ್ಣ ವಾಲೀಕಾರ, **ಹೈದ್ರಾಬಾದ - ಕರ್ನಾಟಕದ ಗ್ರಾಮದೇವತೆಗಳ ಜಾನಪದಿಯ ಅಧ್ಯಯನ**, ೧೯೯೮, ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ.

೧೨. ಸತೀಶ್ ಪಾಟೀಲ, **ಹೆಬ್ಬಳ್ಳಿ ಭೂ ಹೋರಾಟ**, ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಮುಝಾಫರ್ ಅಸ್ಸಾದಿ (ಲೇ), ರೈತ ಚಳುವಳಿ - ೧, **ಚರಿತ್ರೆ ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ - ೪**, ತಂಬಂಡ ವಿಜಯ್ ಪೂಣಚ್ಚ (ಸಂ), ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಗಣಪತಿಯಪ್ಪ ಎಚ್. (ಲೇ), ಕಾಗೋಡು ಸತ್ಯಾಗ್ರಹದಲ್ಲಿ ದೀವರ ಪಾತ್ರ, **ಕಾಗೋಡು ಚಳುವಳಿ**, ಬೋರಲಿಂಗಯ್ಯ ಹಿ.ಚಿ. ಮತ್ತು ಹುಚ್ಚಪ್ಪ ಮಾಸ್ತರ ಎನ್. (ಪ್ರ.ಸಂ), ೨೦೦೨, ಮಲೆನಾಡು ಜನಪದ ಲೋಕ, ಶಿವಮೊಗ್ಗ.

೧೫. ದೇವರಾಜ ಜಿ.ಪಿ., **ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತ ಸ್ಥಿತ್ಯಂತರಗಳು ಹಗರಿ ಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ**, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ೨೦೦೬, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ತಂಬಂಡ ವಿಜಯ್ ಪೂಣಚ್ಚ (ಲೇ), ಕರ್ನಾಟಕ ಪ್ರಾಂತ ರೈತ ಸಂಘ ಮತ್ತು ರೈತ ಚಳುವಳಿ, **ಕಾಗೋಡು ಚಳುವಳಿ**, ಬೋರಲಿಂಗಯ್ಯ ಹಿ.ಚಿ. ಮತ್ತು ಹುಚ್ಚಪ್ಪ ಮಾಸ್ತರ ಎನ್. (ಪ್ರ.ಸಂ), ೨೦೦೨, ಮಲೆನಾಡು ಜನಪದ ಲೋಕ, ಶಿವಮೊಗ್ಗ.

೧೭. ವೆಂಕೋಬರಾವ್. ಡಿ., **ನ್ಯಾಯಕ್ಕಾಗಿ ಮಹಿಳೆಯರ ಹೋರಾಟ**, ೨೦೦೦, ದಿವ್ಯ ಚಂದ್ರ ಪ್ರಕಾಶನ, ಬೆಂಗಳೂರು.

* * *

# ಅಧ್ಯಾಯ - ಏಳು

## ಭೂ ಒಡೆತನ ಮತ್ತು ಮಹಿಳೆ

೭.೧. ಗುಲಬರ್ಗಾ ಜಿಲ್ಲೆಯ ಮಹಿಳೆಯರ ಒಟ್ಟು ಭೂ ಒಡೆತನದ ವಿವರ

೭.೨. ಅತಿ ಸಣ್ಣ ಭೂ ಹಿಡುವಳಿಯ (ಭೂ ಒಡೆತನ) ವಿವರ

೭.೩. ಸಣ್ಣ ಭೂ ಹಿಡುವಳಿಯ ವಿವರ

೭.೪. ಅರೆ ಮಧ್ಯಮ ಭೂ ಹಿಡುವಳಿಯ ವಿವರ

೭.೫. ಮಧ್ಯಮ ಭೂ ಹಿಡುವಳಿಯ ವಿವರ

೭.೬. ದೊಡ್ಡ ಭೂ ಹಿಡುವಳಿಯ ವಿವರ

೭.೭. ಪರಿಶಿಷ್ಟ ಜಾತಿಯ ಮಹಿಳೆಯರ ಭೂ ಒಡೆತನದ ವಿವರ

೭.೮. ಪರಿಶಿಷ್ಟ ಪಂಗಡದ ಮಹಿಳೆಯರ ಭೂ ಒಡೆತನದ ವಿವರ

೭.೯. ಇತರ ಮಹಿಳೆಯರ ಭೂ ಒಡೆತನದ ವಿವರ

## ಭೂ ಒಡೆತನ ಮತ್ತು ಮಹಿಳೆ

ಪ್ರಸ್ತುತ ಅಧ್ಯಾಯವು ಕೃಷಿಗಣತಿಯ ಅಂಕಿ-ಅಂಶಗಳ ಆಧಾರಿತ ವಿಶ್ಲೇಷಣೆಯನ್ನೊಳಗೊಂಡಿದೆ. ಹೈದರಾಬಾದ್-ಕರ್ನಾಟಕ ಪ್ರದೇಶದ ಪ್ರಮುಖ ಜಿಲ್ಲೆಯಾದ ಗುಲಬರ್ಗಾವನ್ನು ಅಧ್ಯಯನದ ವ್ಯಾಪ್ತಿಯನ್ನಾಗಿ ಆಯ್ದುಕೊಳ್ಳಲಾಗಿದೆ. ಆದುದರಿಂದ ಜಿಲ್ಲೆಯ ಸ್ಥೂಲ ಪರಿಚಯವನ್ನು ಕೊಡುವ ಮೂಲಕ ಮಹಿಳಾ ಭೂ ಒಡೆತನದ ಸ್ಥಿತಿ-ಗತಿಯನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಜಿಲ್ಲೆಯನ್ನು ಪರಿಚಯಿಸುವಾಗ ಐತಿಹಾಸಿಕ ಹಿನ್ನೆಲೆ ಮತ್ತು ಭೌಗೋಳಿಕ ಲಕ್ಷಣಗಳ ಸೂಕ್ಷ್ಮ ಚಿತ್ರಣವನ್ನು ನೀಡುವುದರೊಂದಿಗೆ ೨೦೦೦-೨೦೦೧ರ ಕೃಷಿ ಗಣತಿಯ ಅಂಕಿ-ಅಂಶಗಳ ಮೂಲಕ ಐದು ತರಹದ ಹಿಡುವಳಿಗಳಲ್ಲಿ ಲಿಂಗವಾರು ಮತ್ತು ಜಾತಿವಾರು ಭೂ ಒಡೆತನದ ಸ್ಥಿತಿ-ಗತಿಯನ್ನು ಗುರುತಿಸಲಾಗಿದೆ. ಲಿಂಗ ಸಂಬಂಧಿ ಅಧ್ಯಯನ ಸಂದರ್ಭದಲ್ಲಿ ಈ ಬಗೆಯ ಅವಲೋಕನ ಅಗತ್ಯವಾದುದು. ಈ ಅಧ್ಯಾಯದಲ್ಲಿ ಸೂಕ್ಷ್ಮವಾಗಿ ಗಮನಿಸಿದ ಅಂಕಿ-ಅಂಶಗಳ ಹೆಚ್ಚಿನ ವಿವರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

### ಐತಿಹಾಸಿಕ ಹಿನ್ನೆಲೆ

ಗುಲಬರ್ಗಾ ಜಿಲ್ಲೆಯು ಸುದೀರ್ಘವಾದ ಐತಿಹಾಸಿಕ ಹಿನ್ನೆಲೆಯನ್ನು ಹಾಗೂ ಪರಂಪರೆಯನ್ನು ಹೊಂದಿದೆ. ಈ ಜಿಲ್ಲೆಯಲ್ಲಿ ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರ್ಯರು, ಬಹುಮನಿಶಾಹಿಗಳು ಹಾಗೂ ಬಿಜಾಪುರದ ಆದಿಲಶಾಹಿಗಳು ಸತತವಾಗಿ ಆಳ್ವಿಕೆ ಮಾಡಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ರಾಜರುಗಳ ಆಳ್ವಿಕೆಯ ಸಂದರ್ಭದಲ್ಲಿ ಬಹುತೇಕವಾಗಿ ಜಮೀನ್ದಾರಿ ಪದ್ಧತಿ, ರೈತವಾರಿ ಪದ್ಧತಿಗಳಿದ್ದು, ಭೂ ಒಡೆತನದ ನಿರ್ವಹಣೆ, ನಿಯಂತ್ರಣಗಳೆಲ್ಲಾ ಪುರುಷರ ಕೈಯಲ್ಲೆ ಇತ್ತು ಹೊರತಾಗಿ ಮಹಿಳೆಯರ ಕೈಯಲ್ಲಿರಲಿಲ್ಲ. ಸ್ತ್ರೀಯರಿಗೆ ಗೌರವದ ಸ್ಥಾನಮಾನಗಳಿದ್ದರೂ ಅವರು ಅಲ್ಪ ಸ್ವಲ್ಪ ಶಿಕ್ಷಣವನ್ನು ಪಡೆದಿದ್ದು ಬಿಟ್ಟರೆ ಇತರೆ ಯಾವುದೇ ವ್ಯವಹಾರಗಳಲ್ಲಿ ಮಹಿಳೆಯರಿಗೆ ಸ್ವಾತಂತ್ರ್ಯವಿರಲಿಲ್ಲ ಎಂಬುದನ್ನು ಇತಿಹಾಸ ತಿಳಿಸುತ್ತದೆ.

### ಭೌಗೋಳಿಕ ಹಿನ್ನೆಲೆ

ಹೈದ್ರಾಬಾದ್-ಕರ್ನಾಟಕದ ಐದು ಜಿಲ್ಲೆಗಳಲ್ಲಿ ಒಂದಾದ ಗುಲಬರ್ಗಾವು ಹೈದ್ರಾಬಾದ್-ಕರ್ನಾಟಕ ಪ್ರದೇಶದ ಮುಖ್ಯ ಆಡಳಿತ ಕೇಂದ್ರವಾಗಿ ಗುರುತಿಸಿಕೊಂಡಿದೆ. ಜಿಲ್ಲೆಯು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದ್ದು, ವಿಶಾಲವಾದ ಸಮತಟ್ಟಾದ ಪ್ರದೇಶವನ್ನು ಹೊಂದಿದೆ. $76^0$, 04' ಮತ್ತು $77^0$, 42' ಪೂರ್ವ ರೇಖಾಂಶ ಹಾಗೂ

$16^0$, 12' ಮತ್ತು $17^0$, 46' ಉತ್ತರ ಅಕ್ಷಾಂಶಗಳ ನಡುವೆ ಈ ಜಿಲ್ಲೆಯು ಹರಡಿಕೊಂಡಿದೆ. ಜಿಲ್ಲೆಯ ವಾಯುವ್ಯ ಭಾಗದಲ್ಲಿ ಮಹಾರಾಷ್ಟ್ರದ ಸೊಲ್ಲಾಪುರ ಮತ್ತು ಉಸ್ಮಾನಾಬಾದ್ ಜಿಲ್ಲೆಗಳ ಎಲ್ಲೆಯನ್ನು ಮತ್ತು ಪೂರ್ವಭಾಗದಲ್ಲಿ ಆಂಧ್ರ ಪ್ರದೇಶದ ಮೇಡಕ್ ಮತ್ತು ಮೆಹಬೂಬ್ ನಗರ, ದಕ್ಷಿಣದಲ್ಲಿ ರಾಯಚೂರು ಹಾಗೂ ಪಶ್ಚಿಮದಲ್ಲಿ ವಿಜಾಪುರ ಮತ್ತು ಉತ್ತರಕ್ಕೆ ಬೀದರ ಜಿಲ್ಲೆಯಿಂದ ಸುತ್ತುವರೆದಿದೆ. ಹಾಗೆಯೇ ಈ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಕೃಷ್ಣಾನದಿಯು ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳ ಎಲ್ಲೆಯಾಗಿ ಹರಿಯುತ್ತಿದ್ದರೆ, ಪಶ್ಚಿಮಕ್ಕೆ ಭೀಮಾ ನದಿಯು ಜಿಲ್ಲೆಯ ನೈಸರ್ಗಿಕ ಎಲ್ಲೆಯಾಗಿ ಹರಿಯುತ್ತಿದೆ. ಈ ನದಿಗಳಲ್ಲದೆ ಜಿಲ್ಲೆಯಲ್ಲಿ ಕಾಗಿಣಾ, ಬೋರಿ, ಅಮರ್ಜಾ ಹಾಗೂ ಮುಲ್ಲಾಮಾರಿ ನದಿಗಳು ಹರಿಯುತ್ತಿವೆ.

ಗುಲಬರ್ಗಾ ಜಿಲ್ಲೆಯು ಅಫಜಲಪೂರ, ಆಳಂದ, ಚಿಂಚೋಳಿ, ಚಿತ್ತಾಪೂರ, ಗುಲಬರ್ಗಾ, ಜೇವರ್ಗಿ, ಸೇಡಂ, ಶಹಾಪುರ, ಸುರಪುರ ಮತ್ತು ಯಾದಗಿರಿ ಎಂಬ ಹತ್ತು ತಾಲೂಕುಗಳನ್ನು ಒಳಗೊಂಡಿದೆ. ರಾಜ್ಯದಲ್ಲಿಯೇ ಎರಡನೆ ದೊಡ್ಡ ಜಿಲ್ಲೆ ಎಂದೆನಿಸಿದ ಈ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ೧೬,೨೨೪ ಚ.ಕಿ.ಮೀ. ಇದ್ದು, ರಾಜ್ಯದ ಶೇ. ೮.೫ರಷ್ಟು ಪ್ರದೇಶವನ್ನೊಳಗೊಂಡಿದೆ. ಜೇವರ್ಗಿ ತಾಲೂಕು ಶೇ. ೧೧.೨೩ರಷ್ಟು ವಿಸ್ತೀರ್ಣವನ್ನು ಹೊಂದಿದ್ದು ಇದು ಜಿಲ್ಲೆಯಲ್ಲಿಯೇ ಅಧಿಕ ವಿಸ್ತೀರ್ಣ ಹೊಂದಿರುವ ತಾಲೂಕಾಗಿದೆ. ಜಿಲ್ಲೆಯಲ್ಲಿಯೇ ಅತಿ ಕಡಿಮೆ ವಿಸ್ತೀರ್ಣವುಳ್ಳ ತಾಲೂಕು ಸೇಡಂ, ಇದು ಜಿಲ್ಲೆಯ ವಿಸ್ತೀರ್ಣದ ಶೇ. ೬.೩೯ ರಷ್ಟಿದೆ. ಈ ಜಿಲ್ಲೆಯು ಒಟ್ಟು ೧೪೩೭ ಹಳ್ಳಿಗಳಿಂದ ಕೂಡಿದೆ. ಇದರಲ್ಲಿ ೧೩೬೦ ಹಳ್ಳಿಗಳು ಜನವಸತಿಯಿಂದ ಕೂಡಿದ್ದರೇ ೭೭ ಹಳ್ಳಿಗಳು ಜನವಸತಿ ರಹಿತ ಹಳ್ಳಿಗಳಾಗಿವೆ.

೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯು ಒಟ್ಟು ೩೧.೩೦ ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೧೫.೯೨ ಲಕ್ಷ ಪುರುಷರು ಮತ್ತು ೧೫.೩೮ ಲಕ್ಷ ಹೆಂಗಸರು ಇದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ೨೨.೭೮ ಲಕ್ಷ, ಜನರು ಗ್ರಾಮವಾಸಿಗಳಾಗಿದ್ದು, ಉಳಿದ ೮.೫೨ ಲಕ್ಷ ಜನರು ನಗರವಾಸಿಗರಾಗಿದ್ದಾರೆ. ಗುಲಬರ್ಗಾ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೭.೧೭ ಲಕ್ಷ ಜನರು ಪರಿಶಿಷ್ಟ ಜಾತಿಯವರು, ಮತ್ತು ೧.೫೪ ಲಕ್ಷ ಜನರು ಪರಿಶಿಷ್ಟ ಪಂಗಡದವರು ಇರುವರು. ಒಟ್ಟು ಜನಸಂಖ್ಯೆಯ ಶೇ. ೨೨.೯೧ ರಷ್ಟು ಪರಿಶಿಷ್ಟ ಜಾತಿಯವರು ಹಾಗೂ ಶೇ. ೪.೯೨ರಷ್ಟು ಪರಿಶಿಷ್ಟ ಪಂಗಡದವರು ಇರುವರು. ಜಿಲ್ಲೆಯಲ್ಲಿ ಒಟ್ಟು ಸಾಕ್ಷರತೆಯ ಪ್ರಮಾಣವು ಶೇ. ೫೦.೦ ಇದ್ದು, ಪುರುಷ ಸಾಕ್ಷರತರು ಶೇ. ೬೧.೮ ರಷ್ಟಿದ್ದರೆ, ಮಹಿಳೆಯರು ಕೇವಲ ೩೭.೯ ಪ್ರತಿಶತದಷ್ಟು ಸಾಕ್ಷರರಿರುವರು. ಜಿಲ್ಲೆಯಲ್ಲಿ ಅತಿ ಕಡಿಮೆ ಸಾಕ್ಷರರಿರುವ ತಾಲೂಕು ಯಾದಗಿರಿ, ಇಲ್ಲಿ ಸಾಕ್ಷರತೆಯ ಪ್ರಮಾಣ ಶೇ. ೩೭.೨ರಷ್ಟು ಇದೆ. ಶೇ. ೬೬.೫ರಷ್ಟು ಸಾಕ್ಷರತೆಯ ಪ್ರಮಾಣವನ್ನು ಅಂದರೆ ಜಿಲ್ಲೆಯಲ್ಲಿಯೇ ಅಧಿಕವಾಗಿ ಸಾಕ್ಷರತೆಯನ್ನು ಹೊಂದಿರುವ ತಾಲೂಕು ಗುಲಬರ್ಗಾ ಆಗಿದೆ.

ಜಿಲ್ಲೆಯಲ್ಲಿ ಒಟ್ಟು ಸಾಗುವಳಿದಾರರು ಶೇ. ೧೧.೬೬ ಇದ್ದು ಈ ಸಾಗುವಳಿದಾರರಲ್ಲಿ ಪುರುಷರು ೧೭.೫೦ ಪ್ರತಿಶತ ಇದ್ದಾರೆ, ಮಹಿಳಾ ಸಾಗುವಳಿದಾರರು ೫.೬೧ ಪ್ರತಿಶತ ಮಾತ್ರ ಇರುವರು. ಜಿಲ್ಲೆಯಲ್ಲಿ ಒಟ್ಟು ಕೃಷಿ ಕಾರ್ಮಿಕರು ೧೭.೨೩ ಪ್ರತಿಶತದಷ್ಟಿದ್ದು ಅವರಲ್ಲಿ ಪುರುಷ ಕಾರ್ಮಿಕರು ೧೨.೦೭ ಪ್ರತಿಶತ ಇದ್ದರೆ, ಮಹಿಳೆಯರು

ಶೇ. ೨೨.೫೭ರಷ್ಟು ಅಧಿಕವಾಗಿ ಕೃಷಿಕಾರ್ಮಿಕರಿದ್ದಾರೆ. ಜಿಲ್ಲೆಯಲ್ಲಿ ಅಧಿಕವಾಗಿ ಕೃಷಿಕಾರ್ಮಿಕರು ಹೊಂದಿರುವ ತಾಲೂಕು ಆಳಂದ ಇಲ್ಲಿ ಶೇ. ೧೪.೨೫ ರಷ್ಟು ಕೃಷಿಕಾರ್ಮಿಕರಿದ್ದರೆ ಜಿಲ್ಲೆಯಲ್ಲಿಯೇ ಅತಿ ಕಡಿಮೆ ಕೃಷಿಕಾರ್ಮಿಕರು ಹೊಂದಿರುವ ತಾಲೂಕು ಸೇಡಂ ಇಲ್ಲಿ ಶೇ. ೬.೮೪ ರಷ್ಟು ಕೃಷಿಕಾರ್ಮಿಕರಿರುವರು. ಜಿಲ್ಲೆಯಲ್ಲಿ 'ಭೂ ಹಿಡುವಳಿ''ಯಲ್ಲಿ ಅತಿಸಣ್ಣ ಹಿಡುವಳಿದಾರರು, ಸಣ್ಣ ಹಿಡುವಳಿದಾರರು, ಅರೆ ಮಧ್ಯಮ ಹಿಡುವಳಿದಾರರು, ಮಧ್ಯಮ ಹಿಡುವಳಿದಾರರು ಮತ್ತು ದೊಡ್ಡಹಿಡುವಳಿದಾರರು ಎಂದು ವಿಂಗಡಿಸಲಾಗಿದೆ. ಜಿಲ್ಲೆಯಲ್ಲಿ ಒಟ್ಟು ೫೪೮೯೧೧ ಜನ ಭೂ ಒಡೆತನ ಹೊಂದಿದವರಾಗಿದ್ದು ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ೧೩೯೬೦೫೧ ಹೆಕ್ಟೆರ್‌ನಷ್ಟು. ಒಟ್ಟು ಭೂ ಒಡೆತನ ಹೊಂದಿದವರಲ್ಲಿ ಮಹಿಳೆಯರು ಶೇ. ೧೩.೫೨ರಷ್ಟಿದ್ದು ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಶೇ. ೧೧.೯೪ರಷ್ಟು. ಜಿಲ್ಲೆಯಲ್ಲಿ ಮಹಿಳೆಯರು ಅತಿಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರು ೨೧.೨೯ ಪ್ರತಿಶತದಷ್ಟಿದ್ದರೆ, ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೫.೯೬ ಹೆಕ್ಟೆರ್‌ನಷ್ಟು ಮಾತ್ರ ಇದೆ. ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರಲ್ಲಿ ಶೇ. ೩೫.೬೬ರಷ್ಟಿರುವರು, ಇವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣ ಶೇ. ೨೩.೧೫ ಹೆಕ್ಟೇರುಗಳಷ್ಟು ಮಾತ್ರ. ಅರೆ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೨೯.೫೪ರಷ್ಟಿದ್ದರೆ, ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಶೇ. ೩೫.೧೧ ಹೆಕ್ಟೇರುಗಳಷ್ಟು. ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೧೩.೭೩ರಷ್ಟು, ಶೇ. ೩೩.೧೮ರಷ್ಟು ಹೆಕ್ಟೇರು ಭೂಮಿಯ ಒಡೆತನ ಹೊಂದಿರುವರು. ಜಿಲ್ಲೆಯಲ್ಲಿ ಶೇ. ೨.೩೯ರಷ್ಟು ಮಹಿಳೆಯರು ದೊಡ್ಡ ಭೂ ಹಿಡುವಳಿಯ ಒಡೆತನ ಹೊಂದಿದ್ದರೆ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೧೩.೧೩ ಹೆಕ್ಟೇರುಗಳಷ್ಟು ಹೊಂದಿರುವರು.

ಜಿಲ್ಲೆಯಲ್ಲಿಯೇ ಐದು ತರಹದ ಹಿಡುವಳಿಯಲ್ಲಿ ಮಹಿಳೆ ಮತ್ತು ಪುರುಷರನ್ನೊಳಗೊಂಡಂತೆ ಅತಿ ಕಡಿಮೆ ಭೂ ಒಡೆತನ ಹೊಂದಿದವರು ದೊಡ್ಡ ಭೂ ಹಿಡುವಳಿದಾರರು. ಹಾಗೆಯೇ ಜಿಲ್ಲೆಯಲ್ಲಿ ಅತಿ ಹೆಚ್ಚು ಭೂ ಒಡೆತನ ಹೊಂದಿದವರು ಸಣ್ಣ ಭೂ ಹಿಡುವಳಿದಾರರು. ಜಿಲ್ಲೆಯಲ್ಲಿಯೇ ಅಧಿಕ ಭೂಮಿಯ ವಿಸ್ತೀರ್ಣದ ಒಡೆತನ ಹೊಂದಿದವರು ಅರೆಮಧ್ಯಮ ಭೂ ಹಿಡುವಳಿದಾರರು. ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿದವರು ಅತಿ ಸಣ್ಣ ಹಿಡುವಳಿದಾರರು. ಜಾತಿವಾರು ಮಹಿಳಾ ಭೂ ಒಡೆತನವನ್ನು ಗಮನಿಸಿದಾಗ ಪರಿಶಿಷ್ಟ ಪಂಗಡದವರು ಅತಿ ಕಡಿಮೆಯಿದ್ದು ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಕಡಿಮೆಯಿದೆ. ಇತರರಲ್ಲಿ ಮಹಿಳೆಯರು ಅಧಿಕವಾಗಿ ಭೂ ಒಡತಿಯರಾಗಿರುವುದಲ್ಲದೆ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಅಧಿಕವಾಗಿದೆ.

ಜಿಲ್ಲೆಯು ಭಾರತದ ದಕ್ಷಿಣ ಪ್ರಸ್ಥಭೂಮಿಯ ಭಾಗವಾಗಿದ್ದು ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ. ಗುಲಬರ್ಗಾ ಜಿಲ್ಲೆಯ ವಾಯುಗುಣವು ಶುಷ್ಕ ಮತ್ತು ಆರೋಗ್ಯಕರವಾಗಿದೆ. ಇಲ್ಲಿಯ ಹವಾಗುಣ ಸ್ಥೂಲವಾಗಿ ದಕ್ಷಿಣ ಪ್ರಸ್ಥಭೂಮಿಯ ಮಾದರಿಯಲ್ಲೇ ಇದೆ. ಫೆಬ್ರುವರಿಯಿಂದ ಜೂನ್ ಆರಂಭದವರೆಗೆ ಬೇಸಿಗೆ ಕಾಲ, ಅಲ್ಲಿಂದ ಮುಂದೆ ಸೆಪ್ಟೆಂಬರ್‌ವರೆಗೂ ಮಳೆಗಾಲ, ಅಕ್ಟೋಬರ್‌ನಿಂದ ಫೆಬ್ರುವರಿವರೆಗೂ ಚಳಿಗಾಲವಿರುತ್ತದೆ. ಈ ಜಿಲ್ಲೆಯು ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಎಲ್ಲೆಗಳಿಂದ ಸುತ್ತುವರೆದಿರುವುದರಿಂದ ಅಲ್ಲಿಯ ವಾತಾವರಣ

ಜನರ ಜೀವನದ ಮೇಲೆ ಪ್ರಭಾವ ಬೀರಿದೆ. ಒಂದು ಪ್ರದೇಶದ ಅಧ್ಯಯನಕ್ಕೆ ಅಲ್ಲಿಯ ಜನಸಂಖ್ಯೆ ಬೆಳವಣಿಗೆ ಹಾಗೂ ಸಾಮಾಜಿಕ ಲಕ್ಷಣಗಳು ಅವಶ್ಯಕ. ಈ ಜಿಲ್ಲೆಯು ವಿವಿಧ ಜಾತಿ, ಮತ, ಧರ್ಮ, ಭಾಷೆ, ಆಚಾರ, ವಿಚಾರ, ನಂಬಿಕೆಗಳಿಂದ ಕೂಡಿದೆ. ಅಭಾವ ಪರಿಸ್ಥಿತಿಯಲ್ಲಿ ಇಂದಿಗೂ ಕೂಡ ಜಿಲ್ಲೆಯಿಂದ ಅತಿಸಣ್ಣ ಹಿಡುವಳಿದಾರರು, ಒಣಬೇಸಾಯಗಾರರು, ಕೃಷಿ ಕಾರ್ಮಿಕರು ವಲಸೆ ಹೋಗುವರು. ಈ ಜಿಲ್ಲೆಯು ಕಪ್ಪು, ಕೆಂಪು ಮರಳು ಮಿಶ್ರಿತ ಜೇಡಿ ಹಾಗೂ ಬಕ್ಕಲು ಮಣ್ಣಿನಿಂದ ಕೂಡಿದೆ. ಜಿಲ್ಲೆಯಲ್ಲಿ ವಾಡಿಕೆ ಮಳೆ ೭೭೮ ಮಿ.ಮೀ. ಬೀಳುವುದು. ಜಿಲ್ಲೆಯಲ್ಲಿ ಜೋಳ, ಸಜ್ಜೆ, ತೊಗರೆ, ಕಡಲೆಕಾಯಿ (ಶೇಂಗಾ), ಸೂರ್ಯಕಾಂತಿ ಮುಖ್ಯ ಬೆಳೆಗಳಾಗಿವೆ. ಜಿಲ್ಲೆಯಲ್ಲಿ ಕೇವಲ ೧.೯೪ಲಕ್ಷ ಹೆಕ್ಟೇರುಗಳಷ್ಟು ಪ್ರದೇಶ ಮಾತ್ರ ನೀರಾವರಿಗೊಳಪಟ್ಟರೆ, ಉಳಿದ ಪ್ರದೇಶವೆಲ್ಲ ಮಳೆಯಾಶ್ರಿತ ಪ್ರದೇಶವಾಗಿದೆ.

ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ನಿರ್ವಹಿಸುವಲ್ಲಿ ಕೃಷಿಯು ಪ್ರಮುಖ ಪಾತ್ರವಹಿಸುತ್ತದೆ. ೧೯೪೮ರ ಹೈದ್ರಾಬಾದ್ ಸರ್ಕಾರದ ಪ್ರಕಟಣೆಯಲ್ಲಿ ಹೈದ್ರಾಬಾದಿನ ಆರ್ಥಿಕ ಪರಿಸ್ಥಿತಿ ಗುಲಬರ್ಗಾವನ್ನೊಳಗೊಂಡಂತೆ ಊಳಿಗಮಾನ್ಯ ಪದ್ಧತಿಯಾಗಿತ್ತು. ಇಲ್ಲಿಯ ಜನಸಂಖ್ಯೆಯು ಬಡತನದಿಂದ ಕೂಡಿತ್ತು. ಹೀಗಾಗಿ ಇಲ್ಲಿ ಅನಕ್ಷರತೆ ಮತ್ತು ಮೂಢತೆ ಅಧಿಕವಾಗಿತ್ತು. ಬೆಳವಣಿಗೆ ಮತ್ತು ಅಭ್ಯುದಯಗಳು ಸ್ವರ್ಗದಿಂದ ಬರಬೇಕಾದ ಕೊಡುಗೆಯೆಂದೂ, ಮಾನವನ ಪ್ರಯತ್ನವಲ್ಲವೆಂದು ಜನ ನಂಬಿದ್ದರು. ಸ್ವಾತಂತ್ರ್ಯದ ನಂತರ ೧೯೫೨ರಲ್ಲಿ ಜಹಗೀರುಗಳ ರದ್ದತಿಯಿಂದ ಮತ್ತು ಕೃಷಿಕ್ಷೇತ್ರದಲ್ಲಿ ಮಾಡಿದ ಸುಧಾರಣೆಗಳಿಂದ ಜಿಲ್ಲೆಯ ಗ್ರಾಮೀಣ ಜನತೆಯ ಜೀವನ ಮಟ್ಟವು ಸ್ವಲ್ಪ ಸುಧಾರಿಸಲ್ಪಟ್ಟಿತು. ಭೂ ಸುಧಾರಣೆ ಕಾಯ್ದೆಯನ್ನು ಜಾರಿಗೆ ತರುವ ಮೂಲಕ ಅನೇಕ ಕೃಷಿಕರಿಗೆ ಭೂಮಿ ದೊರೆಯುವಂತಾಯಿತು. ಒಂದು ಪ್ರದೇಶದಲ್ಲಿ ಭೂ ಹಿಡುವಳಿಯು ಸಮಾನ ರೀತಿಯಲ್ಲಿ ಹಂಚಿಕೆಯಾಗಿದ್ದರೆ, ಆ ಪ್ರದೇಶದಲ್ಲಿ ಆರ್ಥಿಕ - ಸಾಮಾಜಿಕ ಅಸಮಾನತೆ ಪ್ರಮಾಣ ಕಡಿಮೆ ಇರುತ್ತದೆ. ಆದರೆ ಈ ಭಾಗದಲ್ಲಿ ಭೂ ಹಂಚಿಕೆಯು ವ್ಯವಸ್ಥಿತವಾಗಿ ಆಗದೆ ೧೦೦ರಿಂದ ೫೦೦ ಎಕರೆ ಭೂಮಿ ಇರುವವರೇ ಈ ಪ್ರಾಂತದಲ್ಲಿ ಅಧಿಕವಾಗಿದ್ದಾರೆ. ಹೀಗಾಗಿ ಭೂಮಿ ಕೆಲವರ ಸೊತ್ತಾಗಿ ಉಳಿದಿದೆ. ಕರ್ನಾಟಕ ರಾಜ್ಯದಲ್ಲೆ ಗುಲಬರ್ಗಾ ಜಿಲ್ಲೆಯು ಕೃಷಿ ಕಾರ್ಮಿಕರನ್ನು ಅಧಿಕವಾಗಿ ಹೊಂದಿರುವುದರಿಂದ ಜಿಲ್ಲೆಯು ರಾಜ್ಯದಲ್ಲಿ ಮೊದಲನೆಯ ಸ್ಥಾನ ಪಡೆದಿದೆ. ಪ್ರಸ್ತುತ ಗುಲಬರ್ಗಾ ಜಿಲ್ಲಾ ಶಾಸಕರು ೧೩ ಜನ. ಅವರಲ್ಲಿ ೬ ಜನ ಶಾಸಕರು ಮಂತ್ರಿಗಳಾಗಿದ್ದರೂ ಈ ಪ್ರಾಂತ ಹಿಂದುಳಿದಿದೆ. ಅದರಲ್ಲೂ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಈ ಪ್ರಾಂತವು ತುಂಬಾ ಹಿಂದುಳಿದಿದೆ.

ಜಿಲ್ಲೆಯಲ್ಲಿ ಆಡಳಿತದ ದೃಷ್ಟಿಯಿಂದ ಗುಲಬರ್ಗಾ, ಸೇಡಂ ಮತ್ತು ಯಾದಗಿರಿಯೆಂದು ಮೂರು ಕಂದಾಯ ಉಪ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಜಿಲ್ಲೆಯು ವೈವಿಧ್ಯಮಯ ಖನಿಜ ನಿಕ್ಷೇಪಗಳನ್ನು ಹೊಂದಿದೆ. ಇಲ್ಲಿ ಸುಣ್ಣದ ಕಲ್ಲು, ಎರಕದ (ಮೌಲ್ಡಿಂಗ್), ಮರಳು, ಚಿನ್ನ, ಕೆಂಪು ಕಾವಿ ಮಣ್ಣು, ಬಿಳುಚು ಜೇಡಿ ಹಾಗೂ ಬೆಣಚುಕಲ್ಲು, ಶಹಾಬಾದ ಕಲ್ಲು, ಚೌಳು ಮಣ್ಣು ದೊರೆಯುತ್ತವೆ. ಈ ರೀತಿ ಜಿಲ್ಲೆಯು ಅಪಾರ ನೈಸರ್ಗಿಕ ಸಂಪತ್ತನ್ನು ಹೊಂದಿದೆ. ಸುಣ್ಣದ ಕಲ್ಲಿನಂತಹ ಸಿಮೆಂಟಿಗೆ ಬೇಕಾಗುವ ಮೂಲ ಕಚ್ಚಾವಸ್ತುಗಳು ಶಹಾಬಾದಿನಲ್ಲಿ ಸಿಗುವುದರಿಂದ ೧೯೨೪ರಲ್ಲಿಯೇ ಎಸಿಸಿ ಸಿಮೆಂಟ್ ಕಾರ್ಖಾನೆಯು ಆರಂಭವಾಗಿದೆ. ದಕ್ಷಿಣ ಭಾರತದಲ್ಲೆ ಮೊದಲು ಸಿಮೆಂಟ್ ಕಂಪನಿ ಸ್ಥಾಪಿಸಿದ್ದು ಎಸಿಸಿ. ಆದರೆ ಈಗ ಈ ಕಾರ್ಖಾನೆ ಮುಚ್ಚಲಾಗಿದೆ. ಕಲ್ಲು ಪಾಲಿಶ್ ಮಾಡುವ

ನೂರಾರು ಘಟಕಗಳು ಈ ಜಿಲ್ಲೆಯಲ್ಲಿವೆ. ಶಹಾಬಾದು ಹೊಳಪುಕಲ್ಲು ಎಂದೇ ಪ್ರಸಿದ್ಧಿ ಪಡೆದಿರುವ ಈ ಕಲ್ಲುಗಳು ಚಿಂಚೋಳಿ, ಸೇಡಂ, ಚಿತ್ತಾಪೂರ ತಾಲೂಕುಗಳಲ್ಲಿ ಸಿಗುತ್ತವೆ. ಈ ಜಿಲ್ಲೆಯಲ್ಲಿ ಸುಮಾರು ೨,೫೦೦ ಕಲ್ಲಿನ ಗಣಿಗಳಿವೆ. ಈ ಜಿಲ್ಲೆಯು ರಾಜ್ಯದ ತೊಗರಿ ಕಣಜ, ಸಿಮೆಂಟಿನ ಅಕ್ಷಯ ಪಾತ್ರೆಯಾಗಿದೆ. ಈ ರೀತಿ ಜಿಲ್ಲೆಯು ವೈವಿದ್ಯಮಯ ಸಂಪತ್ತುಗಳಿಂದ ಕೂಡಿದೆ. ಆದರೆ ಮೂಲ ಸೌಲಭ್ಯಗಳ ಕೊರತೆ, ಶಿಕ್ಷಣದ ಕೊರತೆ, ಮೂಢನಂಬಿಕೆಗಳು, ಅನಾವೃಷ್ಟಿ, ರಾಜಕೀಯವಾಗಿ ದೂರದೃಷ್ಟಿ ಇಲ್ಲದಿರುವ ಕಾರಣಗಳಿಂದ ಇಂದಿಗೂ ಸಹ ಹಿಂದುಳಿದ ಪ್ರದೇಶವೆಂದೇ ಹಣೆಪಟ್ಟಿಯನ್ನು ಕಟ್ಟಿಕೊಂಡಿದೆ.

ಒಟ್ಟಾರೆ ಅಭಿವೃದ್ಧಿ ದೃಷ್ಟಿಯಲ್ಲಿ ರಾಜ್ಯದ ಇತರ ಜಿಲ್ಲೆಗಳಿಗೆ ಹೋಲಿಸಿದರೆ ಹೈದ್ರಾಬಾದ್-ಕರ್ನಾಟಕದ ೫ ಜಿಲ್ಲೆಗಳು ಅತಿ ಹಿಂದುಳಿದಿವೆ. ಜೇವರ್ಗಿ ತಾಲೂಕಿಗೆ ರಾಜ್ಯದಲ್ಲಿಯೇ ೧೭೫ನೇ ಸ್ಥಾನವಿದೆ. ತಲಾ ಆದಾಯದಲ್ಲಿ ಸೇಡಂ ತಾಲೂಕು ರಾಜ್ಯದಲ್ಲಿಯೇ ೩೩ನೇ ಸ್ಥಾನದಲ್ಲಿದೆ. ಚಿತ್ತಾಪೂರ ತಾಲೂಕು ೫೬ನೇ ಸ್ಥಾನದಲ್ಲಿದೆ. ಕಾರಣ ಇವೆರಡು ತಾಲೂಕುಗಳಲ್ಲಿ ಸಿಮೆಂಟ್ ಮತ್ತಿತರ ಕೈಗಾರಿಕೆಗಳು ಇರುವುದು. ಸಾಕ್ಷರತೆಯ ಪ್ರಮಾಣದಲ್ಲಿ ಗುಲಬರ್ಗಾ ತಾಲೂಕು ಬಿಟ್ಟರೆ ಉಳಿದ ೯ ತಾಲೂಕುಗಳು ಹಿಂದುಳಿದಿವೆ. ಇಡೀ ಕರ್ನಾಟಕವನ್ನು ಅಭಿವೃದ್ಧಿ ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಅಭಿವೃದ್ಧಿಯಲ್ಲಿ ಅಸಮತೋಲನವಿರುವುದು ಕಂಡುಬರುತ್ತದೆ. ಉತ್ತರ ಕರ್ನಾಟಕದಲ್ಲಿಯೇ ಹೈದ್ರಾಬಾದ್ - ಕರ್ನಾಟಕದಲ್ಲಿ ತೀರ ಅಸಮತೊಲನ ಎದ್ದು ಕಾಣುತ್ತದೆ. ಈ ಅಸಮತೋಲನದ ನಿವಾರಣೆಗೆ ಸರ್ಕಾರವು ಹೈದ್ರಾಬಾದ್ - ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯನ್ನು ಗುಲಬರ್ಗಾ ಜಿಲ್ಲೆಯಲ್ಲಿ ಸ್ಥಾಪಿಸಿದ್ದರೂ ಏನು ಪ್ರಯೋಜನವಾಗಿಲ್ಲ. ಈ ಅಸಮತೋಲನದ ಮಧ್ಯ ಭೂ ಒಡೆತನ ಸ್ಥಿತಿ-ಗತಿ ಯಾವ ರೀತಿಯಲ್ಲಿದೆ ಎನ್ನುವುದನ್ನು ತಿಳಿಯುವುದು ಅಧ್ಯಯನದ ಉದ್ದೇಶವಾಗಿದೆ. ಕೋಷ್ಟಕಗಳ ಮೂಲಕ ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ಸ್ಥಿತಿ-ಗತಿಯನ್ನು ನೋಡುವ ಪ್ರಯತ್ನ ಇಲ್ಲಿದೆ.

### ೭.೧. ಗುಲಬರ್ಗಾ ಜಿಲ್ಲೆಯ ಮಹಿಳೆಯರ ಒಟ್ಟು ಭೂ ಒಡೆತನದ ವಿವರ

ಒಂದು ದೇಶದ ಭೂ ಹಿಡುವಳಿಯ ಸ್ವರೂಪವು ಆ ದೇಶದ ಕೃಷಿಯ ಸ್ವರೂಪಕ್ಕೆ ಕನ್ನಡಿಯಂತೆ. ಒಂದು ದೇಶದ ಕೃಷಿಯು ಎಷ್ಟರ ಮಟ್ಟಿಗೆ ಅಭಿವೃದ್ಧಿಯುತವಾಗಿದೆಯೆಂಬುದನ್ನು ನಿರ್ಧರಿಸುವಲ್ಲಿ ಭೂ ಹಿಡುವಳಿಯು ಮಹತ್ವಪೂರ್ಣ ಪಾತ್ರ ವಹಿಸುತ್ತದೆ. ಭೂ ಹಿಡುವಳಿ ಉಳ್ಳವರಲ್ಲಿಯೂ ದಟ್ಟದರಿದ್ರರಿಂದ ಹಿಡಿದು ಅತ್ಯಂತ ಶ್ರೀಮಂತರಿರುವುದು ಕಾಣುತ್ತೇವೆ. ಭೂ ಹಿಡುವಳಿಯು ಅತಿಸಣ್ಣ ಹಿಡುವಳಿ, ಸಣ್ಣ ಹಿಡುವಳಿ, ಅರೆ ಮಧ್ಯಮ ಹಿಡುವಳಿ, ಮಧ್ಯಮ ಹಿಡುವಳಿ ಮತ್ತು ದೊಡ್ಡ ಹಿಡುವಳಿಗಳಿಂದ ಕೂಡಿದೆ. ಅತಿಸಣ್ಣ, ಸಣ್ಣ ಮತ್ತು ಅರೆ ಮಧ್ಯಮ ಗಾತ್ರದ ಹಿಡುವಳಿಗಳನ್ನು ರೈತಾಪಿ ಹಿಡುವಳಿಗಳೆಂದು ಮತ್ತು ಮಧ್ಯಮ ಹಾಗೂ ದೊಡ್ಡ ಭೂ ಹಿಡುವಳಿಗಳನ್ನು ಜಮೀನ್ದಾರಿ ಹಿಡುವಳಿಗಳೆಂದು ಕರೆಯಲಾಗಿದೆ. ಗುಲಬರ್ಗಾ ಜಿಲ್ಲೆಯ ಒಟ್ಟು ಭೂ ಒಡೆತನದ ವಿವರಣೆಯನ್ನು ಈ ಕೆಳಗಿನ ಕೋಷ್ಟಕದ ಮೂಲಕ ವಿವರಿಸಲಾಗಿದೆ. ಈ ಕೋಷ್ಟಕದಲ್ಲಿ ಐದು ತರಹದ ಹಿಡುವಳಿದಾರರ ಸಂಖ್ಯೆ ಮತ್ತು ಅವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣವನ್ನು, ಲಿಂಗವಾರು ಮತ್ತು ತಾಲೂಕುವಾರು ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

## ಕೋಷ್ಟಕ–೧

## ಮಹಿಳಾ ಭೂ ಒಡೆತನದ ವಿವರ: ಗುಲಬರ್ಗಾ ಜಿಲ್ಲೆ

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರಸಂ | ತಾಲೂಕುಗಳು | ಒಟ್ಟು ಭೂ ಒಡೆತನ ಹೊಂದಿದವರು | | ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೪೧೮೨೫ | ೧೨೩೮೯೫ | ೬೦೯೬ | ೧೬೬೬೫ |
| | | | | (೧೪.೫೭) | (೧೩.೪೫) |
| ೨ | ಆಳಂದ | ೬೨೧೪೧ | ೧೬೧೩೭೧ | ೭೨೮೦ | ೧೭೮೪೭ |
| | | | | (೧೧.೭೧) | (೧೧.೦೫) |
| ೩ | ಚಿಂಚೋಳಿ | ೪೩೪೩೬ | ೧೧೧೦೬೦ | ೭೨೫೮ | ೧೭೪೮೪ |
| | | | | (೧೬.೭೦) | (೧೫.೭೪) |
| ೪ | ಚಿತ್ತಾಪೂರ | ೫೫೧೮೩ | ೧೫೦೭೭೫ | ೭೯೬೯ | ೨೧೫೪೮ |
| | | | | (೧೪.೪೪) | (೧೪.೨೯) |
| ೫ | ಗುಲಬರ್ಗಾ | ೫೨೦೫೧ | ೧೫೩೪೪೨ | ೭೫೫೫ | ೨೦೬೫೪ |
| | | | | (೧೪.೫೬) | (೧೩.೪೬) |
| ೬ | ಜೇವರ್ಗಿ | ೫೮೧೯೯ | ೧೭೧೪೭೮ | ೭೭೫೬ | ೪೩೭೬ |
| | | | | (೧೩.೩೨) | (೨೫.೪೭) |
| ೭ | ಸೇಡಂ | ೩೭೭೮೭ | ೮೮೭೨೧ | ೫೩೬೪ | ೧೩೦೫೦ |
| | | | | (೧೪.೧೯) | (೧೪.೭೦) |
| ೮ | ಶಹಾಪುರ | ೬೨೦೮೦ | ೧೪೯೦೧೩ | ೮೭೭೯ | ೨೦೬೨೧ |
| | | | | (೧೪.೧೪) | (೧೩.೮೩) |
| ೯ | ಸುರಪುರ | ೬೬೧೪೮ | ೧೫೪೬೪೭ | ೮೬೬೪ | ೧೯೮೮೫ |
| | | | | (೧೩.೦೯) | (೧೨.೮೫) |
| ೧೦ | ಯಾದಗಿರಿ | ೭೦೦೬೧ | ೧೩೧೬೪೯ | ೭೫೦೪ | ೧೪೫೮೬ |
| | | | | (೧೦.೭೧) | (೧೧.೦೭) |
| ಒಟ್ಟು | | ೫೪೮೯೧೧ | ೧೩೯೬೦೫೧ | **೭೪೨೨೫** | **೧೬೬೭೧೬** |
| | | | | (೧೩.೫೨) | (೧೧.೯೪) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

೧೯೯೦ - ೯೧ರ ಕೃಷಿ ಗಣತಿಯ ವರದಿಯಂತೆ ರಾಜ್ಯದಲ್ಲಿ ದಾಖಲಾದ ಒಟ್ಟು ಭೂ ಹಿಡುವಳಿಗಳಲ್ಲಿ ಮೈಸೂರು ಜಿಲ್ಲೆಯ (ರಾಜ್ಯದ ಶೇ.೭.೬ರಷ್ಟು) ನಂತರದ ಸ್ಥಾನ ಗುಲಬರ್ಗಾ ಜಿಲ್ಲೆ (ರಾಜ್ಯದ ಶೇ.೭.೪) ಯದಾಗಿದೆ. ಭೂ ಹಿಡುವಳಿಗಳ ವಿಸ್ತೀರ್ಣದಲ್ಲಿ ಸಹ ವಿಜಾಪುರ ಜಿಲ್ಲೆಯ (ರಾಜ್ಯದ ಶೇ.೧೨.೨ ರಷ್ಟು) ನಂತರದ ಸ್ಥಾನ ಗುಲಬರ್ಗಾ ಜಿಲ್ಲೆಯದಾಗಿದೆ (ರಾಜ್ಯದ ಶೇ.೧೧.೩ರಷ್ಟು) ಗುಲಬರ್ಗಾ ಜಿಲ್ಲೆಯಲ್ಲಿ ಕೃಷಿ ಕಾರ್ಮಿಕರು (ರಾಜ್ಯದ ಶೇ.೯.೨೨ ರಷ್ಟು) ಅಧಿಕವಾಗಿದ್ದಾರೆ. ರಾಜ್ಯದಲ್ಲಿಯೇ ಕೊಡಗು ಜಿಲ್ಲೆಯು ಅತಿ ಕಡಿಮೆ ಕೃಷಿ ಕೂಲಿಕಾರರನ್ನು (ರಾಜ್ಯದ ಶೇ.೦.೬೬) ಹೊಂದಿದೆ.

ರಾಜ್ಯದಲ್ಲಿಯೇ ಹಿಂದುಳಿದ ಐದು ಜಿಲ್ಲೆಗಳಲ್ಲಿ ಗುಲಬರ್ಗಾ ಒಂದಾಗಿದೆ. ಈ ಐದು ಜಿಲ್ಲೆಗಳಲ್ಲಿ ಭೂ ಹಿಡುವಳಿಯ ಸಂಖ್ಯೆ ೧೬.೧೧ ಲಕ್ಷ. ಈ ಹಿಡುವಳಿಗಳ ಭೂಮಿಯ ವಿಸ್ತೀರ್ಣ ೫೧.೩೧ ಲಕ್ಷ ಹೆಕ್ಟೇರುಗಳು. ಒಟ್ಟು ಭೂ ಹಿಡುವಳಿಗಳಲ್ಲಿ ರೈತಾಪಿ ಹಿಡುವಳಿಗಳ ಪ್ರಮಾಣ ಶೇ.೭೬.೩೫ ಆದರೆ, ಜಮೀನ್ದಾರಿ ಹಿಡುವಳಿಗಳ ಪ್ರಮಾಣ ಶೇ.೨೩.೬೫ರಷ್ಟಿದೆ. ಆದರೆ ಈ ಐದು ಜಿಲ್ಲೆಗಳನ್ನು ಬಿಟ್ಟು ಉಳಿದ ೨೨ ಜಿಲ್ಲೆಗಳಿಗೆ ಸಂಬಂಧಿಸಿದಂತೆ ರೈತಾಪಿ ಹಿಡುವಳಿಗಳ ಪ್ರಮಾಣ ಶೇ.೯೦.೭೮ ಮತ್ತು ಜಮೀನ್ದಾರಿ ಹಿಡುವಳಿಗಳ ಪ್ರಮಾಣ ಕೇವಲ ಶೇ. ೯.೨೨ರಷ್ಟು ಅಭಿವೃದ್ಧಿ ದುಸ್ಥಿತಿಯಲ್ಲಿರುವ ಐದು ಜಿಲ್ಲೆಗಳಲ್ಲಿ ಶೇ.೭೬.೩೫ ರಷ್ಟಿರುವ ರೈತಾಪಿ ಜನರು ಸಾಗುವಳಿ ಭೂಮಿಯ ಶೇ.೪೩.೧೦ ರಷ್ಟನ್ನು ಹೊಂದಿದ್ದರೆ, ಶೇ.೨೩.೬೫ ರಷ್ಟಿರುವ ಜಮೀನ್ದಾರರು ಶೇ.೫೦.೯೦ರಷ್ಟು ಸಾಗುವಳಿ ಭೂಮಿಯ ಮೇಲೆ ಮಾಲೀಕತ್ವ ಹೊಂದಿದ್ದಾರೆ. ಈ ೫ ಜಿಲ್ಲೆಗಳನ್ನು ಬಿಟ್ಟು ಉಳಿದ ೨೨ ಜಿಲ್ಲೆಗಳಲ್ಲಿ ಶೇ.೯೦.೭೮ರಷ್ಟಿರುವ ರೈತಾಪಿ ಜನರು ಶೇ.೬೦.೭೭ರಷ್ಟು ಸಾಗುವಳಿ ಭೂಮಿ ಪಡೆದಿದ್ದರೆ ಶೇ.೯.೨೨ ರಷ್ಟಿರುವ ಜಮೀನ್ದಾರರು ಶೇ.೩೯.೨೩ರಷ್ಟು ಸಾಗುವಳಿ ಭೂಮಿಯ ಮೇಲೆ ಮಾಲೀಕತ್ವ ಸಾಧಿಸಿದ್ದಾರೆ.

೨೦೦೦-೨೦೦೧ರ ಕೃಷಿ ಗಣತಿಯ ಪ್ರಕಾರ ರಾಜ್ಯದಲ್ಲಿ ಗುಲಬರ್ಗಾ ಜಿಲ್ಲೆಯ ಒಟ್ಟು ಭೂ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆ ಶೇ.೮.೬೧ರಷ್ಟಿದ್ದರೆ, ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಶೇ.೧೧.೫೫ ಹೆಕ್ಟೇರುಗಳಷ್ಟು. ಐದು ತರಹದ ಹಿಡುವಳಿಯನ್ನೊಳಗೊಂಡಂತೆ ಮತ್ತು ಜಾತಿವಾರುಗಳನ್ನೊಳಗೊಂಡಂತೆ ಜಿಲ್ಲೆಯಲ್ಲಿ ಒಟ್ಟು ಮಹಿಳೆಯರು ಒಡೆತನ ಹೊಂದಿದವರು ಶೇ.೧೩.೫೨ರಷ್ಟಿದ್ದರೆ, ಪುರುಷರು ಶೇ.೮೬.೪೮ರಷ್ಟಿರುವರು. ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ.೧೧.೯೪ ಹೆಕ್ಟೇರುಗಳಷ್ಟು ಭೂಮಿಯ ಒಡೆತನವನ್ನು ಹೊಂದಿದ್ದರೆ, ಪುರುಷರು ಶೇ.೮೮.೦೬ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿರುವರು. ಇಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಯರ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಎರಡು ಕಡಿಮೆಯಿದೆ. ಅಧಿಕವಾದ ಒಡೆತನದ ಸಂಖ್ಯೆಯ ಜೊತೆಗೆ ಪುರುಷರು ಅಧಿಕ ಭೂಮಿಯ ವಿಸ್ತೀರ್ಣವನ್ನು ಪಡೆದಿರುವರು. ಆದರೆ ರಾಜ್ಯಕ್ಕೆ ಹೋಲಿಸಿದರೆ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ.

ತಾಲೂಕುವಾರು ಭೂ ಒಡೆತನ ಹೊಂದಿದವರ ಸಂಖ್ಯೆಯನ್ನು ಗಮನಿಸಿದರೆ ಯಾದಗಿರಿ ತಾಲೂಕು ಅಧಿಕ ಭೂ ಒಡೆತನ ಹೊಂದಿರುವ ಸಂಖ್ಯೆಯನ್ನೊಳಗೊಂಡರೆ, ಜಿಲ್ಲೆಯಲ್ಲಿ ಸೇಡಂ ತಾಲೂಕು ಅತಿ ಕಡಿಮೆ ಭೂಮಿಯ ಒಡೆತನದ ಸಂಖ್ಯೆಯನ್ನು ಹೊಂದಿರುವ ತಾಲೂಕಾಗಿದೆ. ಜಿಲ್ಲೆಯಲ್ಲಿಯೇ ಭೂ ಒಡೆತನದ ಸಂಖ್ಯೆಯಂತೆ ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಜಿಲ್ಲೆಯಲ್ಲಿ ಜೇವರ್ಗಿ ತಾಲೂಕು ಅಧಿಕ ಪ್ರಮಾಣದ ಭೂ ವಿಸ್ತೀಣವನ್ನು ಒಳಗೊಂಡರೆ ಸೇಡಂ ತಾಲೂಕು ಕಡಿಮೆ ಪ್ರಮಾಣದ ಭೂ ವಿಸ್ತೀರ್ಣವನ್ನು ಒಳಗೊಂಡಿದೆ.

ಜಿಲ್ಲೆಯಲ್ಲಿ ಒಟ್ಟು ಭೂ ಹಿಡುವಳಿಗಳಲ್ಲಿ ಮಹಿಳೆಯರು ಒಡೆತನ ಹೊಂದಿರುವ ಅಂಕಿ-ಅಂಶಗಳ ಪ್ರಮಾಣವನ್ನು ತಾಲೂಕುವಾರು ಗಮನಿಸಿದರೆ ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಒಳಗೊಂಡಿದ್ದಾರೆ. ಯಾದಗಿರಿ ತಾಲೂಕಿನಲ್ಲಿ ಮಹಿಳೆಯರು ಅತಿ ಕಡಿಮೆ ಭೂ ಒಡೆತನದ ಸಂಖ್ಯೆಯನ್ನೊಳಗೊಂಡಿದ್ದಾರೆ, ಜೇವರ್ಗಿ ತಾಲೂಕಿನಲ್ಲಿ ಮಹಿಳೆಯರು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು. ಯಾದಗಿರಿ ತಾಲೂಕಿನಲ್ಲಿ ಪುರುಷರು ಅಧಿಕವಾಗಿ ಅಂದರೆ ಶೇ. ೮೯.೨೯ರಷ್ಟು ಒಡೆತನದ ಸಂಖ್ಯೆಯನ್ನು ಹೊಂದುವುದರ ಜೊತೆಗೆ ಭೂಮಿಯ ವಿಸ್ತೀರ್ಣದಲ್ಲಿಯೂ ಕೂಡ ಅಧಿಕವಾಗಿ ಹೊಂದಿರುವರು ಶೇ. ೮೮.೯೩ ಹೆಕ್ಟೇರುಳಷ್ಟು ಹಾಗೆಯೇ ಚಿಂಚೋಳಿ ತಾಲೂಕಿನಲ್ಲಿ ಪುರುಷರು ಅತಿ ಕಡಿಮೆ ಭೂಮಿಯ ಒಡೆತನವನ್ನು ಹೊಂದುವುದರ ಜೊತೆಗೆ ಈ ತಾಲೂಕಿನ ಪುರುಷರು ಅತಿ ಕಡಿಮೆ ಭೂ ಹಿಡುವಳಿಯ ವಿಸ್ತೀರ್ಣವನ್ನು ಹೊಂದಿರುವರು. ಪುರುಷ ಒಡೆತನದ ಸಂಖ್ಯೆಯಲ್ಲಿ ಯಾದಗಿರಿ ತಾಲೂಕಿನಲ್ಲಿ ಅಧಿಕ ಪ್ರಮಾಣದ ಭೂ ಒಡೆತನ ಹೊಂದಿದ್ದರು, ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಹಾಗೆಯೇ ಚಿಂಚೋಳಿ ತಾಲೂಕಿನಲ್ಲಿ ಪುರುಷರ ಒಡೆತನದ ಸಂಖ್ಯೆ ಕಡಿಮೆಯಿದ್ದರೂ ಅವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣ ಅಧಿಕವಿದೆ. ಆದರೆ ಮಹಿಳೆಯರ ಒಡೆತನಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವಾಗಿರುವುದು ಅಧಿಕವಾಗಿ ಕಂಡುಬರುತ್ತದೆ.

ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಕಡಿಮೆ ಭೂಮಿಯ ಒಡೆತನದ ವಿಸ್ತೀರ್ಣವನ್ನು ಹೊಂದಿರುವ ಅಂಕಿ-ಅಂಶಗಳನ್ನು ತಾಲೂಕುವಾರು ನೋಡಿದಾಗ ಅಫಜಲಪೂರ ತಾಲೂಕಿನಲ್ಲಿ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆ ಶೇ. ೧೪.೫೭ ಇದ್ದರೆ, ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಶೇ. ೧೩.೪೫ ಹೆಕ್ಟೇರನಷ್ಟಿದ್ದು ಭೂ ಒಡೆತನದ ಸಂಖ್ಯೆಗಿಂತ ಕಡಿಮೆ ಭೂ ವಿಸ್ತೀರ್ಣ ಹೊಂದಿದ್ದಾರೆ. ಹಾಗೆಯೇ ಆಳಂದ ತಾಲೂಕಿನಲ್ಲಿ ಕೂಡ ಮಹಿಳೆಯರ ಒಡೆತನದ ಸಂಖ್ಯೆಗೆ ಹೋಲಿಸಿದಾಗ ಅವರ ಅಧೀನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಚಿಂಚೋಳಿ ತಾಲೂಕಿನಲ್ಲಿಯೂ ಮಹಿಳೆಯರ ಒಡೆತನದ ಸಂಖ್ಯೆ ಅಧಿಕವಿದ್ದು ಅವರ ಅಧೀನಕ್ಕೆ ಒಳಪಟ್ಟ ಭೂಮಿಯ ಪ್ರಮಾಣ ಕಡಿಮೆ ಇದೆ. ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣ ಜಿಲ್ಲೆಯಲ್ಲಿಯೇ ಅಧಿಕವಿದ್ದರೂ ಕೂಡ ಭೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಹಾಗೆಯೇ ಚಿತ್ತಾಪೂರ ತಾಲೂಕು, ಗುಲಬರ್ಗಾ

ತಾಲೂಕು, ಜೇವರ್ಗಿ ತಾಲೂಕುಗಳಲ್ಲಿಯೂ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದೆ. ಜೇವರ್ಗಿ ತಾಲೂಕು ಅಧಿಕ ಭೂ ಹಿಡುವಳಿಯ ವಿಸ್ತೀರ್ಣವನ್ನು ಹೊಂದಿದ್ದರೂ ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಕಡಿಮೆ ಪ್ರಮಾಣದಲ್ಲಿ ಭೂ ವಿಸ್ತೀರ್ಣವಿರುವುದು ಕಂಡುಬರುತ್ತದೆ. ಶಹಪೂರ, ಸುರಪುರ ಮತ್ತು ಯಾದಗಿರಿ ತಾಲೂಕುಗಳಲ್ಲಿಯೂ ಕೂಡ ಮಹಿಳೆಯರು ಅತಿ ಕಡಿಮೆ ಪ್ರಮಾಣದಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು.

ಗುಲಬರ್ಗಾ ಜಿಲ್ಲೆಯ ಒಟ್ಟು ಭೂ ಹಿಡುವಳಿಯ ಕೋಷ್ಟಕದ ಅಂಕಿ-ಅಂಶಗಳನ್ನು ನೋಡಿದಾಗ ಪ್ರತಿಯೊಂದು ತಾಲೂಕುಗಳಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಯರ ಒಡೆತನದ ಸಂಖ್ಯೆಯು ಕಡಿಮೆ ಇರುವುದರ ಜೊತೆಗೆ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ತುಂಬಾ ಕಡಿಮೆ ಇದೆ. ಹೀಗಾಗಿ ಇಲ್ಲಿ ಮಹಿಳೆಯರು ಆಸ್ತಿಯ ಅಂದರೆ ಭೂಮಿಯ ಒಡೆತನ ಹೊಂದದೆ ಅಧಿಕ ಪ್ರಮಾಣದಲ್ಲಿ ಕೃಷಿ ಕಾರ್ಮಿಕರಾಗಿರುವರು. ಜಿಲ್ಲೆಯಲ್ಲಿಯೇ ಶಿಕ್ಷಣದಲ್ಲಿ ಗುಲಬರ್ಗಾ ತಾಲೂಕು ಒಂದನ್ನು ಬಿಟ್ಟರೆ ಉಳಿದ ಎಲ್ಲಾ ತಾಲೂಕುಗಳಲ್ಲಿ ಶಿಕ್ಷಣದ ಪ್ರಮಾಣ ಕಡಿಮೆಯಿದೆ, ಜೊತೆಗೆ ಶಿಕ್ಷಿತ ಮಹಿಳೆಯರ ಪ್ರಮಾಣವಂತೂ ಇನ್ನೂ ಕಡಿಮೆ ಇದೆ. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯನ್ನು ನಾಲ್ಕು ಗೋಡೆಗಳ ಮಧ್ಯೆ ಬಂದಿತಳನ್ನಾಗಿಸಿದೆ. ತಲೆತಲಾಂತರದಿಂದಲೂ ಪುರುಷರೇ ಭೂ ಮಾಲೀಕರಾಗುತ್ತ ಬಂದಿರುವುದರಿಂದ ಮಹಿಳೆಯರಿಗೆ ಭೂ ಒಡೆತನ ನೀಡಲು ಸಮಾಜ ವ್ಯವಸ್ಥೆಯು ನಿರಾಕರಿಸುತ್ತ ಬಂದಿದೆ. ಮಹಿಳೆಯರಿಗೆ ಒಡೆತನ ನೀಡಿದರೂ ಕೂಡ ಅದು ಜಂಟಿ ಒಡೆತನವನ್ನೇ ಹೊಂದಿದ್ದು ಜೊತೆಗೆ ಹೆಸರಿಗೆ ಮಾತ್ರ ಭೂಮಿ ಇದ್ದು ಅದರ ನಿಯಂತ್ರಣ ಮತ್ತು ನಿರ್ವಹಣೆ ಪುರುಷರೇ ಹೊಂದಿದ್ದಾರೆ. ಭೂ ಒಡೆತನದ ಜೊತೆಗೆ ಅದರ ನಿರ್ವಹಣೆ ಮತ್ತು ನಿಯಂತ್ರಣ ಕೆಲವೇ ಕೆಲವು ಕುಟುಂಬಗಳಲ್ಲಿ ಮಹಿಳೆಯರಿಗೆ ಇದ್ದರೂ ಅದು ಪುರುಷರು ಇರದ ಕುಟುಂಬದಲ್ಲಿ ಮಾತ್ರ. ಮಹಿಳೆಯರಿಗೆ ಭೂ ಒಡೆತನ ನೀಡಲು ಇರುವ ಕಾರಣಗಳು ಅವಳು ಕುಟುಂಬದಲ್ಲಿ ಪುರುಷನಷ್ಟೇ ಸರಿಸಮಾನಳೆನ್ನುವ ಕಾರಣಕ್ಕೆ ಅಲ್ಲ. ಪುರುಷರು ಅಧಿಕ ಪ್ರಮಾಣದಲ್ಲಿ ಭೂ ಒಡೆತನ ಹೊಂದಿದಾಗ, ಪತಿ ಸರ್ಕಾರಿ ನೌಕರನಾಗಿರುವಾಗ, ಮಹಿಳೆ ವಿಧವೆಯಾದ ಪಕ್ಷದಲ್ಲಿ ಮತ್ತು ಸರ್ಕಾರದಿಂದ ಸಾಲ ಸೌಲಭ್ಯ ಪಡೆಯಲು ಮಹಿಳೆಯರ ಹೆಸರಿನಲ್ಲಿ ಭೂಮಿ ಮಾಡಲಾಗಿದೆ. ಅದು ಕೂಡ ಹೆಸರಿಗೆ ಮಾತ್ರ ಒಡೆತನ ಹೊಂದಿರುವರು. ಎಷ್ಟೋ ಕುಟುಂಬಗಳಲ್ಲಿ ಅವರ ಹೆಸರಿನಲ್ಲಿ ಭೂಮಿ ಇದೆ ಎನ್ನುವ ಸಂಗತಿಯು ಮಹಿಳೆಯರಿಗೆ ತಿಳಿದಿರುವುದಿಲ್ಲ.

ಗುಲಬರ್ಗಾ ಜಿಲ್ಲೆಯ ಮುಖ್ಯ ಉದ್ಯೋಗ ಕೃಷಿಯೇ ಆಗಿರುವುದರಿಂದ ಇಲ್ಲಿ ಕೃಷಿ ಅವಲಂಬಿತರು ಅಧಿಕವಾಗಿದ್ದಾರೆ. ಕೃಷಿ ಅವಲಂಬಿತರಲ್ಲಿ ಪುರುಷರನ್ನು ಗಮನಿಸಿದರೆ ಶೇ. ೯೮.೦೧ರಷ್ಟು ಪುರುಷರು ಭೂ ಒಡೆಯರಾಗಿದ್ದು ಕೇವಲ ಶೇ. ೧.೯೯ ಪ್ರತಿಶತದಷ್ಟು ಪುರುಷರು ಕೃಷಿಕಾರ್ಮಿಕರಾಗಿದ್ದಾರೆ. ಆದರೆ ಮಹಿಳಾ ಕೃಷಿ ಅವಲಂಬಿತರನ್ನು ಗಮನಿಸಿದರೆ ಮಹಿಳೆಯರಲ್ಲಿ ಶೇ. ೧೭.೧೧ರಷ್ಟು ಮಾತ್ರ ಭೂ ಒಡತಿಯರಾಗಿದ್ದು ಅವರು ಅಧಿಕ ಪ್ರಮಾಣದಲ್ಲಿ ಅಂದರೆ ಶೇ. ೮೨.೮೯ ರಷ್ಟು ಮಹಿಳೆಯರು ಜಿಲ್ಲೆಯಲ್ಲಿ ಕೃಷಿಕಾರ್ಮಿಕರಾಗಿರುವರು.

ನ್ಯಾಯಶಾಸ್ತ್ರ ಗ್ರಂಥವನ್ನು ಬರೆದ ಮಿತಾಕ್ಷರನು ನೆಲೆಸಿದ ಗುಲಬರ್ಗಾ ಜಿಲ್ಲೆಯಲ್ಲಿಯೇ ಮಹಿಳೆಯರಿಗೆ ಭೂ ಒಡೆತನ ಪಡೆಯುವಲ್ಲಿ ತಾರತಮ್ಯವಾಗಿರುವುದನ್ನು ವಿಪರ್ಯಾಸ. ಅಲ್ಲದೆ ಕೃಷಿ ಕಾರ್ಮಿಕರ ಪ್ರಮಾಣವು ಅಧಿಕವಾಗಿರುವ ಪ್ರದೇಶಗಳಲ್ಲಿ ಜಮೀನ್ದಾರಿ ಮತ್ತು ಪಾಳೆಗಾರಿಕೆಯು ಕ್ರಿಯಾಶೀಲವಾಗಿರುವುದನ್ನು ನೋಡಬಹುದಾಗಿದೆ. ಜಮೀನ್ದಾರಿ ಮತ್ತು ಪಾಳೆಗಾರಿಕೆಯು ಅಸ್ತಿತ್ವದಲ್ಲಿರುವ ಪ್ರದೇಶಗಳಲ್ಲಿ ಮಹಿಳೆಯರ ಬದುಕು ತೀವ್ರತರಹದ ಶೋಷಣೆಗೆ ಒಳಗಾಗಿದೆ. ಪುರುಷರು ಹೊಂದಿರುವ ಭೂ ಒಡೆತನದ ಒಂದು ಭಾಗ ಮಾತ್ರ ಮಹಿಳಾ ಭೂ ಒಡತಿಯರಾಗಿರುವುದು ಅಂಕಿ-ಅಂಶಗಳಿಂದ ತಿಳಿದು ಬರುತ್ತದೆ.

ಗುಲಬರ್ಗಾ ಜಿಲ್ಲೆಯ ಒಟ್ಟು ಭೂ ಹಿಡುವಳಿಯಲ್ಲಿ ಮಹಿಳೆಯರ ಸ್ಥಿತಿಗತಿಯನ್ನು ನೋಡಲಾಗಿದೆ. ಹಾಗೆಯೇ ಐದು ತರಹದ ಹಿಡುವಳಿಗಳಲ್ಲಿ ಮಹಿಳೆಯರ ಭೂ ಒಡೆತನದ ಸ್ಥಿತಿಗತಿ ಮತ್ತು ಜಾತಿವಾರು ಮಹಿಳೆಯರು ಹೊಂದಿರುವ ಭೂ ಒಡೆತನದ ಅಂಕಿ-ಅಂಶಗಳನ್ನು ಗಮನಿಸುವುದು ಅವಶ್ಯಕವಾಗಿದೆ.

**೭.೨. ಅತಿ ಸಣ್ಣ ಭೂ ಹಿಡುವಳಿಯ ವಿವರ**

ಅತಿ ಸಣ್ಣ ಹಿಡುವಳಿದಾರರು ಎಂದರೆ ಒಂದು ಹೆಕ್ಟೇರ್‌ಗಿಂತ ಕಡಿಮೆ ಭೂಮಿ ಉಳ್ಳವರು. ಅತಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರು ತುಂಬಾ ಶೋಚನೀಯ ಸ್ಥಿತಿಯಲ್ಲಿದ್ದಾರೆ ಎಂದು ಹೇಳಬೇಕು. ಅವರ ಜೀವನಮಟ್ಟ ತುಂಬಾ ಕೆಳಮಟ್ಟದಲ್ಲಿದೆ. ಇವರ ಸ್ಥಿತಿ 'ಭೂಮಿ ಇದ್ದು ಇಲ್ಲದವರ ಹಾಗೆ'. ಅತಿಸಣ್ಣ ಮತ್ತು ಸಣ್ಣ ಭೂ ಹಿಡುವಳಿಯ ಮೇಲೆ ಒಡೆತನ ಹೊಂದಿದವರು ಹೆಚ್ಚಾಗಿ ಕೃಷಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ. ಏಕೆಂದರೆ ಭೂಮಿಯು ಅತೀ ಕಡಿಮೆ ಪ್ರಮಾಣದಲ್ಲಿರುತ್ತದೆ ಜೊತೆಗೆ ಆದಾಯವು ಇರದ ಕಾರಣ ಬಡತನ ತಾಂಡವಾಡುತ್ತಿರುತ್ತದೆ. ಕೃಷಿ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಅತಿ ಸಣ್ಣ ರೈತರು ಸಾಮಾನ್ಯವಾಗಿ ಸಂಪೂರ್ಣವಾಗಿ ಭಾಗವಹಿಸಲು ಶಕ್ತರಾಗಿರುವುದಿಲ್ಲ. ಅವರ ಆರ್ಥಿಕ ನ್ಯೂನ್ಯತೆಯಿಂದಾಗಿ ಅವರು ದೇಶದ ಕೃಷಿ ಅಭಿವೃದ್ಧಿಗೆ ಕೃಷಿ ನಿರಂತರತೆಗೆ ಹೆಚ್ಚಿನ ಸೇವೆ ಸಲ್ಲಿಸಲಾರರು. ಅತಿ ಸಣ್ಣ ರೈತರು ಮತ್ತು ಸಣ್ಣ ರೈತರು ಸಾಲದಲ್ಲಿ ಮುಳುಗಿರುವುದು ವಾಸ್ತವ ಸಂಗತಿ. ಅವರು ಕೂಲಿಕೆಲಸಕ್ಕೆ ಹೋಗುತ್ತಿರುವ ತಮ್ಮ ತಮ್ಮ ಭೂ ಮಾಲೀಕರಲ್ಲಿಯೇ ಸಾಲ ಪಡೆಯುತ್ತಾರೆ. ಅಲ್ಲಿ ಅತೀ ಕಡಿಮೆ ಕೂಲಿಗೆ ಹೆಚ್ಚು ಕೆಲಸ ಮಾಡಬೇಕಾಗುತ್ತದೆ. ಗುಲಬರ್ಗಾ ಜಿಲ್ಲೆಯು ಒಣ ಪ್ರದೇಶದಿಂದ ಕೂಡಿರುವುದರಿಂದ ಇಲ್ಲಿ ಭೂಮಿ ಇದ್ದು ಇಲ್ಲದವರ ಸ್ಥಿತಿಯಿರುವುದನ್ನು ಕಾಣಬಹುದು. ಭೂಮಿಯಿದ್ದರೂ ಕೃಷಿ ಕಾರ್ಮಿಕರಾಗಿಯೇ ಕಂಡುಬರುತ್ತಾರೆ. ಜಿಲ್ಲೆಯಲ್ಲಿ ಒಟ್ಟು ಭೂ ಹಿಡುವಳಿಯ ಒಡೆತನ ಹೊಂದಿದವರಲ್ಲಿ ಅತಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರು ೨೧ ಪ್ರತಿಶತದಷ್ಟು, ಇದರಲ್ಲಿ ಮಹಿಳಾ ಭೂ ಒಡೆತನ ಹೊಂದಿದವರು ಕೇವಲ ೨೨ ಪ್ರತಿಶತ ಮಾತ್ರ. ಇನ್ನು ಉಳಿದ ೭೮ ಪ್ರತಿಶತದಷ್ಟು ಪುರುಷರೇ ಒಡೆತನ ಹೊಂದಿದ್ದಾರೆ. ಈ ಕೆಳಗಿನ ಕೋಷ್ಟಕದಲ್ಲಿ ಅತಿ ಸಣ್ಣ ಭೂ ಹಿಡುವಳಿಯ ಒಡೆತನದ ಪ್ರಮಾಣದಲ್ಲಿ ಲಿಂಗವಾರು ಮತ್ತು ತಾಲೂಕುವಾರು ಅಂಕಿ-ಅಂಶಗಳನ್ನು ಗಮನಿಸಲಾಗಿದೆ.

## ಕೋಷ್ಟಕ–೨

### ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ವಿವರ: ಅತಿಸಣ್ಣ ಭೂ ಹಿಡುವಳಿಗಳು

(೧ ಹೆಕ್ಟೇರ್‌ಗಿಂತ ಕಡಿಮೆ)

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರಸಂ | ತಾಲೂಕುಗಳು | ಒಟ್ಟು ಭೂ ಒಡೆತನ ಹೊಂದಿದವರು | | ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೩೬೩೭ | ೨೩೬೭ | ೫೬೦ | ೩೮೬ |
| | | | | (೧೫.೩೯) | (೧೬.೩೪) |
| ೨ | ಆಳಂದ | ೯೪೮೮ | ೬೦೯೮ | ೧೧೭೬ | ೮೧೦ |
| | | | | (೧೨.೩೯) | (೧೩.೨೮) |
| ೩ | ಚಿಂಚೋಳಿ | ೮೮೮೮ | ೫೬೫೬ | ೧೭೧೨ | ೧೧೮೩ |
| | | | | (೧೯.೨೬) | (೨೦.೯೧) |
| ೪ | ಚಿತ್ತಾಪೂರ | ೯೭೦೮ | ೫೭೨೫ | ೧೫೦೦ | ೯೮೬ |
| | | | | (೧೫.೪೫) | (೧೭.೨೨) |
| ೫ | ಗುಲಬರ್ಗಾ | ೮೦೯೯ | ೫೦೯೯ | ೧೨೭೫ | ೮೧೧ |
| | | | | (೧೫.೭೪) | (೧೫.೯೦) |
| ೬ | ಜೇವರ್ಗಿ | ೬೭೦೨ | ೪೩೯೬ | ೯೯೮ | ೭೨೦ |
| | | | | (೧೪.೮೯) | (೧೬.೩೭) |
| ೭ | ಸೇಡಂ | ೧೧೨೯೦ | ೬೧೨೪ | ೧೪೯೬ | ೮೫೪ |
| | | | | (೧೩.೨೫) | (೧೩.೯೪) |
| ೮ | ಶಹಾಪುರ | ೧೪೨೮೧ | ೮೫೫೭ | ೨೩೦೪ | ೧೪೪೯ |
| | | | | (೧೬.೧೩) | (೧೬.೯೩) |
| ೯ | ಸುರಪುರ | ೧೪೪೫೧ | ೯೦೭೦ | ೧೯೩೯ | ೧೨೫೧ |
| | | | | (೧೩.೪೧) | (೧೩.೭೯) |
| ೧೦ | ಯಾದಗಿರಿ | ೨೫೭೨೫ | ೧೩೪೬೩ | ೨೮೪೫ | ೧೪೯೪ |
| | | | | (೧೧.೦೫) | (೧೧.೦೯) |
| ಒಟ್ಟು | | ೧೧೨೨೬೯ | ೬೬೫೫೦ | ೧೫೮೦೫ | ೯೯೪೪ |
| | | | | (೧೪.೦೭) | (೧೪.೯೪) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

ಅತಿಸಣ್ಣ ಭೂ ಹಿಡುವಳಿ ಕೋಷ್ಟಕದಲ್ಲಿಯ ಅಂಕಿ-ಅಂಶಗಳನ್ನು ಗಮನಿಸಿದಾಗ ಈ ಹಿಡುವಳಿಯಲ್ಲಿ ಪುರುಷರಿಗೆ ಹೋಲಿಸಿದರೆ ಜಿಲ್ಲೆಯಲ್ಲಿ ಮಹಿಳೆಯರು ಹೊಂದಿರುವ ಭೂ ಒಡೆತನದ ಸಂಖ್ಯೆಯು ಶೇ.೧೪.೦೮ರಷ್ಟು ಅಂತೆಯೇ ಪುರುಷರು ಹೊಂದಿರುವ ಒಡೆತನದ ಸಂಖ್ಯೆಯು ೮೫.೯೨ ಪ್ರತಿಶತದಷ್ಟು. ಮಹಿಳೆಯರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಶೇ. ೧೪.೯೪ ಹೆಕ್ಟೇರುಗಳು, ಅಂತೆಯೇ ಪುರುಷರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೮೫.೦೬ ಹೆಕ್ಟೇರುಗಳು. ಇಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಯರು ಹೊಂದಿರುವಂಥ ಭೂಮಿಯ ವಿಸ್ತೀಣದ ಪ್ರಮಾಣವು ಕಡಿಮೆಯಿದ್ದರೂ ಕೂಡ ಮಹಿಳೆಯರ ಸಂಖ್ಯೆಗೆ ಹೋಲಿಸಿದರೆ ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಸ್ವಲ್ಪ ಅಧಿಕವಿದೆ.

ತಾಲೂಕುವಾರು ಒಟ್ಟು ಭೂ ಹಿಡುವಳಿಗಳ ಅಂಕಿ - ಅಂಶಗಳನ್ನು ಗಮನಿಸಿದರೆ, ಜಿಲ್ಲೆಯಲ್ಲಿಯೇ ಈ ಹಿಡುವಳಿಯಲ್ಲಿ ಯಾದಗಿರಿ ತಾಲೂಕು ಅಧಿಕ ಭೂ ಹಿಡುವಳಿಯ ಸಂಖ್ಯೆಯನ್ನು ಹೊಂದಿದೆ. ಅಫಜಲಪೂರ ತಾಲೂಕು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂ ಒಡೆತನವನ್ನು ಹೊಂದಿರುವ ತಾಲೂಕಾಗಿದೆ. ಭೂ ವಿಸ್ತೀರ್ಣವನ್ನು ಗಮನಿಸಿದರೆ ಜಿಲ್ಲೆಯಲ್ಲಿಯೇ ಅಫಜಲಪೂರ ತಾಲೂಕು ಕಡಿಮೆ ಭೂ ವಿಸ್ತೀರ್ಣ ಹೊಂದಿದ್ದರೆ, ಯಾದಗಿರಿ ತಾಲೂಕು ಭೂ ವಿಸ್ತೀರ್ಣದಲ್ಲಿ ಅಧಿಕವಿದೆ.

ತಾಲೂಕುವಾರು ಮಹಿಳೆಯರು ಹೊಂದಿರುವ ಭೂ ಒಡೆತನದ ಅಂಕಿ-ಅಂಶಗಳನ್ನು ನೋಡಿದಾಗ ಜಿಲ್ಲೆಯಲ್ಲಿಯೇ ಮಹಿಳೆಯರು ಅಧಿಕ ಭೂ ಒಡೆತನ ಹೊಂದಿರುವ ತಾಲೂಕು ಚಿಂಚೋಳಿ. ಈ ತಾಲೂಕು ಭೂ ವಿಸ್ತೀರ್ಣದಲ್ಲೂ ಅಧಿಕವಾಗಿದೆ. ಮತ್ತು ಭೂ ಒಡೆತನದ ಸಂಖ್ಯೆಯಲ್ಲಿಯು ಜಿಲ್ಲೆಯಲ್ಲಿಯೇ ಮೊದಲನೆ ಸ್ಥಾನ ಪಡೆದಿದೆ. ಜಿಲ್ಲೆಯ ಯಾದಗಿರಿ ತಾಲೂಕಿನಲ್ಲಿ ಮಹಿಳೆಯರ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಎರಡರಲ್ಲಿಯೂ ಕಡಿಮೆಯಿದೆ. ತಾಲೂಕುವಾರು ಪುರುಷರ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಗಮನಿಸಿದಾಗ ಪುರುಷರು ಚಿಂಚೋಳಿ ತಾಲೂಕಿನಲ್ಲಿ ಅತಿ ಕಡಿಮೆ ಅಂದರೆ ಶೇ. ೮೦.೬ ರಷ್ಟು ಕಡಿಮೆ ಪ್ರಮಾಣದಲ್ಲಿ ಭೂ ಒಡೆಯರಾದರೆ, ಇದೇ ತಾಲೂಕಿನಲ್ಲಿ ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದೆ. ಇವರು ಹೊಂದಿರುವ ಭೂಮಿಯ ವಿಸ್ತೀರ್ಣ ಶೇ. ೭೯.೦೯ ಹೆಕ್ಟೇರುಗಳು. ಈ ತಾಲೂಕಿನಲ್ಲಿ ಪುರುಷರು ಒಡೆತನ ಹೊಂದಿರುವ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದೆ. ಪುರುಷರು ಒಡೆತನ ಹೊಂದಿದವರಲ್ಲಿ ಯಾದಗಿರಿ ತಾಲೂಕು ಸಂಖ್ಯೆಯಲ್ಲಿ ಅಧಿಕವಾಗಿದೆ. ಶೇ. ೮೮.೯೫ರಷ್ಟಿದರೆ, ಶೇ. ೮೮.೯೧ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿರುವರು. ಈ ತಾಲೂಕಿನಲ್ಲಿ ಪುರುಷರು ಅಧಿಕ ಪ್ರಮಾಣದ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದರೂ ಕೂಡ ಭೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದೆ. ಈ ಹಿಡುವಳಿಯಲ್ಲಿ ಪ್ರತಿಯೊಂದು ತಾಲೂಕಿನಲ್ಲಿ

ಪುರುಷರ ಒಡೆತನ ಹೊಂದಿರುವ ಸಂಖ್ಯೆಗಿಂತ ಅವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆ ಇದೆ. ಹಾಗೆಯೇ ಪ್ರತಿಯೊಂದು ತಾಲೂಕುಗಳಲ್ಲಿ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆಗಿಂತ ಅವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ.

ಅಫಜಲಪೂರ ತಾಲೂಕು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಹೊಂದಿದ್ದರೂ ಕೂಡ ಮಹಿಳೆಯರು ಒಡೆತನದ ಸಂಖ್ಯೆಗೆ ಹೋಲಿಸಿದಾಗ ಭೂ ವಿಸ್ತೀರ್ಣದ ಪ್ರಮಾಣ ಅಧಿಕವಿರುವುದು ಕಂಡುಬಂದಿದೆ. ಅವರ ಅಧೀನದಲ್ಲಿರುವ ಭೂಮಿ ಶೇ. ೧೬.೩೦ ಹೆಕ್ಟೇರ್‌ನಷ್ಟು ಜಿಲ್ಲೆಯಲ್ಲಿಯೇ ಯಾದಗಿರಿ ತಾಲೂಕು ಈ ಹಿಡುವಳಿಯಲ್ಲಿ ಅಧಿಕ ಭೂ ಒಡೆತನದ ಸಂಖ್ಯೆ ಮತ್ತು ಅಧಿಕ ಭೂಮಿಯ ವಿಸ್ತೀರ್ಣ ಹೊಂದಿದೆ. ಆದರೆ ಮಹಿಳೆಯರು ಈ ತಾಲೂಕಿನಲ್ಲಿ ಕಡಿಮೆ ಪ್ರಮಾಣದ ಭೂ ಒಡೆತನದ ಸಂಖ್ಯೆ ಮತ್ತು ಕಡಿಮೆ ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದರೂ ಕೂಡ ಮಹಿಳೆಯರು ಹೊಂದಿರುವ ಭೂ ಒಡೆತನದ ಸಂಖ್ಯೆಗಿಂತ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಅಧಿಕವಾಗಿದೆ.

ಗುಲಬರ್ಗಾ ಜಿಲ್ಲೆಯ ಒಟ್ಟು ಭೂ ಒಡೆತನ ಹೊಂದಿದವರಲ್ಲಿ ಅಂದರೆ ಐದು ತರಹದ ಹಿಡುವಳಿಗಳಲ್ಲಿ ಪುರುಷರು ಮತ್ತು ಮಹಿಳೆಯರನ್ನೊಳಗೊಂಡಂತೆ ಅತಿಸಣ್ಣ ಹಿಡುವಳಿಯ ಒಡೆತನ ಹೊಂದಿದವರ ಪ್ರಮಾಣ ಶೇ. ೨೦.೯೪ರಷ್ಟು ಇದೆ. ಆದರೆ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೪.೭೩ ಮಾತ್ರ. ಇಡಿ ಜಿಲ್ಲೆಗೆ ಹೋಲಿಸಿದಾಗ ಈ ಹಿಡುವಳಿಯಲ್ಲಿ ಭೂ ಒಡೆತನದ ಸಂಖ್ಯೆಯು ಅಧಿಕವಿದ್ದರೆ ಭೂಮಿಯ ವಿಸ್ತೀರ್ಣವು ತುಂಬಾ ಕಡಿಮೆಯಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಭೂಮಿಯ ವಿಸ್ತೀರ್ಣ ಕಡಿಮೆ ಆದಂತೆ ಭೂ ಒಡೆತನ ಹೊಂದಿದವರ ಸಂಖ್ಯೆ ಅಧಿಕವಾಗುತ್ತದೆ. ಮತ್ತು ಭೂ ವಿಸ್ತೀರ್ಣದ ಪ್ರಮಾಣ ಅಧಿಕವಿದ್ದಂತೆ ಒಡೆತನ ಹೊಂದಿದವರ ಸಂಖ್ಯೆ ಕಡಿಮೆ ಆಗುತ್ತದೆ. ಜಿಲ್ಲೆಯಲ್ಲಿ ಭೂ ಒಡೆತನ ಹೊಂದಿದ ಒಟ್ಟು ಪುರುಷರಲ್ಲಿ ಅತಿಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿರುವ ಪುರುಷರು ಶೇ. ೨೦.೮೮ ರಷ್ಟು ಇದ್ದಾರೆ. ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೪.೬೪ ಹೆಕ್ಟೇರುಗಳು. ಹಾಗೆಯೇ ಜಿಲ್ಲೆಯಲ್ಲಿ ಒಟ್ಟು ಮಹಿಳಾ ಭೂ ಒಡೆತನ ಹೊಂದಿದವರಲ್ಲಿ ಅತಿಸಣ್ಣ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು ಶೇ. ೨೧.೨೯ರಷ್ಟಿರುವರು, ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೫.೩೯ ಹೆಕ್ಟೇರುಗಳು. ಒಟ್ಟು ಭೂ ಒಡೆತನ ಹೊಂದಿರುವ ಸಂಖ್ಯೆಯಲ್ಲಿ ಪುರುಷರ ಪ್ರಮಾಣ ಅಧಿಕವಿದ್ದರೂ ಮಹಿಳೆಯರು ಹೊಂದಿರುವ ಒಡೆತನದ ಸಂಖ್ಯೆಯಲ್ಲಿ ಅತಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಪುರುಷರ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣಕ್ಕಿಂತ ಅಧಿಕವಾಗಿದೆ. ರಾಜ್ಯದಲ್ಲಿ ಈ ಹಿಡುವಳಿ ಹೊಂದಿದವರ ಸಂಖ್ಯೆಯು ಶೇ. ೪.೩೦ರಷ್ಟಿದೆ. ಇವರ ಅಧೀನದಲ್ಲಿರುವ ಭೂಮಿಯ ಪ್ರಮಾಣ ಶೇ. ೫.೩೩ ಹೆಕ್ಟೇರ್‌ನಷ್ಟಿದೆ. ರಾಜ್ಯದಲ್ಲಿಯೂ

ಈ ಹಿಡುವಳಿಯನ್ನು ಅತಿ ಕಡಿಮೆ ಪ್ರಮಾಣದಲ್ಲಿ ಒಡೆತನದ ಸಂಖ್ಯೆ ಹೊಂದಿದರೂ ಕೂಡ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣ ಭೂ ಒಡೆತನದ ಸಂಖ್ಯೆಗಿಂತಲೂ ಅಧಿಕವಿದೆ.

ಇಲ್ಲಿ ಸ್ಪಷ್ಟವಾಗುವ ಇನ್ನೊಂದು ಸಂಗತಿಯೆಂದರೆ ಭೂಮಿಯ ಪ್ರಮಾಣ ಚಿಕ್ಕದಾದಂತೆ ಭೂ ಒಡೆತನ ಹೊಂದುವವರ ಪ್ರಮಾಣ ಅಧಿಕವಾಗಿರುವುದು. ಅತಿ ಸಣ್ಣ ಪ್ರಮಾಣದ ಭೂ ಒಡೆತನವನ್ನು ಮಹಿಳೆಯರಿಗೆ ನೀಡಿ, ಪುರುಷರು ಅಧಿಕ ಭೂಮಿಯ ವಿಸ್ತೀರ್ಣದ ಒಡೆತನವನ್ನು ಹೊಂದಿದ್ದಾರೆ. ಅಧಿಕಾರ ಹೊಂದುವುದು ಪ್ರತಿಷ್ಠೆಯ ವಿಷಯವಾಗಿರುವುದರಿಂದ ಸಮಾಜದ ವ್ಯವಸ್ಥೆಯು ಮಹಿಳೆಯರನ್ನು ಅಧಿಕ ಪ್ರಮಾಣದಲ್ಲಿ ಆಸ್ತಿಯಿಂದ ದೂರವೇ ಉಳಿಯುವಂತೆ ಮಾಡಿದೆ.

ಅತಿಸಣ್ಣ ಹಿಡುವಳಿಯಲ್ಲಿ ಪುರುಷರಿಗಿಂತ ಮಹಿಳೆಯರ ಒಡೆತನದ ಪ್ರಮಾಣ ಕಡಿಮೆಯಿದ್ದರೂ ಕೂಡ ಮಹಿಳೆಯರ ಒಡೆತನದಲ್ಲಿ ಈ ಹಿಡುವಳಿಯಲ್ಲಿ ಪುರುಷರಿಗಿಂತ ಅಧಿಕ ಪ್ರಮಾಣದಲ್ಲಿ ಇರುವರು. ಅಂತೆಯೇ ಈ ಹಿಡುವಳಿಯಲ್ಲಿ ಮಹಿಳೆಯರ ಒಡೆತನದ ಸಂಖ್ಯೆಗಿಂತ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಿದೆ. ಅದೇ ರೀತಿ ಸಣ್ಣ ಹಿಡುವಳಿಯಲ್ಲಿ ಮಹಿಳೆಯರ ಪ್ರಮಾಣಕ್ಕೂ ಮತ್ತು ಅವರು ಹೊಂದಿರುವ ಭೂಮಿಯ ವಿಸ್ತೀರ್ಣ ಪ್ರಮಾಣದಲ್ಲಿರುವ ವ್ಯತ್ಯಾಸವನ್ನು ಈ ಮುಂದಿನ ಕೋಷ್ಟಕದ ಮೂಲಕ ತಿಳಿಯೋಣ.

**೭.೩. ಸಣ್ಣ ಭೂ ಹಿಡುವಳಿಯ ವಿವರ**

ಸಣ್ಣ ಭೂ ಹಿಡುವಳಿಯ ವರ್ಗೀಕರಣದಲ್ಲಿ ಒಂದರಿಂದ ಎರಡು ಹೆಕ್ಟೇರ್‌ನಷ್ಟು ಭೂ ಪರಿಮಿತಿಯ ಒಡೆತನ ಹೊಂದಿರುವವರು ಬರುತ್ತಾರೆ. ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರಿಗೆ ಅವರ ಆದಾಯ ಏರಿಸಿಕೊಳ್ಳಲು ಸುಲಭ ಸಾಧ್ಯವಿಲ್ಲ. ಎರಡು ಹೆಕ್ಟೇರ್‌ಗಿಂತ ಕಡಿಮೆ ಭೂ ಒಡೆತನ ಹೊಂದಿರುವ ಕುಟುಂಬಗಳ ಆಯವ್ಯಯ ಯಾವಾಗಲೂ ಕೊರತೆ ಆಯವ್ಯಯವಾಗಿರುತ್ತದೆ. ಈ ರೀತಿಯ ಕೊರತೆಯ ಆಯವ್ಯಯದಿಂದಾಗಿ ಸಣ್ಣ ರೈತರಲ್ಲಿ ಕೃಷಿಗೆ ಬಂಡವಾಳ ತೊಡಗಿಸಲು ಸಂಪನ್ಮೂಲಗಳಿರುವುದಿಲ್ಲ. ಇದು ಸಣ್ಣ ರೈತರ ವಿಷಯದಲ್ಲಿ ವಾಸ್ತವ ಸಂಗತಿಗಳಾದರೂ ಇದಕ್ಕೆ ವ್ಯತಿರಿಕ್ತವಾದ ಸಣ್ಣ ರೈತರು ಇಲ್ಲದಿಲ್ಲ. ಅತಿಸಣ್ಣ ರೈತರ ಹಾಗೆ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರು ಸಾಲದ ಭಾದೆಯಲ್ಲಿ ಬಳಲುತ್ತಿದ್ದಾರೆ. ಗುಲಬರ್ಗಾ ಜಿಲ್ಲೆಗೆ ಸಂಬಂಧಿಸಿದ ಸಣ್ಣ ಭೂ ಹಿಡುವಳಿಯ ಒಡೆತನದ ಅಂಕಿ-ಅಂಶಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

## ಕೋಷ್ಟಕ–೩

## ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ವಿವರ: ಸಣ್ಣ ಭೂ ಹಿಡುವಳಿಗಳು

(೧–೨ ಹೆಕ್ಟೇರು)

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರಸಂ | ತಾಲೂಕುಗಳು | ಒಟ್ಟು ಭೂ ಒಡೆತನ ಹೊಂದಿದವರು | | ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೧೫೯೭೩ | ೨೪೨೬೬ | ೨೪೧೩ | ೩೬೨೩ |
| | | | | (೧೫.೧೦) | (೧೪.೯೩) |
| ೨ | ಆಳಂದ | ೨೩೬೫೦ | ೩೫೨೭೧ | ೨೯೫೦ | ೪೩೭೬ |
| | | | | (೧೨.೪೭) | (೧೨.೪೦) |
| ೩ | ಚಿಂಚೋಳಿ | ೧೫೫೯೭ | ೨೨೭೯೬ | ೨೬೭೩ | ೩೯೦೪ |
| | | | | (೧೭.೧೩) | (೧೭.೧೨) |
| ೪ | ಚಿತ್ತಾಪೂರ | ೧೮೭೫೬ | ೨೭೬೦೪ | ೨೭೦೨ | ೪೦೧೩ |
| | | | | (೧೪.೪೦) | (೧೪.೫೩) |
| ೫ | ಗುಲಬರ್ಗಾ | ೧೭೪೬೫ | ೨೬೦೩೮ | ೨೬೬೨ | ೩೯೬೫ |
| | | | | (೧೫.೨೪) | (೧೫.೨೨) |
| ೬ | ಜೇವರ್ಗಿ | ೨೦೦೬೯ | ೨೯೮೯೩ | ೨೬೩೯ | ೩೯೭೭ |
| | | | | (೧೩.೧೪) | (೧೩.೩೦) |
| ೭ | ಸೇಡಂ | ೧೧೬೮೫ | ೧೭೧೦೨ | ೧೬೬೯ | ೨೪೪೨ |
| | | | | (೧೪.೨೮) | (೧೪.೨೭) |
| ೮ | ಶಹಾಪುರ | ೨೦೯೧೮ | ೩೦೬೭೪ | ೨೮೪೩ | ೪೨೧೦ |
| | | | | (೧೩.೫೯) | (೧೩.೭೨) |
| ೯ | ಸುರಪುರ | ೨೪೧೭೧ | ೩೫೧೭೦ | ೩೧೫೧ | ೪೬೧೭ |
| | | | | (೧೩.೦೩) | (೧೩.೧೨) |
| ೧೦ | ಯಾದಗಿರಿ | ೨೨೯೧೫ | ೩೨೯೪೬ | ೨೩೬೩ | ೩೪೭೮ |
| | | | | (೧೦.೩೧) | (೧೦.೫೫) |
| ಒಟ್ಟು | | ೧೯೧೧೯೯ | ೨೮೧೭೬೦ | **೨೬೦೬೫** | **೩೮೬೦೫** |
| | | | | (೧೩.೬೩) | (೧೩.೭೦) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

ಐದು ತರಹದ ಹಿಡುವಳಿಗಳಲ್ಲಿ ಸಣ್ಣ ಭೂ ಹಿಡುವಳಿಯು ಒಂದಾಗಿದೆ. ಈ ಭೂ ಹಿಡುವಳಿಯಲ್ಲಿ ಒಂದರಿಂದ ಎರಡು ಹೆಕ್ಟೇರುಗಳಷ್ಟು ಭೂಮಿಯನ್ನು ಒಳಗೊಂಡಿರುತ್ತದೆ. ಈ ಹಿಡುವಳಿಯನ್ನು ರೈತಾಪಿ ಹಿಡುವಳಿ ಎಂದು ಕರೆಯುವರು. ರಾಜ್ಯದಲ್ಲಿ ಈ ರೀತಿಯ ಹಿಡುವಳಿದಾರರ ಪ್ರಮಾಣವು ಶೇ.೧೧.೨೦ರಷ್ಟಿದೆ. ಅಲ್ಲದೆ ಇವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣವು ಶೇ.೧೧.೩೬ ಹೆಕ್ಟೇರುಗಳಷ್ಟು. ರಾಜ್ಯದಲ್ಲಿ ಈ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕವಾಗಿದೆ. ಅದರಲ್ಲೂ ಭೂ ಒಡೆತನ ಹೊಂದಿದವರ ಸಂಖ್ಯೆಗಿಂತ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಇನ್ನೂ ಅಧಿಕವಾಗಿದೆ. ಇದರಿಂದ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿರುವವರು ಅಧಿಕವಿರುವುದು ರಾಜ್ಯದೆಲ್ಲೆಡೆ ಕಂಡುಬರುತ್ತದೆ.

ಜಿಲ್ಲೆಯಲ್ಲಿ ಒಟ್ಟು ಐದು ತರಹದ ಹಿಡುವಳಿಗಳಲ್ಲಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೩೪.೮೩ರಷ್ಟಿರುವರು. ಹಾಗೆಯೇ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಜಿಲ್ಲೆಯಲ್ಲಿಯೇ ಶೇ. ೨೦.೦೬ ಹೆಕ್ಟೇರುಗಳಷ್ಟು ರಾಜ್ಯದಂತೆ ಜಿಲ್ಲೆಯಲ್ಲಿಯೂ ಕೂಡ ಒಟ್ಟು ಭೂ ಒಡೆತನ ಹೊಂದಿದವರಲ್ಲಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆಯೇ ಅಧಿಕವಿದೆ. ಮತ್ತು ಇವರು ಮಾಲೀಕತ್ವ ಹೊಂದಿರುವ ಭೂಮಿಯ ಪ್ರಮಾಣವು ಅಧಿಕವಿದೆ. ಆದರೆ ಜಿಲ್ಲೆಯಲ್ಲಿ ಐದು ತರಹದ ಹಿಡುವಳಿಗಳಲ್ಲಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದ ಪುರುಷರು ಶೇ.೩೦.೦೮ರಷ್ಟಿದ್ದರೆ, ಅವರ ಅಧೀನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣದ ಪ್ರಮಾಣ ಶೇ. ೧೭.೪೧ ಹೆಕ್ಟೇರುಗಳು. ಜಿಲ್ಲೆಯಲ್ಲಿ ಈ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆ ಮತ್ತು ವಿಸ್ತೀರ್ಣ ಅಧಿಕವಿದ್ದರೂ ಭೂ ಒಡೆತನದ ಸಂಖ್ಯೆಗೆ ಹೋಲಿಸಿದಾಗ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಪುರುಷರಂತೆ ಒಟ್ಟು ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆಯನ್ನು ನೋಡಿದಾಗ ಅವರಲ್ಲಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿರುವ ಸಂಖ್ಯೆಯು ಜಿಲ್ಲೆಯಲ್ಲಿಯೇ ಅಧಿಕವಾಗಿದೆ. ಆದರೆ ಮಹಿಳೆಯರ ಒಡೆತನದ ಸಂಖ್ಯೆಗೆ ಹೋಲಿಸಿದಾಗ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಪುರುಷರ ಸಂಖ್ಯೆಯಲ್ಲಿ ಆಗಲಿ ಮಹಿಳೆಯರ ಒಡೆತನದ ಸಂಖ್ಯೆಯಲ್ಲೇ ಆಗಲಿ ಅವರು ಹೊಂದಿರುವ ಭೂಮಿಯ ವಿಸ್ತೀರ್ಣ ಕಡಿಮೆ ಇದೆ. ಅಲ್ಲದೆ ಮಹಿಳೆಯರ ಒಡೆತನದ ಸಂಖ್ಯೆಗೂ ಮತ್ತು ಪುರುಷರ ಒಡೆತನದ ಸಂಖ್ಯೆಗೂ ಹೋಲಿಸಿದರೂ ಮಹಿಳೆಯರ ಒಡೆತನದ ಪ್ರಮಾಣ ಕಡಿಮೆ ಇದೆ.

ಜಿಲ್ಲೆಯ ಹತ್ತು ತಾಲೂಕುಗಳನ್ನೊಳಗೊಂಡಂತೆ ಒಂದರಿಂದ ಎರಡು ಹೆಕ್ಟೇರು ಭೂಮಿಯ ವಿಸ್ತೀರ್ಣವುಳ್ಳ ಮಹಿಳೆಯರು ಶೇ. ೧೩.೬೩ರಷ್ಟು ಇದ್ದಾರೆ. ಅಂತೆಯೇ ಪುರುಷರು ಈ ಹಿಡುವಳಿಯಲ್ಲಿ ಒಡೆತನ ಪಡೆದವರು ಶೇ. ೮೬.೩೭ರಷ್ಟು. ಇವರ ಒಡೆತನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣ ಶೇ. ೮೬.೩ ಹೆಕ್ಟೇರ್‌ನಷ್ಟು ಪುರುಷರದಾದರೆ, ಶೇ. ೧೩.೭೦ ಹೆಕ್ಟೇರ್‌ನಷ್ಟು ಭೂಮಿಯು ಮಹಿಳೆಯರದ್ದಾಗಿದೆ. ಈ ಹಿಡುವಳಿಯಲ್ಲಿ ಮಹಿಳೆಯರ ಭೂ ಒಡತಿಯರ ಸಂಖ್ಯೆಗಿಂತ ಅವರ ಮಾಲೀಕತ್ವದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಸ್ವಲ್ಪ ಅಧಿಕವಿದೆ. ಈ ಹಿಡುವಳಿಯಲ್ಲಿ ಲಿಂಗತಾರತಮ್ಯವಾಗಿದ್ದರೂ ಕೂಡ ಮಹಿಳೆಯರು ಭೂ ಒಡೆತನದ ಸಂಖ್ಯೆಗೆ ಅನುಗುಣವಾಗಿ ಭೂಮಿಯ ವಿಸ್ತೀರ್ಣವನ್ನು ಪಡೆದಿರುವರು.

ಈ ಹಿಡುವಳಿಯಲ್ಲಿ ತಾಲೂಕುವಾರು ಅಂಕಿ-ಅಂಶಗಳನ್ನು ಗಮನಿಸಿದಾಗ ಒಟ್ಟು ಭೂ ಹಿಡುವಳಿಯಲ್ಲಿ ಅಂದರೆ ಪುರುಷರು ಮತ್ತು ಮಹಿಳೆಯರನ್ನೊಳಗೊಂಡಂತೆ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಭೂ ಒಡೆತನ

ಹೊಂದಿದವರ ಸಂಖ್ಯೆ ಅಧಿಕವಾಗಿದೆ ಮತ್ತು ಸೇಡಂ ತಾಲೂಕಿನಲ್ಲಿ ಒಡೆತನ ಹೊಂದಿದವರ ಸಂಖ್ಯೆ ಕಡಿಮೆ ಇದೆ. ಹಾಗೆಯೇ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದರೆ ಸಣ್ಣ ಹಿಡುವಳಿಯಲ್ಲಿ ಅಧಿಕ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಆಳಂದ. ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಸೇಡಂ, ಈ ತಾಲೂಕು ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದಲ್ಲಿ ಕಡಿಮೆ ಇದೆ. ಆಳಂದ ತಾಲೂಕು ಭೂ ಒಡೆತನದ ಸಂಖ್ಯೆಯಲ್ಲಿ ಕಡಿಮೆ ಇದ್ದು ಭೂಮಿಯ ವಿಸ್ತೀರ್ಣದಲ್ಲಿ ಅಧಿಕವಾಗಿದೆ. ಸುರಪುರ ತಾಲೂಕು ಭೂ ವಿಸ್ತೀರ್ಣದಲ್ಲಿ ಕಡಿಮೆ ಇದ್ದು ಭೂ ಒಡೆತನದ ಸಂಖ್ಯೆಯಲ್ಲಿ ಅಧಿಕವಾಗಿದೆ.

ಈ ಅಂಕಿ-ಅಂಶಗಳ ಮೂಲಕ ತಾಲೂಕುವಾರು ಮಹಿಳೆಯರ ಸ್ಥಾನಮಾನದಲ್ಲಾದ ಬದಲಾವಣೆಯನ್ನು ಗಮನಿಸಿದಾಗ ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರ ಒಡೆತನದ ಪ್ರಮಾಣ ಅಧಿಕವಾಗಿದೆ. ಇಲ್ಲಿಯ ಮಹಿಳೆಯರು ಶೇ. ೧೭.೧೩ರಷ್ಟು ಒಡತಿಯರಾದರೆ ಶೇ. ೧೦.೩೧ರಷ್ಟು ಮಹಿಳೆಯರು ಯಾದಗಿರಿ ತಾಲೂಕಿನಲ್ಲಿ ಅತಿ ಕಡಿಮೆ ಸಂಖ್ಯೆಯಲ್ಲಿ ಒಡತಿಯರಾಗಿರುವರು. ಪುರುಷರಲ್ಲಿ ಭೂ ಒಡೆತನ ಹೊಂದಿದವರನ್ನು ಗಮನಿಸಿದಾಗ ಯಾದಗಿರಿ ತಾಲೂಕಿನಲ್ಲಿ ಅಧಿಕವಾಗಿ ಅಂದರೆ ಶೇ. ೮೯.೬೯ರಷ್ಟು ಪುರುಷರು ಭೂ ಒಡೆಯರಾದರೆ, ಅಫಜಲಪೂರ ತಾಲೂಕಿನಲ್ಲಿ ಶೇ. ೮೪.೯ರಷ್ಟು ಪುರುಷರು ಕಡಿಮೆ ಪ್ರಮಾಣದಲ್ಲಿ ಭೂ ಒಡೆಯರಾಗಿದ್ದಾರೆ. ಮಹಿಳೆಯರು ಹೊಂದಿರುವ ಭೂ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದರೆ ಚಿಂಚೋಳಿ ತಾಲೂಕಿನಲ್ಲಿ ಶೇ. ೧೭.೧೨ ಹೆಕ್ಟೇರುಗಳಷ್ಟು ಮಹಿಳೆಯರು ಅಧಿಕ ಪ್ರಮಾಣದಲ್ಲಿ ಭೂಮಿಯನ್ನು ಹೊಂದಿದ್ದರೆ, ಇಲ್ಲಿಯ ಪುರುಷರು ಶೇ. ೮೨.೮೮ ಹೆಕ್ಟೇರ್‌ನಷ್ಟು ಜಿಲ್ಲೆಯಲ್ಲಿಯೇ ಈ ತಾಲೂಕಿನಲ್ಲಿ ಅತಿ ಕಡಿಮೆ ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದಾರೆ. ಜಿಲ್ಲೆಯಲ್ಲಿ ಅತಿ ಕಡಿಮೆ ಭೂ ವಿಸ್ತೀರ್ಣ ಹೊಂದಿರುವ ತಾಲೂಕು ಯಾದಗಿರಿ, ಇಲ್ಲಿ ಮಹಿಳೆಯರು ಶೇ.೧೦.೫೫ ಹೆಕ್ಟೇರುಗಳಷ್ಟು ಭೂ ವಿಸ್ತೀರ್ಣವನ್ನು ಹೊಂದಿದ್ದಾರೆ. ಜಿಲ್ಲೆಯಲ್ಲಿಯೇ ಈ ತಾಲೂಕಿನಲ್ಲಿ ಪುರುಷರು ಅಧಿಕ ಪ್ರಮಾಣದಲ್ಲಿ ಶೇ.೮೯.೪೫ ಹೆಕ್ಟೇರುಗಳಷ್ಟು ಭೂ ವಿಸ್ತೀರ್ಣವನ್ನು ಹೊಂದಿರುವರು.

ಮಹಿಳೆಯರು ಭೂ ಒಡೆತನ ಹೊಂದಿರುವ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಿರುವ ತಾಲೂಕುಗಳೆಂದರೆ ಚಿತ್ತಾಪೂರ, ಜೇವರ್ಗಿ, ಶಹಾಪುರ, ಸುರಪುರ ಮತ್ತು ಯಾದಗಿರಿ. ಚಿತ್ತಾಪೂರ ತಾಲೂಕಿನಲ್ಲಿ ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಿದೆ. ಪುರುಷರ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಗಮನಿಸಿದರೆ ಮಹಿಳೆಯರ ಪ್ರಮಾಣ ಕಡಿಮೆಯಿದ್ದರೂ ಕೂಡ ಅವರು ಭೂ ಒಡೆತನದ ಸಂಖ್ಯೆಗೆ ಅನುಗುಣವಾಗಿ ಭೂಮಿಯ ವಿಸ್ತೀರ್ಣವನ್ನು ಪಡೆದಿದ್ದಾರೆ. ಈ ಹಿಡುವಳಿಯಲ್ಲಿ ಮಹಿಳೆಯರು ತಾರತಮ್ಯಕ್ಕೆ ಒಳಗಾಗದೇ ಸ್ವಲ್ಪ ಮಟ್ಟಿಗಾದರೂ ತಮ್ಮ ಆಸ್ತಿಯ ಮೇಲೆ ಅಧಿಕಾರವನ್ನು ಹೊಂದಿರುವರು. ಮಹಿಳೆಯರು ಒಂದರಿಂದ ಎರಡು ಹೆಕ್ಟೇರ್‌ನಷ್ಟು ಭೂಮಿಯ ಒಡೆತನ ಸ್ವಲ್ಪವಾದರೂ ಅಧಿಕ ಪ್ರಮಾಣದಲ್ಲಿ ಪಡೆದಿರುವರು.

ಈ ಸಣ್ಣ ಹಿಡುವಳಿಯಲ್ಲಿ ಮಹಿಳೆಯರು ಭೂ ಒಡೆತನ ಹೊಂದಿರುವ ಸಂಖ್ಯೆಗಿಂತ ಕಡಿಮೆ ಪ್ರಮಾಣದಲ್ಲಿ ಭೂ ವಿಸ್ತೀರ್ಣ ಹೊಂದಿರುವ ತಾಲೂಕುಗಳನ್ನು ಗಮನಿಸಿದಾಗ, ಸೇಡಂ ತಾಲೂಕು ಭೂ ಒಡೆತನ ಹೊಂದಿದವರ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದಲ್ಲಿ ಕಡಿಮೆ ಇದ್ದರೂ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆಗಿಂತ

ಅವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣವಂತು ಇನ್ನೂ ಕಡಿಮೆ ಇದೆ. ಅಫಜಲಪೂರ ತಾಲೂಕಿನಲ್ಲಿಯೂ ಭೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಆಳಂದ ತಾಲೂಕಿನಲ್ಲಿ ಸಹ ಜಿಲ್ಲೆಯಲ್ಲಿಯೇ ಭೂಮಿಯ ವಿಸ್ತೀರ್ಣ ಅಧಿಕವಾಗಿದ್ದರೂ ಮಹಿಳೆಯರು ಭೂ ಒಡೆತನ ಹೊಂದುವಲ್ಲಿ ಅವರ ಭೂಮಿಯ ವಿಸ್ತೀರ್ಣದ ಪ್ರಮಾಣವು ಭೂ ಒಡೆತನದ ಸಂಖ್ಯೆಗಿಂತ ಕಡಿಮೆ ಇದೆ. ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಅಧಿಕವಾಗಿದ್ದರೂ ಭೂ ಒಡೆತನದ ಸಂಖ್ಯೆಗಿಂತ ಕಡಿಮೆ ಪ್ರಮಾಣದ ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು. ಸಂಖ್ಯೆಗಿಂತ ವಿಸ್ತೀರ್ಣದ ಪ್ರಮಾಣ ಕಡಿಮೆ ಇರುವುದು ಗುಲಬರ್ಗಾ ತಾಲೂಕಿನಲ್ಲಿಯೂ ಕಂಡುಬರುತ್ತದೆ. ಈ ತಾಲೂಕುಗಳಲ್ಲಿ ಮಹಿಳೆಯರಿಗೆ ಒಡೆತನ ಭೂಮಿಯು ಕಡಿಮೆ ಪ್ರಮಾಣದಲ್ಲಿ ಇದೆ.

ಈ ತಾಲೂಕುಗಳಲ್ಲಿ ಸ್ಪಷ್ಟವಾಗಿ ಕಂಡುಬರುವ ಸಂಗತಿಯೇನೆಂದರೆ ೧ ರಿಂದ ೨ ಹೆಕ್ಟೇರುಗಳಷ್ಟು ಭೂಮಿಯೂ ಕೂಡ ಮಹಿಳೆಯರಿಗೆ ದೊರೆಯದೆ ಇರುವುದು. ಈ ಹಿಡುವಳಿಯಲ್ಲಿಯೂ ಪುರುಷರ ಪ್ರಮಾಣ ಅಧಿಕವಿದ್ದು ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಮಹಿಳೆಯರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣಕ್ಕಿಂತ ಅಧಿಕವಾಗಿದೆ. ಹಳ್ಳಿಗಳಲ್ಲಿ ಪುರುಷರಿಗಿಂತ ಮಹಿಳೆಯರೆ ಅಧಿಕವಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಆದರೆ ಕೃಷಿ ಭೂಮಿಯ ಒಡೆತನದ ಪ್ರಶ್ನೆ ಬಂದಾಗ ಮಾತ್ರ ಮಹಿಳೆಯರ ಪ್ರಮಾಣ ಕಡಿಮೆ ಇದೆ. ಕೃಷಿಯ ಹುಟ್ಟಿಗೆ ಮೂಲ ಕಾರಣ ಮಹಿಳೆಯೇ ಆಗಿದ್ದರೂ ಸಹ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಅವಳಿಗೆ ಅಲ್ಪ ಪ್ರಮಾಣದಲ್ಲಿಯೂ ಭೂಮಿಯ ಒಡತಿಯಾಗದಂತೆ ಈ ವ್ಯವಸ್ಥೆ ನಿರಾಕರಿಸಲಾಗಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಮಹಿಳೆಯರು ಅಲ್ಪ ಪ್ರಮಾಣದಲ್ಲಿ ಒಡತಿಯರಾದರೂ ಆ ಭೂಮಿಯ ಗುಣಧರ್ಮ ತಿಳಿದು ಬರುವುದಿಲ್ಲ. ಒಟ್ಟಿನಲ್ಲಿ ಮಹಿಳೆಯರು ಸ್ಥಿರಾಸ್ತಿಯಿಂದ ವಂಚಿತರಾಗಿರುವುದು ಸ್ಪಷ್ಟವಾಗುತ್ತದೆ. ಹಿಡುವಳಿಯ ಒಡೆತನ ಹೊಂದಿದವರು ಕೃಷಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ.

ಸಣ್ಣ ಭೂ ಹಿಡುವಳಿಯಲ್ಲಿ ಮಹಿಳೆಯರ ಭೂ ಒಡೆತನದ ಪ್ರಮಾಣ ಈ ರೀತಿಯಾದರೆ ಅರೆ ಮಧ್ಯಮ ಭೂ ಹಿಡುವಳಿಯಲ್ಲಿ ಅವರ ಭೂ ಒಡೆತನದ ಪ್ರಮಾಣವನ್ನು ಗಮನಿಸುವುದು ಅತ್ಯಗತ್ಯವಾಗಿದೆ.

### ೭.೪. ಅರೆ ಮಧ್ಯಮ ಭೂ ಹಿಡುವಳಿಯ ವಿವರ

ಅರೆ ಮಾಧ್ಯಮ ಭೂ ಹಿಡುವಳಿ ಎಂದರೆ ೨ ರಿಂದ ೪ ಹೆಕ್ಟೇರ್‌ನಷ್ಟು ಪರಿಮಿತಿಯಿರುವ ಭೂಮಿ. ಅರೆ ಮಧ್ಯಮ ಮತ್ತು ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿರುವ ರೈತರು ಮಧ್ಯಮ ಮಟ್ಟದ ಸಾಧನೆಯ ರೈತರೆಂದು ಹೇಳಲಾಗಿದೆ. ಇವರು ಬಡತನದಂಥ ವಿಷವರ್ತುಲದಿಂದ ಪಾರಾಗಿದ್ದು ಸಮೃದ್ಧಿಯ ಉನ್ನತ ಸ್ಥಿತಿಯತ್ತ ಸಾಗಲು ಪ್ರಯತ್ನಿಸುತ್ತಿರುವರು. ಇವರು ಸರ್ಕಾರದಿಂದ ಸಾಲಸೌಲಭ್ಯವನ್ನು ಕೂಡ ಹೊಂದುವರು, ಆದರೆ ಅತಿ ಸಣ್ಣ ಮತ್ತು ಸಣ್ಣ ಭೂ ಹಿಡುವಳಿ ಒಡೆತನ ಹೊಂದಿದವರ ಹಾಗೆ ಬಡತನದ ದುಸ್ಥಿತಿಯನ್ನು ಅನುಭವಿಸದೇ ಸ್ವಲ್ಪ ಮಟ್ಟಿಗಾದರೂ ಒಳ್ಳೆಯ ಜೀವನವನ್ನು ಸಾಗಿಸುತ್ತಿದ್ದಾರೆ. ಅರೆಮಧ್ಯಮ ಭೂ ಹಿಡುವಳಿ ಹೊಂದಿರುವ ರೈತರಲ್ಲಿಯೂ ಮಹಿಳೆಯರು ಒಡೆತನ ಹೊಂದಿರುವುದನ್ನು ಕಾಣಬಹುದು. ಗುಲಬರ್ಗಾ ಜಿಲ್ಲೆಯ ಅರೆ ಮಧ್ಯಮ ಭೂ ಒಡೆತನ ಹೊಂದಿರುವ ಅಂಕಿ-ಅಂಶಗಳನ್ನು ಕೋಷ್ಟಕದ ಮೂಲಕ ತಿಳಿದುಕೊಳ್ಳಲಾಗಿದೆ.

# ಕೋಷ್ಟಕ–೪

## ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ವಿವರ: ಅರೆಮಾಧ್ಯಮ ಭೂ ಹಿಡುವಳಿಗಳು

(೨–೪ ಹೆಕ್ಟೇರು)

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರ.ಸಂ | ತಾಲೂಕುಗಳು | ಒಟ್ಟು ಭೂ ಒಡೆತನ ಹೊಂದಿದವರು | | ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೧೪೨೬೯ | ೩೮೫೩೧ | ೨೦೯೭ | ೫೫೮೯ |
| | | | | (೧೪.೬೯) | (೧೪.೫೦) |
| ೨ | ಆಳಂದ | ೧೮೭೧೯ | ೫೧೧೧೮ | ೨೧೮೭ | ೫೯೨೮ |
| | | | | (೧೧.೬೮) | (೧೧.೫೯) |
| ೩ | ಚಿಂಚೋಳಿ | ೧೨೧೨೫ | ೩೩೪೪೧ | ೧೮೮೦ | ೫೧೬೩ |
| | | | | (೧೫.೫೦) | (೧೫.೪೩) |
| ೪ | ಚಿತ್ತಾಪೂರ | ೧೬೯೭೪ | ೪೭೦೮೬ | ೨೪೨೯ | ೬೭೭೧ |
| | | | | (೧೪.೩೧) | (೧೪.೩೮) |
| ೫ | ಗುಲಬರ್ಗಾ | ೧೫೮೩೮ | ೪೩೮೦೫ | ೨೨೯೦ | ೬೨೮೧ |
| | | | | (೧೪.೪೫) | (೧೪.೩೩) |
| ೬ | ಜೇವರ್ಗಿ | ೧೯೮೮೮ | ೫೪೭೫೨ | ೨೬೮೧ | ೭೪೧೫ |
| | | | | (೧೩.೪೮) | (೧೩.೫೪) |
| ೭ | ಸೇಡಂ | ೯೨೬೫ | ೨೫೫೬೦ | ೧೩೬೩ | ೩೭೪೪ |
| | | | | (೧೪.೭೧) | (೧೪.೬೪) |
| ೮ | ಶಹಾಪುರ | ೧೮೩೭೬ | ೫೧೦೫೮ | ೨೪೮೮ | ೭೦೧೪ |
| | | | | (೧೩.೫೩) | (೧೩.೭೩) |
| ೯ | ಸುರಪುರ | ೧೮೧೨೭ | ೪೯೫೫೯ | ೨೩೬೦ | ೬೪೩೫ |
| | | | | (೧೩.೦೧) | (೧೨.೯೮) |
| ೧೦ | ಯಾದಗಿರಿ | ೧೪೮೨೬ | ೪೦೫೫೭ | ೧೫೨೩ | ೪೧೯೭ |
| | | | | (೧೦.೨೭) | (೧೦.೩೪) |
| ಒಟ್ಟು | | ೧೫೮೪೦೭ | ೪೩೫೪೬೭ | ೨೧೨೯೮ | ೫೮೫೩೭ |
| | | | | (೧೩.೪೪) | (೧೩.೪೪) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

ಈ ಮೇಲಿನ ಕೋಷ್ಟಕವು ಅರೆಮಧ್ಯಮ ಭೂ ಹಿಡುವಳಿಯ ಮಹಿಳೆಯರ ಒಡೆತನದ ಪ್ರಮಾಣವನ್ನು ತಿಳಿಸುತ್ತದೆ. ರಾಜ್ಯದಲ್ಲಿ ಅರೆಮಧ್ಯಮ ಭೂ ಹಿಡುವಳಿದಾರರು ಶೇ. ೧೮ರಷ್ಟಿದ್ದರೆ ಅವರ ಅಧೀನದಲ್ಲಿರುವ ಭೂಮಿಯು ರಾಜ್ಯದ ಶೇ. ೨೮ ಹೆಕ್ಟೇರುಗಳು. ಅಂದರೆ ರಾಜ್ಯದಲ್ಲಿ ಅರೆಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆ ಕಡಿಮೆಯಿದ್ದು ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಅಧಿಕವಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟು ಭೂ ಹಿಡುವಳಿಗಳಲ್ಲಿ ಅರೆಮಧ್ಯಮ ಭೂಮಿಯ ಒಡೆತನ ಹೊಂದಿದವರು ಶೇ.೨೮.೮೫ರಷ್ಟು. ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಶೇ.೩೧.೧೪ ಹೆಕ್ಟೇರುಗಳು. ಜಿಲ್ಲೆಯಲ್ಲಿ ಅರೆಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರಲ್ಲಿ ಶೇ.೧೩.೪೪ರಷ್ಟು ಮಹಿಳೆಯರು ಒಡೆತನ ಹೊಂದಿದ್ದರೆ ಉಳಿದ ಶೇ.೮೬.೫೬ರಷ್ಟು ಪುರುಷರು ಒಡೆತನವನ್ನು ಹೊಂದಿರುವರು. ಹಾಗೆಯೇ ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದಲ್ಲಿ ಶೇ.೧೩.೪೪ಹೆಕ್ಟೇರ್‌ನಷ್ಟು ಮಹಿಳೆಯರು ಭೂಮಿಯನ್ನು ಹೊಂದಿದ್ದರೆ, ಶೇ.೮೬.೫೬ ಹೆಕ್ಟೇರುಗಳಷ್ಟು ಪುರುಷರು ಭೂಮಿಯನ್ನು ತಮ್ಮ ವಶದಲ್ಲಿಟ್ಟುಕೊಂಡಿರುವರು. ಜಿಲ್ಲೆಯಲ್ಲಿ ಒಟ್ಟು ಪುರುಷ ಭೂ ಹಿಡುವಳಿದಾರರಲ್ಲಿ ಅರೆಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ.೨೯.೬೮ರಷ್ಟು ಇದ್ದಾರೆ. ಅದೆ ರೀತಿ ಒಟ್ಟು ಜಿಲ್ಲೆಯಲ್ಲಿಯೇ ಮಹಿಳೆಯರು ಒಡೆತನ ಹೊಂದಿದವರಲ್ಲಿ ಶೇ.೨೮.೬೯ರಷ್ಟು ಇರುವರು. ಜಿಲ್ಲೆಯಲ್ಲಿ ಭೂ ಹಿಡುವಳಿಯ ವಿಸ್ತೀರ್ಣದಲ್ಲಿ ಅರೆಮಧ್ಯಮ ಭೂ ಹಿಡುವಳಿಯ ವಿಸ್ತೀರ್ಣವು ಶೇ.೩೧ಹೆಕ್ಟೇರುಗಳಷ್ಟು. ಇದು ಜಿಲ್ಲೆಯಲ್ಲಿಯೇ ಒಟ್ಟು ಭೂ ಹಿಡುವಳಿಯ ವಿಸ್ತೀರ್ಣದಲ್ಲಿ ಅರೆಮಧ್ಯಮ ಹಿಡುವಳಿಗಳಲ್ಲಿ ಭೂಮಿಯು ಅಧಿಕವಾಗಿದೆ. ಹಾಗೆಯೇ ಜಿಲ್ಲೆಯ ಒಟ್ಟು ಪುರುಷ ಭೂ ಹಿಡುವಳಿದಾರರನ್ನು ನೋಡಿದಾಗ ಅರೆಮಧ್ಯಮ ಭೂ ಹಿಡುವಳಿಯಲ್ಲಿ ಅಧಿಕವಾಗಿ ಭೂಮಿಯ ವಿಸ್ತೀರ್ಣವನ್ನು ಅಂದರೆ ಶೇ.೩೦.೮೯ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿರುವರು. ಅಂತೆಯೇ ಒಟ್ಟು ಮಹಿಳಾ ಭೂ ಒಡೆತನ ಹೊಂದಿದವರಲ್ಲಿ ಅರೆಮಧ್ಯಮ ಭೂ ಹಿಡುವಳಿಯಲ್ಲಿ ಭೂಮಿಯ ವಿಸ್ತೀರ್ಣವನ್ನು ಅಧಿಕವಾಗಿ ಹೊಂದಿದ್ದಾರೆ. ಶೇ.೩೫.೧೧ ಹೆಕ್ಟೇರುಗಳಷ್ಟು ವಿಸ್ತೀರ್ಣದ ಭೂಮಿ ಇವರ ಅಧೀನದಲ್ಲಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ತಾಲೂಕುವಾರು ಅರೆಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರನ್ನು ಗಮನಿಸಿದಾಗ ಜೇವರ್ಗಿ ತಾಲೂಕಿನಲ್ಲಿ ಅಧಿಕವಾಗಿದ್ದಾರೆ. ಇಲ್ಲಿ ಮಹಿಳೆಯರ ಪ್ರಮಾಣ ಶೇ. ೧೩.೪೮ರಷ್ಟು ಇದ್ದು, ಶೇ. ೮೬.೫೨ರಷ್ಟು ಪುರುಷರು ಒಡೆತನವನ್ನು ಹೊಂದಿದ್ದಾರೆ. ಹಾಗೆಯೇ ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂ ಒಡೆತನ ಹೊಂದಿರುವ ತಾಲೂಕು ಸೇಡಂ. ಇಲ್ಲಿ ಮಹಿಳೆಯರು ಶೇ. ೧೪.೭೧ರಷ್ಟು ಒಡೆತನ ಹೊಂದಿದರೆ, ಶೇ. ೮೫.೨೯ರಷ್ಟು ಪುರುಷರು ಒಡೆತನವನ್ನು ಹೊಂದಿರುವುದು ಕಂಡು ಬಂದಿದೆ.

ಅರೆಮಧ್ಯಮ ಭೂ ಹಿಡುವಳಿಯಲ್ಲಿ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಜೇವರ್ಗಿ. ಇಲ್ಲಿ ಮಹಿಳೆಯರು ಶೇ. ೧೩.೫೪ ಹೆಕ್ಟೇರುಗಳಷ್ಟು ಭೂಮಿಯ ಒಡತಿಯರಾದರೆ,

ಶೇ.೮೬.೫೪ ಹೆಕ್ಟೇರುಗಳಷ್ಟು ಪುರುಷರು ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು. ಅರೆಮಧ್ಯಮ ಭೂ ಹಿಡುವಳಿಯಲ್ಲಿ ಜೇವರ್ಗಿ ತಾಲೂಕು ಭೂ ಒಡೆತನದ ಸಂಖ್ಯೆಯಲ್ಲಿ ಮತ್ತು ಭೂಮಿಯ ವಿಸ್ತೀರ್ಣದಲ್ಲಿ ಜಿಲ್ಲೆಯಲ್ಲಿಯೇ ಅಧಿಕವಾಗಿರುವುದನ್ನು ಗಮನಿಸಬಹುದು. ಅಂತೆಯೇ ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂಮಿಯ ವಿಸ್ತೀರ್ಣವುಳ್ಳ ತಾಲೂಕು ಸೇಡಂ. ಇಲ್ಲಿ ಕೂಡ ಮಹಿಳೆಯರು ಶೇ.೧೪.೬೪ಹೆಕ್ಟೇರುಗಳಷ್ಟು ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದರೆ, ಶೇ.೮೫.೩೬ ಹೆಕ್ಟೇರುಗಳಷ್ಟು ಭೂಮಿಯ ವಿಸ್ತೀರ್ಣದ ಮಾಲೀಕರು ಪುರುಷರಾಗಿದ್ದಾರೆ. ಜೇವರ್ಗಿ ತಾಲೂಕಿನಲ್ಲಿ ಒಡೆತನ ಹೊಂದಿದವರ ಪ್ರಮಾಣ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದ್ದರು ಕೂಡ ಇಲ್ಲಿ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆಯ ಪ್ರಮಾಣವು ಕಡಿಮೆಯಿದೆ. ಜೊತೆಗೆ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಸಂಖ್ಯೆಯ ಪ್ರಮಾಣಕ್ಕಿಂತ ಕಡಿಮೆಯಿರುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿಯೇ ಸೇಡಂ ತಾಲೂಕು ಸಹ ಸಂಖ್ಯೆ ಮತ್ತು ವಿಸ್ತೀರ್ಣದಲ್ಲಿ ಕಡಿಮೆಯಿದ್ದರೂ ಮಹಿಳಾ ಒಡತಿಯರ ಸಂದರ್ಭದಲ್ಲಿ ಅವರ ಒಡೆತನದ ಸಂಖ್ಯೆಗಿಂತ ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ  ಕಡಿಮೆಯಿರುವುದು ಕಂಡುಬರುತ್ತದೆ.

ಈ ಹಿಡುವಳಿಯಲ್ಲಿ ಜಿಲ್ಲೆಯಲ್ಲಿಯೇ ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಅಧಿಕವಾಗಿ ಭೂ ಒಡತಿಯರಾದರೆ, ಯಾದಗಿರಿ ತಾಲೂಕಿನಲ್ಲಿ ಪುರುಷರು ಅಧಿಕವಾಗಿ ಭೂ ಒಡೆತನ ಹೊಂದಿದವರಾಗಿದ್ದಾರೆ. ಜಿಲ್ಲೆಯಲ್ಲಿ ಯಾದಗಿರಿ ತಾಲೂಕಿನಲ್ಲಿ ಮಹಿಳೆಯರು ಅತಿ ಕಡಿಮೆ ಸಂಖ್ಯೆಯಲ್ಲಿ ಒಡತಿಯರಾಗಿರುವುದನ್ನು ಕಾಣಬಹುದು. ಆದರೆ ಚಿಂಚೋಳಿ ತಾಲೂಕಿನಲ್ಲಿ ಪುರುಷರು ಅತೀ ಕಡಿಮೆ ಸಂಖ್ಯೆಯಲ್ಲಿ ಭೂಮಿಯ ಒಡೆಯರಾಗಿರುವರು. ಜಿಲ್ಲೆಯಲ್ಲಿಯೇ ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಅಧಿಕ ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು. ಹಾಗೆಯೇ ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಯಾದಗಿರಿ. ಪುರುಷ ಹಿಡುವಳಿದಾರರಲ್ಲಿ ಗಮನಿಸಿದಾಗ ಅಧಿಕ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಯಾದಗಿರಿ, ಆದರೆ ಪುರುಷರಲ್ಲಿ ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಚಿಂಚೋಳಿ.

ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿರುವ ತಾಲೂಕುಗಳನ್ನು ಗಮನಿಸಿದಾಗ ಚಿತ್ತಾಪೂರ, ಶಹಪುರ, ಯಾದಗಿರಿ ತಾಲೂಕುಗಳಲ್ಲಿ ಮಹಿಳೆಯರ ಒಡೆತನದ ಸಂಖ್ಯೆಗೆ ಹೋಲಿಸಿದರೆ ಅವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕವಾಗಿದೆ. ಈ ಮೂರು ತಾಲೂಕುಗಳಲ್ಲಿ ಪುರುಷರು ಒಡೆತನ ಹೊಂದಿರುವ ಸಂಖ್ಯೆ ಮತ್ತು  ಭೂಮಿಯ ವಿಸ್ತೀರ್ಣವನ್ನು ಗಮನಿಸಿದಾಗ ಮಹಿಳೆಯರ ಒಡೆತನದ ಸಂದರ್ಭದಲ್ಲಿ ಅವರ ಒಡೆತನದ ಸಂಖ್ಯೆಯು ತೀರ ಕಡಿಮೆಯಿದ್ದರೂ ಕೂಡ ಭೂಮಿಯ ವಿಸ್ತೀರ್ಣದ ಪ್ರಮಾಣದಲ್ಲಿ ಸ್ವಲ್ಪ ಅಧಿಕವಾಗಿದೆ. ಈ ತಾಲೂಕುಗಳಲ್ಲಿ ಮಹಿಳೆಯರಿಗೆ ಭೂಮಿಯನ್ನು ಕೊಡುವಲ್ಲಿ ಕುಟುಂಬವು ಸ್ವಲ್ಪ ಮುಂದೆ ಬಂದಿರುವುದು ಕಂಡುಬರುತ್ತದೆ. ಇಲ್ಲಿ

ಮಹಿಳೆಯು ತಾರತಮ್ಯಕ್ಕೆ ಒಳಗಾಗದೆ ಭೂ ವಿಸ್ತೀರ್ಣ ಹೊಂದುವಲ್ಲಿ ಪುರುಷರಿಗೆ ಸ್ವಲ್ಪ ಮಟ್ಟಿಗಾದರೂ ಸರಿಸಮಾನರಾಗಿರುವುದನ್ನು ಕಾಣಬಹುದಾಗಿದೆ.

ಜಿಲ್ಲೆಯ ಜೇವರ್ಗಿ ತಾಲೂಕು ಅಧಿಕವಾಗಿ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಹೊಂದಿದ್ದರೂ ಮಹಿಳೆಯರ ಭೂ ಒಡೆತನದ ಸಂದರ್ಭ ಬಂದಾಗ ಅಲ್ಲಿ ಕೇವಲ ೧೩.೪೮ ಪ್ರತಿಶತದಷ್ಟು ಮಹಿಳೆಯರಿಗೆ ಭೂ ಒಡೆತನದ ಹಕ್ಕು ದೊರೆತಿದೆ. ಹಾಗೆಯೇ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಶೇ. ೧೩.೪೬ ಹೆಕ್ಟೇರುಗಳು ಮಾತ್ರ. ಇಲ್ಲಿ ಒಟ್ಟು ಒಡೆತನದಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಯರ ಪ್ರಮಾಣವು ಕಡಿಮೆಯಿದೆ. ಜೊತೆಗೆ ಭೂಮಿಯ ವಿಸ್ತೀರ್ಣದಲ್ಲೂ ಈ ತಾಲೂಕು ಅಧಿಕವಾಗಿದ್ದರೂ ಮಹಿಳೆಯರು ಭೂ ಒಡೆತನದ ಸಂಖ್ಯೆಗೆ ಅನುಗುಣವಾಗಿ ಭೂಮಿಯ ವಿಸ್ತೀರ್ಣವನ್ನು ಪಡೆಯದೆ ಕಡಿಮೆ ಭೂಮಿಯನ್ನು ಹೊಂದಿದ್ದಾರೆ. ಸೇಡಂ ಈ ತಾಲೂಕಿನಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆಯಿದ್ದರೂ ಜೇವರ್ಗಿ ತಾಲೂಕಿಗಿಂತಲೂ ಇಲ್ಲಿ ಅಧಿಕವಾಗಿ ಮಹಿಳೆಯರು ಭೂಮಿಯನ್ನು ಪಡೆದಿರುವರು. ಸೇಡಂ ತಾಲೂಕಿನಲ್ಲಿ ಭೂ ಒಡೆತನದ ಸಂಖ್ಯೆಗೂ ಮತ್ತು ಭೂಮಿಯ ವಿಸ್ತೀರ್ಣಕ್ಕೂ ವ್ಯತ್ಯಾಸವಿದ್ದರೂ ಕೂಡ ಜೇವರ್ಗಿ ತಾಲೂಕಿನಷ್ಟು ತಾರತಮ್ಯ ಕಂಡುಬರುವುದಿಲ್ಲ. ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಜಿಲ್ಲೆಯಲ್ಲಿಯೇ ಅಧಿಕವಾಗಿ ಭೂಮಿಯ ಒಡೆತನ ಹೊಂದಿರುವುದನ್ನು ಈ ಮೊದಲೇ ತಿಳಿಸಿದ್ದೇವೆ. ಆದರೆ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಭೂ ಒಡೆತನದ ಸಂಖ್ಯೆಯ ಪ್ರಮಾಣಕ್ಕಿಂತ ಕಡಿಮೆಯಿದೆ. ಅಫಜಲಪೂರ ತಾಲೂಕಿನಲ್ಲಿ ಭೂ ಒಡೆತನ ಹೊಂದಿರುವ ಸಂಖ್ಯೆಯು ಕಡಿಮೆಯಿದೆ ಈ ಸಂಖ್ಯೆಗಿಂತಲೂ ಭೂ ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣ ಇನ್ನು ಕಡಿಮೆ ಇರುವುದನ್ನು ಕಾಣಬಹುದು. ಆಳಂದ, ಗುಲಬರ್ಗಾ ಮತ್ತು ಸುರಪುರ ತಾಲೂಕುಗಳಲ್ಲಿ ಮಹಿಳೆಯರು ಕಡಿಮೆ ಪ್ರಮಾಣದಲ್ಲಿ ಭೂಮಿಯ ಮಾಲೀಕರಾಗಿದ್ದರೂ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ತೀರ ಕಡಿಮೆಯಿರುವುದನ್ನು ಗಮನಿಸಬಹುದು.

ಜಿಲ್ಲೆಯಲ್ಲಿಯೇ ಐದು ತರಹದ ಭೂ ಹಿಡುವಳಿಗಳಲ್ಲಿ ಮಹಿಳೆಯರು ಭೂ ಒಡೆತನ ಹೊಂದಿರುವುದರಲ್ಲಿ ಅರೆ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿರುವ ಸಂಖ್ಯೆಯು ಅಧಿಕವಾಗಿದೆ. ಮತ್ತು ಮಹಿಳೆಯರು ಜಿಲ್ಲೆಯಲ್ಲಿಯೇ ಅಧಿಕ ಭೂಮಿಯ ವಿಸ್ತೀರ್ಣವನ್ನು ಪಡೆದಿದ್ದಾರೆ. ಆದರೆ ಪುರುಷರಿಗೆ ಹೋಲಿಸಿದಾಗ ಮಹಿಳೆಯರ ಒಡೆತನದ ಸಂಖ್ಯೆಯ ಪ್ರಮಾಣವು ಕಡಿಮೆಯಿರುವುದರ ಜೊತೆಗೆ ಅವರ ಹೆಸರಿನ ಭೂಮಿಯ ಪ್ರಮಾಣವು ತೀರ ಕಡಿಮೆಯಿದೆ. ಈ ಎಲ್ಲಾ ಹಿಡುವಳಿಗಳಲ್ಲೂ ಮಹಿಳೆಯರು ಭೂ ಒಡೆತನ ಹೊಂದಿರುವ ಪ್ರಮಾಣವು ಕಡಿಮೆಯಿದ್ದರೂ ಅತಿ ಸಣ್ಣ ಮತ್ತು ಸಣ್ಣ ಭೂ ಹಿಡುವಳಿಗಳಲ್ಲಿ ಮಹಿಳೆಯ ಪ್ರಮಾಣವು ಪುರುಷರಿಗೆ ಹೋಲಿಸಿದರೆ ಕಡಿಮೆಯಿದ್ದರೂ ಮಹಿಳೆಯರು ಹೊಂದಿರುವ ಒಡೆತನದ ಪ್ರಮಾಣದಲ್ಲಿ ಅವರ ಸಂಖ್ಯೆಯು ಅಧಿಕವಾಗಿದೆ ಮತ್ತು ಅವರು ಹೊಂದಿರುವ ಭೂಮಿಯ ವಿಸ್ತೀರ್ಣವು ಸಂಖ್ಯೆಗಿಂತ ಅಧಿಕವಾಗಿದೆ. ಆದರೆ ಅರೆ ಮಧ್ಯಮ ಭೂ

ಹಿಡುವಳಿಯಲ್ಲಿ ಪುರುಷರಿಗೆ ಹೋಲಿಸಿದಾಗ ಮಹಿಳೆಯರ ಪ್ರಮಾಣ ಕಡಿಮೆಯಿರುವುದರ ಜೊತೆಗೆ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಭೂ ಒಡೆತನದ ಸಂಖ್ಯೆಗಿಂತ ಕಡಿಮೆಯಿದೆ. ಆದರೆ ಒಟ್ಟು ಮಹಿಳಾ ಭೂ ಒಡೆತನದಲ್ಲಿ ಈ ಹಿಡುವಳಿಯ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಅಧಿಕವಾಗಿದೆ

ಒಟ್ಟಾರೆಯಾಗಿ ಇಲ್ಲಿ ಸ್ಪಷ್ಟವಾಗುವುದೇನೆಂದರೆ, ೨ ರಿಂದ ೪ ಹೆಕ್ಟೇರುಗಳಷ್ಟು ಭೂಮಿಯ ಒಡೆತನ ಪುರುಷರ ಪಾಲಾಗಿದೆ. ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕವಾದಂತೆ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆಯ ಪ್ರಮಾಣ ಮತ್ತು ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣ ಕಡಿಮೆಯಾದಂತೆ, ಪುರುಷರ ಒಡೆತನದ ಪ್ರಮಾಣ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ. ಇದಕ್ಕೆಲ್ಲ ಮೂಲ ಕಾರಣ ಪುರುಷ ಪ್ರಧಾನ ಸಮಾಜ ವ್ಯವಸ್ಥೆ. ಪಿತೃ ಪ್ರಧಾನ ಮೌಲ್ಯಗಳು ಕುಟುಂಬದಲ್ಲಿ ಮಹಿಳೆಯರ ಮೇಲೆ ಪ್ರಭಾವ ಬೀರುತ್ತಲಿರುವುದರಿಂದ ಅವರು ಆಸ್ತಿಯಿಂದ ವಂಚಿತರಾಗಿ ಅವರೇ ಆಸ್ತಿಯ ರೂಪ ತಾಳುವಂತಾಗಿದೆ. ಅಲ್ಲದೆ ಅಧಿಕಾರವೆಲ್ಲವೂ ಪುರುಷನ ಕೈಯಲ್ಲಿ ಇದ್ದರೆ ಕುಟುಂಬದಲ್ಲಾಗಲಿ, ಸಮಾಜದಲ್ಲಾಗಲಿ ಅವರ ಘನತೆ, ಗೌರವಗಳು ಹೆಚ್ಚಾಗುವುದೆಂಬ ನಂಬಿಕೆಯಿಂದ ಮಹಿಳೆಗೆ ಭೂ ಒಡೆತನ ನೀಡದೆ ದೂರವೆ ಇರಿಸಲಾಗಿದೆ. ಇದರಿಂದಾಗಿ ಮಹಿಳೆಯರು ಒಡೆತನ ಹೊಂದುವಲ್ಲಿ ಲಿಂಗ ತಾರತಮ್ಯವನ್ನು ಅನುಭವಿಸುತ್ತಿರುವರು.

**೭.೫. ಮಧ್ಯಮ ಭೂ ಹಿಡುವಳಿಯ ವಿವರ**

ಅರೆ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರ ಪರಿಸ್ಥಿತಿಗಿಂತ ಸ್ವಲ್ಪ ಉತ್ತಮವಾದ ಪರಿಸ್ಥಿತಿಯನ್ನು ಮಧ್ಯಮ ಭೂ ಹಿಡುವಳಿ ಒಡೆತನ ಹೊಂದಿದವರದಾಗಿದೆ ಎಂದು ಹೇಳಬಹುದು. ಇವರು ನಾಲ್ಕರಿಂದ ಹತ್ತು ಹೆಕ್ಟೇರ್‌ನಷ್ಟು  ಭೂಮಿಯ ಒಡೆತನವನ್ನು ಹೊಂದಿದವರಾಗಿರುತ್ತಾರೆ. ಇವರ ಜೀವನವು ಮಧ್ಯಮ ಗತಿಗಿಂತ ಸ್ವಲ್ಪ ಉತ್ತಮವಾಗಿ ಸಾಗುವುದು. ಇವರು ಕೃಷಿ ಪ್ರಗತಿಯನ್ನು ಹೊಂದಲು ಆಧುನಿಕ ಯಂತ್ರೋಪಕರಣಗಳನ್ನು ಉಪಯೋಗಿಸುತ್ತಾರೆ. ಇವರು ಕೂಲಿ ಆಳಿನಿಂದ ಕೆಲಸ ಮಾಡಿಸುವರು. ಅಲ್ಲದೆ ಇವರು ಸಂಪೂರ್ಣವಾಗಿ ವ್ಯವಸಾಯವನ್ನು ನಂಬಿದವರಾಗಿರುವರು. ಇದರ ಜೊತೆಗೆ ಕೆಲವೊಂದು ಸಂದರ್ಭದಲ್ಲಿ ಬೇರೆ ಬೇರೆ ಕೆಲಸಗಳಲ್ಲಿ ತೊಡಗಿಸಿಕೊಳ್ಳುವರು. ಗುಲಬರ್ಗಾ ಜಿಲ್ಲೆಯಂತಹ ಒಣ ವಾತಾವರಣದಲ್ಲಿ ಹತ್ತು ಹೆಕ್ಟೇರ್‌ನಷ್ಟು ಮತ್ತು ಅದಕ್ಕೂ ಹೆಚ್ಚು ಭೂಮಿ ಹೊಂದಿದ್ದರೂ ಕೂಡ ಅವರು ಅಷ್ಟೊಂದು ಅಭಿವೃದ್ಧಿ ಹೊಂದಿರುವುದಿಲ್ಲ. ಕುಟುಂಬದಲ್ಲಿ ಓರ್ವ ಸರ್ಕಾರಿ ನೌಕರ ಇರುವುದರಿಂದ ಮತ್ತು ಸರ್ಕಾರದಿಂದ ಸಾಲ ಪಡೆಯುವ ಸಲುವಾಗಿ ಮಧ್ಯಮ ಭೂ ಹಿಡುವಳಿಯ ಮೇಲೆ ಒಡೆತನ ಹೊಂದಿದವರು ಮಹಿಳೆಯರ ಹೆಸರಿನಲ್ಲಿ ಭೂಮಿಯನ್ನು ವರ್ಗಾಯಿಸುತ್ತಾರೆ. ಈ ಹಿಡುವಳಿಯಲ್ಲಿ ಒಡೆತನ ಹೊಂದಿದ ಮಹಿಳೆಯರು ಕೃಷಿ ಕಾರ್ಮಿಕರಾಗಿ ಕಂಡುಬರುವುದಿಲ್ಲ. ಕಾರಣ ಇವರ ಜೀವನ ಮಟ್ಟವು ಉತ್ತಮವಾಗಿರುವುದು. ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರ ಸ್ಥಿತಿಗತಿಯನ್ನು ಅರಿಯಲು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

## ಕೋಷ್ಟಕ–೫

## ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ವಿವರ: ಮಧ್ಯಮ ಭೂ ಹಿಡುವಳಿಗಳು

(೪–೧೦ ಹೆಕ್ಟೇರು)

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರ.ಸಂ | ತಾಲೂಕುಗಳು | ಒಟ್ಟು ಭೂ ಒಡೆತನ ಹೊಂದಿದವರು | | ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | **ಅಫಜಲಪೂರ** | ೬೫೦೨ | ೩೯೧೨೭ | ೮೮೪ | ೫೧೯೦ |
| | | | | (೧೩.೫೯) | (೧೩.೨೬) |
| ೨ | **ಆಳಂದ** | ೮೨೧೪ | ೪೮೪೨೯ | ೮೨೪ | ೪೮೧೯ |
| | | | | (೧೦.೦೩) | (೯.೯೫) |
| ೩ | **ಚಿಂಚೋಳಿ** | ೫೭೩೮ | ೩೩೮೫೦ | ೮೨೨ | ೪೮೪೪ |
| | | | | (೧೪.೩೨) | (೧೬.೨೨) |
| ೪ | **ಚಿತ್ತಾಪೂರ** | ೮೧೯೩ | ೪೮೪೦೧ | ೧೧೦೫ | ೬೫೨೫ |
| | | | | (೧೩.೪೮) | (೧೩.೪೮) |
| ೫ | **ಗುಲಬರ್ಗಾ** | ೮೭೯೬ | ೫೨೬೪೨ | ೧೧೧೭ | ೬೬೨೨ |
| | | | | (೧೨.೬೯) | (೧೨.೫೭) |
| ೬ | **ಜೇವರ್ಗಿ** | ೯೮೧೮ | ೫೮೭೭೭ | ೧೨೪೮ | ೭೩೩೩ |
| | | | | (೧೨.೭೧) | (೧೨.೪೭) |
| ೭ | **ಸೇಡಂ** | ೪೬೯೪ | ೨೭೬೦೮ | ೭೧೭ | ೪೧೮೬ |
| | | | | (೧೫.೨೭) | (೧೫.೧೬) |
| ೮ | **ಶಹಾಪುರ** | ೭೩೮೬ | ೪೩೩೭೮ | ೯೮೪ | ೫೮೧೬ |
| | | | | (೧೩.೩೨) | (೧೩.೪೦) |
| ೯ | **ಸುರಪುರ** | ೮೪೮೬ | ೪೮೪೯೬ | ೧೧೦೫ | ೬೧೩೮ |
| | | | | (೧೩.೦೨) | (೧೨.೬೫) |
| ೧೦ | **ಯಾದಗಿರಿ** | ೫೮೨೧ | ೩೩೫೭೪ | ೬೬೫ | ೩೮೫೨ |
| | | | | (೧೧.೪೨) | (೧೧.೪೭) |
| **ಒಟ್ಟು** | | **೭೩೬೪೮** | **೪೩೪೨೮೨** | **೯೪೭೧** | **೫೫೩೨೫** |
| | | | | (೧೨.೮೫) | (೧೨.೭೩) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

೨೦೦೦-೨೦೦೧ರ ಕೃಷಿ ಗಣತಿಯ ಪ್ರಕಾರ ಮಧ್ಯಮ ಭೂ ಹಿಡುವಳಿಯ ಕೋಷ್ಟಕವನ್ನು ಗಮನಿಸಿದಾಗ ಜಿಲ್ಲೆಯಲ್ಲಿಯೇ ಜೇವರ್ಗಿ ತಾಲೂಕಿನಲ್ಲಿ ಭೂ ಒಡೆತನ ಹೊಂದಿದವರ ಸಂಖ್ಯೆಯು ಹೆಚ್ಚಾಗಿದೆ. ಹಾಗೆಯೇ ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ಈ ಹಿಡುವಳಿಯಲ್ಲಿ ಜೇವರ್ಗಿ ತಾಲೂಕು ಅತಿ ಹೆಚ್ಚು ಭೂಮಿಯ ವಿಸ್ತೀರ್ಣವನ್ನು ಹೊಂದಿದೆ. ಸೇಡಂ ತಾಲೂಕು ಅತಿ ಕಡಿಮೆ ಭೂ ಒಡೆತನ ಹೊಂದಿದವರ ಸಂಖ್ಯೆ ಮತ್ತು ಅತಿ ಕಡಿಮೆ ಭೂಮಿಯ ವಿಸ್ತೀರ್ಣವನ್ನು ಹೊಂದಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ತಾಲೂಕುವಾರು ಮಹಿಳೆಯರ ಒಡೆತನದ ಪ್ರಮಾಣವನ್ನು ಗಮನಿಸಿದಾಗ ಸೇಡಂ ತಾಲೂಕಿನಲ್ಲಿ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರ ಸಂಖ್ಯೆಯು ಅಧಿಕವಾಗಿದೆ. ಆಳಂದ ತಾಲೂಕಿನಲ್ಲಿ ಮಹಿಳೆಯರ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಿದೆ. ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಜಿಲ್ಲೆಯಲ್ಲಿಯೇ ಮಧ್ಯಮ ಭೂ ಹಿಡುವಳಿಯಲ್ಲಿ ಅತಿ ಹೆಚ್ಚು ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಚಿಂಚೋಳಿಯಾದರೆ ಮಹಿಳೆಯರು ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಆಳಂದ.

ಜಿಲ್ಲೆಯಲ್ಲಿಯೇ ಆಳಂದ ತಾಲೂಕಿನಲ್ಲಿ ಮಧ್ಯಮ ಭೂ ಹಿಡುವಳಿಯಲ್ಲಿ ಅತಿ ಹೆಚ್ಚು ಪುರುಷರು ಅಂದರೆ ಶೇ. ೮೯.೬೭ರಷ್ಟು ಪುರುಷರು ಒಡೆತನ ಹೊಂದಿದ್ದರೆ ಇಲ್ಲಿ ಕೇವಲ ಶೇ. ೧೦.೦೩ರಷ್ಟು ಮಹಿಳೆಯರು ಭೂಮಿಯ ಮಾಲೀಕರಾಗಿದ್ದಾರೆ. ಜಿಲ್ಲೆಯಲ್ಲಿಯೇ ಸೇಡಂ ತಾಲೂಕಿನಲ್ಲಿ ಅತಿ ಕಡಿಮೆ ಪುರುಷರು ತಮ್ಮ ಹೆಸರಿನಲ್ಲಿ ಭೂಮಿಯನ್ನು ಹೊಂದಿದ್ದಾರೆ, ಆದರೆ ಈ ತಾಲೂಕಿನಲ್ಲಿ ಜಿಲ್ಲೆಯಲ್ಲಿಯೇ ಮಹಿಳೆಯರ ಒಡೆತನದ ಪ್ರಮಾಣ ಅಧಿಕವಾಗಿದೆ. ಭೂ ಹಿಡುವಳಿಯ ವಿಸ್ತೀರ್ಣವನ್ನು ಗಮನಿಸಿದಾಗ ಆಳಂದ ತಾಲೂಕಿನಲ್ಲಿ ಶೇ. ೯೦.೦೫ ಹೆಕ್ಟೇರುಗಳಷ್ಟು ಪುರುಷರು ಅಧಿಕ ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದರೆ ಜಿಲ್ಲೆಯಲ್ಲಿಯೇ ಈ ತಾಲೂಕಿನಲ್ಲಿ ಮಹಿಳೆಯರು ಶೇ. ೯.೯೫ ಹೆಕ್ಟೇರುಗಳಷ್ಟು ಭೂಮಿಯ ವಿಸ್ತೀರ್ಣದಲ್ಲಿ ಅತಿ ಕಡಿಮೆ ಭೂಮಿಯನ್ನು ಹೊಂದಿರುವರು. ಭೂಮಿಯ ವಿಸ್ತೀರ್ಣದಲ್ಲಿ ಪುರುಷರು ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಪಡೆದಿರುವ ತಾಲೂಕು ಚಿಂಚೋಳಿ. ಆದರೆ ಈ ತಾಲೂಕಿನಲ್ಲಿ ಜಿಲ್ಲೆಯಲ್ಲಿಯೇ ಮಹಿಳೆಯರು ಅಧಿಕ ಭೂಮಿಯ ವಿಸ್ತೀರ್ಣವನ್ನು ಪಡೆದಿರುವರು.

ಜಿಲ್ಲೆಯಲ್ಲಿಯೇ ಜೇವರ್ಗಿ ತಾಲೂಕು ಭೂ ಒಡೆತನದ ಸಂಖ್ಯೆಯಲ್ಲಿ ಮತ್ತು ಭೂಮಿಯ ವಿಸ್ತೀರ್ಣದಲ್ಲಿ ಅಧಿಕವಾಗಿದ್ದರೂ ಮಹಿಳೆಯರ ಒಡೆತನದ ಸಂದರ್ಭದಲ್ಲಿ ನೋಡಿದಾಗ ಮಹಿಳೆಯರ ಒಡೆತನದ ಪ್ರಮಾಣವು ಕಡಿಮೆಯಿದೆ. ಆದರೆ ಅವರ ಹೆಸರಿನಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಇನ್ನೂ ಕಡಿಮೆ ಇದೆ. ಇಲ್ಲಿ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವು ತೀರ ಕಡಿಮೆಯಿರುವುದನ್ನು ಗಮನಿಸಬಹುದು. ಹಾಗೆಯೇ ಆಳಂದ ತಾಲೂಕಿನಲ್ಲಿ ಮಹಿಳೆಯರು ಭೂ ಒಡತಿಯರಾದರೆ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣ ಕೇವಲ ಶೇ. ೯.೯೫ ಹೆಕ್ಟೇರುಗಳು ಮಾತ್ರ. ಅಫಜಲಪೂರ, ಗುಲಬರ್ಗಾ, ಜೇವರ್ಗಿ, ಸೇಡಂ, ಸುರಪುರ ಈ ಎಲ್ಲ ತಾಲೂಕುಗಳಲ್ಲಿ ಮಹಿಳೆಯರ ಭೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ಅವರ ಒಡೆತನದಲ್ಲಿರುವ ಭೂಮಿಯ ಪ್ರಮಾಣವು ಕಡಿಮೆಯಿದೆ. ಇಲ್ಲಿ ಭೂಮಿಯನ್ನು ಪಡೆಯುವಲ್ಲಿ ಲಿಂಗತಾರತಮ್ಯವಾಗಿರುವುದನ್ನು ಗಮನಿಸಬಹುದು. ಪುರುಷರಿಗೆ ಹೋಲಿಸಿದಾಗ ಮಹಿಳೆಯರ ಒಡೆತನದ ಪ್ರಮಾಣ ತೀರ ಕಡಿಮೆಯಿದ್ದರೂ, ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವಂತು ಇನ್ನೂ ಕಡಿಮೆಯಿದೆ. ಇದಕ್ಕೆ ಮೂಲ ಕಾರಣ ಮಹಿಳೆಯರು ಸಂಪ್ರದಾಯ, ಕಟ್ಟುಪಾಡುಗಳಿಂದ ಹೊರಬರದ ಹಾಗೆ ವ್ಯವಸ್ಥೆ ರೂಪಿಸಿದೆ. ಮತ್ತು ಮಹಿಳೆಯರನ್ನು ನಾಲ್ಕು ಗೋಡೆಗಳ ಮಧ್ಯ

ಬಂಧಿತರನ್ನಾಗಿಸಿದೆ ನಮ್ಮ ಸಮಾಜ ವ್ಯವಸ್ಥೆ. ಇದರಿಂದ ಮಹಿಳೆಯರಿಗೆ ಪ್ರಪಂಚದ ಜ್ಞಾನ ಇಲ್ಲದಂತಾಗಿದೆ. ಮಹಿಳೆಯು ತಮಗಿರುವ ಮೂಲಭೂತ ಕಾನೂನು ಹಕ್ಕುಗಳನ್ನು ಅರಿಯದೇ ಅವುಗಳಿಂದಾಗುವ ಪ್ರಯೋಜನಗಳಿಂದ ವಂಚಿತಳಾಗಿದ್ದಾಳೆ.

ಆದರೆ ಕೆಲವು ತಾಲೂಕುಗಳಲ್ಲಿ ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಅವರ ಮಾಲೀಕತ್ವಕ್ಕೆ ಒಳಪಟ್ಟ ಭೂಮಿಯ ಪ್ರಮಾಣವು ಅಧಿಕವಿದೆ. ಆ ತಾಲೂಕುಗಳಲ್ಲಿ ಚಿಂಚೋಳಿ ತಾಲೂಕು ಒಂದಾಗಿದೆ. ಇಲ್ಲಿ ಮಹಿಳೆಯರು ಒಡೆತನ ಹೊಂದಿರುವ ಸಂಖ್ಯೆ ಶೇ. ೧೪.೩೨ ರಷ್ಟಿದ್ದರೆ ಅವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣವು ಶೇ. ೧೬.೨೨ ಹೆಕ್ಟೇರುಗಳು. ಶಹಾಪುರ ತಾಲೂಕು, ಯಾದಗಿರಿ ತಾಲೂಕು ಈ ಮೂರು ತಾಲೂಕುಗಳಲ್ಲಿ ಸ್ತ್ರೀಯರು ಒಡೆತನ ಹೊಂದಿರುವ ಸಂಖ್ಯೆಗಿಂತ ಅವರ ಒಡೆತನಕ್ಕೆ ಒಳಪಟ್ಟಿರುವ ಭೂಮಿಯ ಪ್ರಮಾಣವು ಅಧಿಕವಾಗಿದೆ. ಹಾಗೆಯೇ ಚಿತ್ತಾಪೂರ ತಾಲೂಕಿನಲ್ಲಿ ಶೇ. ೧೩.೪೮ ಮಹಿಳೆಯರು ಒಡೆತನ ಹೊಂದಿದ್ದರೆ, ಅವರ ಒಡೆತನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣ ಶೇ. ೧೩.೪೮ ಹೆಕ್ಟೇರುಗಳು. ಇಲ್ಲಿ ಮಹಿಳೆಯರು ಭೂ ಒಡೆತನದ ಸಂಖ್ಯೆಗೆ ಅನುಗುಣವಾಗಿ ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು. ಈ ನಾಲ್ಕು ತಾಲೂಕುಗಳಲ್ಲಿ ಮಹಿಳೆಯರು ಭೂ ಒಡೆತನ ಹೊಂದುವಲ್ಲಿ ಸ್ವಲ್ಪ ಮಟ್ಟಿಗಾದರೂ ಯಶಸ್ವಿಯಾಗಿದ್ದಾರೆ.

ಮಧ್ಯಮ ಭೂ ಹಿಡುವಳಿಯಲ್ಲಿ ಮಹಿಳೆಯರು ಒಡೆತನ ಹೊಂದಿರುವ ಪ್ರಮಾಣ ಶೇ. ೧೨.೮೫ ಇದ್ದರೆ, ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣ ಶೇ. ೧೨.೭೩ ಹೆಕ್ಟೇರುಗಳು. ಭೂಮಿಯ ವಿಸ್ತೀರ್ಣದಲ್ಲಿ ತಾಲೂಕಿನಿಂದ ತಾಲೂಕಿಗೆ ವ್ಯತ್ಯಾಸವಿದ್ದರೂ ಒಟ್ಟು ವಿಸ್ತೀರ್ಣದಲ್ಲಿ ಭೂ ಒಡೆತನದ ಸಂಖ್ಯೆಗೆ ಸರಿಸಮಾನವಾಗಿ ಭೂಮಿಯ ವಿಸ್ತೀರ್ಣ ಇರದೆ ಇರುವುದು ಕಂಡು ಬರುತ್ತದೆ. ಆದರೆ ಪುರುಷರು ಶೇ. ೮೭.೧೫ರಷ್ಟು ಭೂ ಒಡೆಯರಾಗಿದ್ದು ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣ ಕೂಡ ಶೇ. ೮೭.೨೭ ಹೆಕ್ಟೇರುಗಳು. ಪುರುಷರಲ್ಲಿ ಭೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ವಿಸ್ತೀರ್ಣದ ಪ್ರಮಾಣ ಅಧಿಕವಿದೆ. ಆದರೆ ಮಹಿಳೆಯರ ಭೂ ಒಡೆತನದ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಒಟ್ಟಿನಲ್ಲಿ ಪುರುಷರ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಮಹಿಳೆಯರಿಗೆ ಹೋಲಿಸಿದರೆ ಇವರ ಪ್ರಮಾಣ ಅಧಿಕವಾಗಿದೆ. ಗುಲಬರ್ಗಾ ಜಿಲ್ಲೆಯ ಐದು ತರಹದ ಭೂ ಹಿಡುವಳಿಗಳಲ್ಲಿ ಮಧ್ಯಮ ಭೂ ಹಿಡುವಳಿಯ ಪ್ರಮಾಣವು ಶೇ. ೧೩.೪೧ರಷ್ಟಿದೆ. ಈ ಹಿಡುವಳಿಯಲ್ಲಿ ಭೂಮಿಯ ವಿಸ್ತೀರ್ಣದ ಪ್ರಮಾಣವು ಶೇ. ೩೧.೧೦ ಹೆಕ್ಟೇರುಗಳು. ಜಿಲ್ಲೆಯಲ್ಲಿ ಭೂ ಒಡೆತನ ಹೊಂದಿದ ಒಟ್ಟು ಪುರುಷರಲ್ಲಿ ಮಧ್ಯಮ ಭೂ ಒಡೆತನ ಹೊಂದಿದವರು ಶೇ. ೧೩.೮೯ರಷ್ಟು ಒಟ್ಟು ಪುರುಷರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದಲ್ಲಿ ಶೇ. ೩೦.೭೩ ಹೆಕ್ಟೇರುಗಳಷ್ಟು ಭೂಮಿಯನ್ನು ಈ ಹಿಡುವಳಿಯಲ್ಲಿ ಪುರುಷರು ಹೊಂದಿದ್ದಾರೆ. ಇಲ್ಲಿ ಪುರುಷರ ಭೂ ಒಡೆತನ ಸಂಖ್ಯೆಗಿಂತ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಅಧಿಕವಾಗಿದೆ. ಅಂತೆಯೇ ಐದು ತರಹದ ಭೂ ಹಿಡುವಳಿಯಲ್ಲಿ ಮಹಿಳಾ ಭೂ ಒಡತಿಯರಲ್ಲಿ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರ ಸಂಖ್ಯೆ ಶೇ. ೧೨.೭೫ ಇವರ ಒಡೆತನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣದ ಪ್ರಮಾಣ ಶೇ. ೩೩.೧೮ ಹೆಕ್ಟೇರುಗಳು. ಈ ಹಿಡುವಳಿಯಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕವಾಗಿರುವುದನ್ನು ಗಮನಿಸಬಹುದು. ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾದಂತೆ ಭೂ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಾಗುವುದು. ಜಿಲ್ಲೆಯಲ್ಲಿ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆ ಕಡಿಮೆಯಿದ್ದು ಭೂಮಿಯ ವಿಸ್ತೀರ್ಣ ಪ್ರಮಾಣ ಹೆಚ್ಚಾಗಿದೆ. ಆದರೆ ರಾಜ್ಯವನ್ನು ಗಮನಿಸಿದಾಗ ಇಡೀ ರಾಜ್ಯದಲ್ಲಿಯೇ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೮ರಷ್ಟು ಇದ್ದು ಅವರ ಒಡೆತನಕ್ಕೆ ಒಳಪಟ್ಟ ಭೂಮಿಯು ಶೇ. ೨೭ ಹೆಕ್ಟೇರುಗಳು. ಇಡೀ

ರಾಜ್ಯದಲ್ಲಿಯೂ ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರ ಸಂಖ್ಯೆಯು ಕಡಿಮೆಯಿದ್ದು ಭೂಮಿಯ ವಿಸ್ತೀರ್ಣವು ಅಧಿಕವಾಗಿದೆ.

ಒಟ್ಟಾರೆಯಾಗಿ ಪುರುಷರಿಗೆ ಹೋಲಿಸಿದರೆ ಮಹಿಳೆಯರ ಭೂ ಒಡೆತನದ ಸಂಖ್ಯೆಯ ಪ್ರಮಾಣ ಮತ್ತು ಭೂ ವಿಸ್ತೀರ್ಣದ ಪ್ರಮಾಣ ಕಡಿಮೆಯಿದೆ. ಆದರೆ ಮಹಿಳೆಯರಲ್ಲಿ ಅವರು ಹೊಂದಿರುವ ಭೂಮಿಯ ಪ್ರಮಾಣ ಜಿಲ್ಲೆಯಲ್ಲಿ ಸರಿಸಮಾನವಾದರೂ ಒಟ್ಟು ಮಹಿಳಾ ಭೂ ಒಡೆತನ ಹೊಂದಿದವರನ್ನು ಗಮನಿಸಿದಾಗ ಇವರ ಸಂಖ್ಯೆಗಿಂತ ವಿಸ್ತೀರ್ಣವು ಅಧಿಕವಾಗಿದೆ. ಆದರೆ ಅತಿಸಣ್ಣ, ಸಣ್ಣ, ಅರೆಮಧ್ಯಮ ಭೂ ಹಿಡುವಳಿಗಳಿಗಿಂತಲೂ ಮಧ್ಯಮ ಭೂ ಹಿಡುವಳಿಯ ಒಡೆತನದಲ್ಲಿ ಮಹಿಳೆಯರ ಭೂ ಒಡೆತನದ ಸಂಖ್ಯೆಯು ತೀರಾ ಕಡಿಮೆ ಇದೆ. ಇದರಿಂದ ತಿಳಿದು ಬರುವುದೇನೆಂದರೆ ಮೂಲಭೂತವಾಗಿ ಸಮಾಜ ಮಹಿಳೆಯರ ಪರವಾಗಿ ತೋರಿರುವ ದ್ವಿಸ್ತರ ನೀತಿ ನಿಚ್ಚಳವಾಗಿ ಎದ್ದು ಕಾಣುತ್ತದೆ. ಪುರುಷ ಪ್ರಧಾನ ಸಮಾಜ ಮಹಿಳೆಯನ್ನು ಭೂಮಿಗೆ ಸಮೀಕರಿಸಿದೆಯೇ ಹೊರತು ಸ್ಥಿರ ಆಸ್ತಿಯಾಗಿರುವ ಭೂಮಿಯನ್ನು ನೀಡಲು ನಿರಾಕರಿಸಿದೆ. ''ಮಹಿಳೆಯೇ ಭೂಮಿ ಎಂದೆನಿಸಿದಾಗ ಆಕೆಗೆ ಭೂ ಒಡೆತನವಾದರೂ ಏಕೆ?'' ಎಂಬ ಭಾವನೆ ಈ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಆಳವಾಗಿ ಬೇರೂರಿದೆ. ಅವಳು ಭೂಮಿಯ ಒಡೆತನ ಹೊಂದಿದರೂ ಕೂಡ ಪುರುಷರಿಗೆ ಹೋಲಿಸಿದರೆ ''ಪುರುಷನು ಆಕಾಶದ ಎತ್ತರದಷ್ಟು ಒಡೆತನವನ್ನು ಹೊಂದಿದರೆ, ಮಹಿಳೆಯು ಭೂಮಿಯಷ್ಟು ಕೆಳಮಟ್ಟದ ಒಡೆತನವನ್ನು ಹೊಂದಿದ್ದಾಳೆ.' ಅಲ್ಲಿಯೂ ಪೂರ್ಣ ಪ್ರಮಾಣದ ಹಕ್ಕು, ಅಧಿಕಾರ ಅವಳಿಗೆ ದಕ್ಕುತ್ತಿಲ್ಲ ಇದು ಇಂದಿನ ವಾಸ್ತವ ಸಂಗತಿಯಾಗಿದೆ.

ಮಧ್ಯಮ ಭೂ ಹಿಡುವಳಿಯಲ್ಲಿ ಮಹಿಳೆಯರ ಮತ್ತು ಪುರುಷರ ಒಡೆತನದ ಪ್ರಮಾಣವನ್ನು ಮತ್ತು ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಲಾಯಿತು. ಅಂತೆಯೇ ದೊಡ್ಡ ಭೂ ಹಿಡುವಳಿಯ ಕೋಷ್ಟಕದ ಮೂಲಕ ಮಹಿಳೆಯರ ಮತ್ತು ಪುರುಷರ ಒಡೆತನದ ಪ್ರಮಾಣವನ್ನು ತಿಳಿಯುವುದು ಅವಶ್ಯಕವಾಗಿದೆ.

**೭.೬. ದೊಡ್ಡ ಭೂ ಹಿಡುವಳಿಯ ವಿವರ**

ದೊಡ್ಡ ಭೂ ಹಿಡುವಳಿಯ ಒಡೆತನ ಅಂದರೆ ಹತ್ತು ಹೆಕ್ಟೇರ್‌ಗಿಂತ ಅಧಿಕವಾದ ಭೂಮಿ ಇರಬೇಕು. ಈ ವರ್ಗದ ರೈತರು ಕೃಷಿಯ ಅಭಿವೃದ್ಧಿಯಲ್ಲಿ ಆದಾಯದ ದೃಷ್ಟಿಯಿಂದ ಹಾಗೂ ಸಾಮಾಜಿಕವಾಗಿ ಮೇಲ್‌ಸ್ತರದಲ್ಲಿರುವರು. ಕೃಷಿಯಲ್ಲಿ ಇವರಿಗಿರುವ ಸಮಸ್ಯೆಗಳು ಕಡಿಮೆ. ಇವರು ಅತಿ ಸುಲಭವಾಗಿ ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನ ಮತ್ತು ಯಂತ್ರಗಳನ್ನು ಬಳಸುವರು. ಇವರು ಹೊಲಗಳಲ್ಲಿ ಸ್ವತಃ ಕೆಲಸ ಮಾಡದೇ ಕೇವಲ ಕೂಲಿಯಾಳು ಮತ್ತು ಯಂತ್ರ ಶಕ್ತಿಯ ಮೇಲೆ ಅವಲಂಬಿತರಾಗಿರುವರು. ಗುಲಬರ್ಗಾ ಜಿಲ್ಲೆಯಲ್ಲಿ ಜಮೀನ್ದಾರಿ ಪದ್ಧತಿಯು ರೂಢಿಯಲ್ಲಿರುವುದರಿಂದ ಇಂಥ ದೊಡ್ಡ ಭೂ ಹಿಡುವಳಿಯ ಒಡೆತನ ಹೊಂದಿದವರು ಅಧಿಕವಾಗಿದ್ದಾರೆ. ಅದರಲ್ಲೂ ಜಮೀನ್ದಾರರು ಮೇಲ್ವರ್ಗದವರೇ ಆಗಿರುವುದರಿಂದ ದೊಡ್ಡ ಪ್ರಮಾಣದ ಭೂಮಿಯ ಒಡೆತನವನ್ನು ಅವರೇ ಹೊಂದಿರುವರು. ಈ ವರ್ಗದ ರೈತರು ಬಡವರಿಗೆ ಅಂದರೆ ಅತಿಸಣ್ಣ ಮತ್ತು ಸಣ್ಣ ರೈತರಿಗೆ ಸಾಲ ಕೊಟ್ಟು ಅವರನ್ನು ಜೀತದಾಳುಗಳಾಗಿ ದುಡಿಸಿಕೊಳ್ಳುವುದು ಕಂಡುಬರುತ್ತಿದೆ. ಕೆಲವು ಸಂದರ್ಭಗಳಲ್ಲಿ ಸಾಲವನ್ನು ತೆಗೆದುಕೊಂಡ ಸಣ್ಣ ಮತ್ತು ಅತಿಸಣ್ಣ ರೈತರು ಸಾಲವನ್ನು ತೀರಿಸಲಾಗದಂಥ ಸಂದರ್ಭದಲ್ಲಿ ಈ ದೊಡ್ಡ ಭೂ ಹಿಡುವಳಿದಾರರು ಅವರ ಜೀವನಕ್ಕೆ ಸ್ವಲ್ಪಮಟ್ಟಿಗಾದರೂ ಆಧಾರವಾಗಿರುವಂತಹ ಭೂಮಿಯನ್ನು ಕಬಳಿಸಿಕೊಂಡು ಈ ರೀತಿ ಅಧಿಕ ಭೂಮಿಯ ಒಡೆತನವನ್ನು ಹೊಂದಿರುವರು. ಈ ಜಮೀನ್ದಾರಿ ಪದ್ಧತಿಯಲ್ಲಿ ಪುರುಷರೇ ಅಧಿಕವಾಗಿರುವುದರಿಂದ ದೊಡ್ಡ ಭೂ ಹಿಡುವಳಿಯಲ್ಲಿ ಅದರಲ್ಲು ಗುಲಬರ್ಗಾ ಜಿಲ್ಲೆಯಲ್ಲಿ ದೊಡ್ಡ ಭೂ ಹಿಡುವಳಿಯ ಒಡೆತನವನ್ನು ಹೊಂದುವಲ್ಲಿ ಮಹಿಳೆಯರ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕ ನೀಡುತ್ತದೆ.

## ಕೋಷ್ಟಕ–೬

## ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ವಿವರ: ದೊಡ್ಡ ಭೂ ಹಿಡುವಳಿಗಳು

(೧೦ ಹೆಕ್ಟೇರುಗಿಂತ ಅಧಿಕ)

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರ.ಸಂ | ತಾಲೂಕುಗಳು | ಒಟ್ಟು ಭೂ ಒಡೆತನ ಹೊಂದಿದವರು | | ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೧೪೪೪ | ೧೯೬೦೯ | ೧೪೨<br>(೯.೮೩) | ೧೮೭೭<br>(೯.೫೭) |
| ೨ | ಆಳಂದ | ೧೫೦೪ | ೨೦೪೫೫ | ೧೪೩<br>(೯.೫೦) | ೧೯೧೪<br>(೯.೩೫) |
| ೩ | ಚಿಂಚೋಳಿ | ೧೦೮೮ | ೧೫೩೧೭ | ೧೭೧<br>(೧೫.೭೧) | ೨೩೯೦<br>(೧೫.೬೦) |
| ೪ | ಚಿತ್ತಾಪೂರ | ೧೫೫೨ | ೨೧೯೫೯ | ೨೩೩<br>(೧೫.೦೧) | ೩೨೫೩<br>(೧೪.೮೧) |
| ೫ | ಗುಲಬರ್ಗಾ | ೧೮೫೩ | ೨೫೮೫೮ | ೨೧೧<br>(೧೧.೩೮) | ೨೯೭೫<br>(೧೧.೫೦) |
| ೬ | ಜೇವರ್ಗಿ | ೧೭೬೩ | ೨೩೬೬೦ | ೧೯೦<br>(೧೦.೭೭) | ೨೫೩೧<br>(೧೦.೬೯) |
| ೭ | ಸೇಡಂ | ೮೫೩ | ೧೨೩೨೭ | ೧೧೯<br>(೧೩.೯೫) | ೧೮೨೪<br>(೧೪.೭೯) |
| ೮ | ಶಹಾಪುರ | ೧೧೧೯ | ೧೫೩೪೬ | ೧೬೦<br>(೧೪.೨೯) | ೨೧೩೨<br>(೧೩.೮೯) |
| ೯ | ಸುರಪುರ | ೯೧೩ | ೧೨೩೫೨ | ೧೦೯<br>(೧೧.೯೩) | ೧೪೪೪<br>(೧೧.೬೯) |
| ೧೦ | ಯಾದಗಿರಿ | ೭೭೪ | ೧೧೧೦೯ | ೧೦೮<br>(೧೩.೯೫) | ೧೫೬೫<br>(೧೪.೦೮) |
| ಒಟ್ಟು | | ೧೨೮೬೩ | ೧೭೭೯೯೨ | ೧೫೮೬<br>(೧೨.೩೨) | ೨೧೯೦೫<br>(೧೨.೩೦) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

ಗುಲಬರ್ಗಾ ಜಿಲ್ಲೆಯ ದೊಡ್ಡ ಹಿಡುವಳಿಯ ಕೋಷ್ಟಕವನ್ನು ಗಮನಿಸಿದಾಗ ಎಲ್ಲಾ ಭೂ ಹಿಡುವಳಿಯ ಹಾಗೆ ಈ ಹಿಡುವಳಿಯಲ್ಲಿ ಪುರುಷರ ಒಡೆತನದ ಪ್ರಮಾಣ ಮತ್ತು ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ. ಇಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ಎರಡು ಪಟ್ಟು ಅಧಿಕವಾಗಿದೆ. ಹಾಗೆಯೇ ಮಹಿಳೆಯರ ಪ್ರಮಾಣವು ಕಡಿಮೆಯಿದ್ದು ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವೂ ಅಧಿಕ ಇರುವುದು ಕಂಡುಬರುತ್ತದೆ.

ರಾಜ್ಯದಲ್ಲಿಯೇ ದೊಡ್ಡ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೧ರಷ್ಟು ಮಾತ್ರ. ಆದರೆ ಇವರ ಕೈಯಲ್ಲಿರುವ ಭೂಮಿಯ ವಿಸ್ತೀರ್ಣವು ಶೇ. ೧೧ ಹೆಕ್ಟೇರುಗಳು. ಇಡೀ ರಾಜ್ಯದಲ್ಲಿಯೇ ದೊಡ್ಡ ಪ್ರಮಾಣದ ಒಡೆತನ ಹೊಂದಿದವರ ಸಂಖ್ಯೆಯು ಕಡಿಮೆಯಿದ್ದರೂ ಅವರಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಹೆಚ್ಚಾಗಿದೆ. ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕವಾದಂತೆ ಭೂ ಒಡೆತನದ ಸಂಖ್ಯೆಯ ಪ್ರಮಾಣವು ಕಡಿಮೆಯಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟು ಭೂ ಒಡೆತನ ಹೊಂದಿದವರಲ್ಲಿ ಅಂದರೆ ಪುರುಷರು ಮತ್ತು ಮಹಿಳೆಯರನ್ನು ಒಳಗೊಂಡಂತೆ ಐದು ತರಹದ ಹಿಡುವಳಿಗಳಲ್ಲಿ ದೊಡ್ಡ ಭೂ ಹಿಡುವಳಿ ಹೊಂದಿದವರು ಶೇ. ೨.೩೯ರಷ್ಟು ಇದ್ದಾರೆ. ಈ ವರ್ಗದ ಒಡೆತನ ಹೊಂದಿದವರು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂ ಒಡೆತನದ ಸಂಖ್ಯೆ ಹೊಂದಿದ್ದಾರೆ, ಅಂತೆಯೇ ವಿಸ್ತೀರ್ಣದಲ್ಲಿಯೂ ಜಿಲ್ಲೆಯಲ್ಲಿಯೇ ಅತಿ ಕಡಿಮೆ ಅಂದರೆ ಶೇ: ೧೨.೬೭ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿರುವರು. ಉಳಿದ ಹಿಡುವಳಿಗಳಿಗೆ ಹೋಲಿಸಿದರೆ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದ್ದರೂ ಈ ಹಿಡುವಳಿಯಲ್ಲಿ ಒಡೆತನ ಹೊಂದಿದವರ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ಜಾಸ್ತಿಯಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟು ಪುರುಷ ಒಡೆತನ ಹೊಂದಿದವರಲ್ಲಿ ದೊಡ್ಡ ಹಿಡುವಳಿಯ ಒಡೆತನ ಹೊಂದಿದವರು ಶೇ. ೨.೪೪ರಷ್ಟು ಮಾತ್ರ. ಜಿಲ್ಲೆಯಲ್ಲಿಯೇ ಅತಿ ಕಡಿಮೆ ಪ್ರಮಾಣದಲ್ಲಿ ಪುರುಷರು ದೊಡ್ಡ ಹಿಡುವಳಿಯ ಒಡೆತನವನ್ನು ಹೊಂದಿರುವರು. ಹಾಗೆಯೇ ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೧೨.೭೯ ಹೆಕ್ಟೇರುಗಳು. ಭೂ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಿದ್ದರೂ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ. ಒಟ್ಟು ಜಿಲ್ಲೆಯ ಮಹಿಳಾ ಭೂ ಒಡೆತನ ಹೊಂದಿದವರಲ್ಲಿ ದೊಡ್ಡ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೨.೧೩ರಷ್ಟು, ಇವರ ಸ್ವಾಧೀನಕ್ಕೆ ಒಳಪಟ್ಟಿರುವ ಭೂಮಿಯ ವಿಸ್ತೀರ್ಣ ಶೇ. ೧೩.೧೩ ಹೆಕ್ಟೇರುಗಳು. ಇಲ್ಲಿ ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣವು ಪುರುಷರಿಗೆ ಹೋಲಿಸಿದರೆ ಕಡಿಮೆ ಇದೆ. ಆದರೆ ಒಡೆತನದ ಸಂಖ್ಯೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ.

ಗುಲಬರ್ಗಾ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಕೃಷಿ ಅವಲಂಬಿತರು ಶೇ. ೨೮.೮೯ ಇದ್ದಾರೆ. ಪುರುಷ ಕೃಷಿ ಅವಲಂಬಿತರಲ್ಲಿ ನೋಡಿದಾಗ ಪುರುಷರು ಶೇ. ೯೮.೦೧ರಷ್ಟು ಭೂ ಒಡೆಯರಾಗಿದ್ದು ಕೇವಲ ೧.೯೯ ಪ್ರತಿಶತದಷ್ಟು ಪುರುಷರು ಕೃಷಿ ಕಾರ್ಮಿಕರಾಗಿರುವರು. ಅಂತೆಯೇ ಮಹಿಳೆಯರ ಸಂದರ್ಭದಲ್ಲಿ ಒಟ್ಟು ಮಹಿಳಾ ಕೃಷಿ

ಅವಲಂಬಿತರಲ್ಲಿ ಕೇವಲ ಶೇ. ೧೭.೧೧ರಷ್ಟು ಮಹಿಳೆಯರು ಒಡತಿಯರಾಗಿದ್ದು ಶೇ. ೮೨.೮೯ರಷ್ಟು ಮಹಿಳೆಯರು ಕೃಷಿ ಕಾರ್ಮಿಕರಾಗಿರುವರು. ಹೀಗಾಗಿ ಮಹಿಳೆಯರ ಭೂ ಒಡೆತನದ ಪ್ರಮಾಣವು ಕಡಿಮೆಯಾಗಿ ಕೃಷಿ ಕಾರ್ಮಿಕರ ಪ್ರಮಾಣವು ಅಧಿಕವಾಗಿದೆ. ಜಿಲ್ಲೆಯ ಹತ್ತು ತಾಲೂಕುಗಳನ್ನು ಒಳಗೊಂಡಂತೆ ಮಹಿಳೆಯರು ದೊಡ್ಡ ಭೂ ಹಿಡುವಳಿಯ ಒಡೆತನ ಹೊಂದಿದವರು ಶೇ. ೧೨.೩೨ರಷ್ಟಿದ್ದು, ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಕೇವಲ ಶೇ. ೧೨.೩೦ ಹೆಕ್ಟೇರುಗಳು ಮಾತ್ರ. ಪುರುಷರಿಗೆ ಹೋಲಿಸಿದಾಗ ಶೇ. ೮೭.೬೮ರಷ್ಟು ಪುರುಷರು ದೊಡ್ಡ ಹಿಡುವಳಿಯ ಮಾಲೀಕರಾಗಿದ್ದಾರೆ. ಅವರ ಒಡೆತನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣ ಶೇ. ೮೭.೭ ಹೆಕ್ಟೇರುಗಳು. ಇಡೀ ಜಿಲ್ಲೆಯಲ್ಲಿಯೇ ಪುರುಷರ ಒಡೆತನದ ಪ್ರಮಾಣ ಅಧಿಕವಾಗಿದೆ.

ತಾಲೂಕುವಾರು ದೊಡ್ಡ ಭೂ ಹಿಡುವಳಿಯಲ್ಲಿ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಜಿಲ್ಲೆಯಲ್ಲಿಯೇ ಗುಲಬರ್ಗಾ ತಾಲೂಕು ಭೂ ಒಡೆತನದ ಸಂಖ್ಯೆ ಮತ್ತು ಭೂ ವಿಸ್ತೀರ್ಣದ ಪ್ರಮಾಣದಲ್ಲಿ ಅಧಿಕವಿದೆ. ಯಾದಗಿರಿ ತಾಲೂಕು ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣದಲ್ಲಿ ಜಿಲ್ಲೆಯಲ್ಲಿಯೇ ಕಡಿಮೆಯಿರುವುದನ್ನು ಕಾಣಬಹುದು. ಭೂ ಒಡೆತನದ ಸಂಖ್ಯೆಯನ್ನು ಗಮನಿಸಿದಾಗ ಅಧಿಕ ಭೂ ಒಡೆತನದ ಸಂಖ್ಯೆ ಹೊಂದಿರುವ ಗುಲಬರ್ಗಾ ತಾಲೂಕಿನಲ್ಲಿ ಮಹಿಳೆಯರು ಶೇ. ೧೧.೩೮ರಷ್ಟು ಭೂ ಮಾಲೀಕರಾದರೆ, ಪುರುಷರು ಶೇ. ೮೮.೬೨ ರಷ್ಟು ಭೂ ಮಾಲೀಕರಾಗಿರುವುದನ್ನು ಕಾಣಬಹುದು. ಅತೀ ಕಡಿಮೆ ಭೂ ಒಡೆತನದ ಸಂಖ್ಯೆ ಹೊಂದಿರುವ ಯಾದಗಿರಿ ತಾಲೂಕಿನಲ್ಲಿ ಮಹಿಳೆಯರ ಒಡೆತನದ ಪ್ರಮಾಣವು ಶೇ. ೧೩.೯೫ ರಷ್ಟಿದ್ದರೆ, ಪುರುಷರು ಶೇ. ೮೬.೦೫ರಷ್ಟಿದ್ದಾರೆ.

ಭೂ ಒಡೆತನದ ಸಂಖ್ಯೆಯಂತೆ ಭೂ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಅಧಿಕ ಭೂ ವಿಸ್ತೀರ್ಣ ಹೊಂದಿರುವ ಗುಲಬರ್ಗಾ ತಾಲೂಕಿನಲ್ಲಿ ಶೇ. ೧೧.೫೦ ಹೆಕ್ಟೇರುಗಳಷ್ಟು ಭೂಮಿ ಮಹಿಳೆಯರ ಕೈಯಲ್ಲಿದ್ದರೆ, ಶೇ. ೮೮.೫ ಹೆಕ್ಟೇರುಗಳಷ್ಟು ಭೂಮಿ ಪುರುಷರ ಪಾಲಾಗಿದೆ. ಅತೀ ಕಡಿಮೆ ಭೂ ವಿಸ್ತೀರ್ಣ ಹೊಂದಿರುವ ಯಾದಗಿರಿ ತಾಲೂಕಿನಲ್ಲಿ ಶೇ. ೧೪.೦೮ ಹೆಕ್ಟೇರ್‌ನಷ್ಟು ಭೂಮಿಯನ್ನು ಮಹಿಳೆಯರು ಹೊಂದಿದ್ದಾರೆ. ಇದೇ ತಾಲೂಕಿನಲ್ಲಿ ಪುರುಷರ ಪಾಲಿಗೆ ಶೇ. ೮೫.೯೨ ಹೆಕ್ಟೇರುಗಳಷ್ಟು ಭೂಮಿ ಇರುವುದನ್ನು ಕಾಣಬಹುದು.

ತಾಲೂಕುವಾರು ಮಹಿಳೆಯರ ಒಡೆತನದ ಪ್ರಮಾಣವನ್ನು ಗಮನಿಸಿದಾಗ ಜಿಲ್ಲೆಯಲ್ಲಿಯೇ ಚಿಂಚೋಳಿ ತಾಲೂಕು ಅಧಿಕವಾಗಿ ಮಹಿಳಾ ಭೂ ಒಡತಿಯರನ್ನು ಶೇ. ೧೫.೭೧ರಷ್ಟು ಹೊಂದಿದೆ. ಜಿಲ್ಲೆಯಲ್ಲಿಯೇ ಮಹಿಳೆಯರು ಅತಿ ಕಡಿಮೆ ಭೂ ಒಡೆತನ ಹೊಂದಿರುವ ತಾಲೂಕು ಆಳಂದ. ಇಲ್ಲಿ ಮಹಿಳೆಯರು ಶೇ. ೯.೫೦ ರಷ್ಟು ಮಾತ್ರ ಒಡತಿಯರಾಗಿದ್ದಾರೆ. ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದರೆ ಜಿಲ್ಲೆಯಲ್ಲಿಯೇ ಮಹಿಳೆಯರು ಅಧಿಕ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಚಿಂಚೋಳಿ. ಇಲ್ಲಿ ಶೇ. ೧೫.೬೦ ಹೆಕ್ಟೇರ್‌ನಷ್ಟು ಭೂಮಿಯ ವಿಸ್ತೀಣವನ್ನು ಮಹಿಳೆಯರು ಹೊಂದಿರುವರು. ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು

ಆಳಂದ. ಇಲ್ಲಿ ಕೇವಲ ಶೇ. ೯.೩೫ ಹೆಕ್ಟೇರುಗಳು ಮಾತ್ರ ಭೂಮಿಯ ಒಡತಿಯರಾಗಿರುವರು. ಚಿಂಚೋಳಿ ತಾಲೂಕು ಜಿಲ್ಲೆಯಲ್ಲಿ ದೊಡ್ಡ ಭೂ ಹಿಡುವಳಿಯಲ್ಲಿ ಮಹಿಳೆಯರ ಒಡೆತನಕ್ಕೆ ಸಂಬಂಧಿಸಿದಂತೆ ಅತೀ ಹೆಚ್ಚು ಮಹಿಳಾ ಭೂ ಒಡೆತನದ ಸಂಖ್ಯೆಯನ್ನು ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಅಧಿಕ ಹೊಂದಿದೆ. ಹಾಗೆಯೇ ಆಳಂದ ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಹೊಂದಿರುವ ತಾಲೂಕಾಗಿದೆ.

ಈ ಹಿಡುವಳಿಯಲ್ಲಿ ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣ ಅಧಿಕವುಳ್ಳ ತಾಲೂಕುಗಳು ಯಾದಗಿರಿ, ಸೇಡಂ, ಗುಲಬರ್ಗಾ. ಮೊದಲೇ ಹೇಳಿದಂತೆ ಯಾದಗಿರಿ ತಾಲೂಕು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿದ್ದರೂ ಮಹಿಳೆಯರು ಹೊಂದಿರುವ ಭೂಮಿಯ ವಿಸ್ತೀರ್ಣದಲ್ಲಿ ಅಧಿಕವಾಗಿದೆ. ಸೇಡಂ ತಾಲೂಕಿನಲ್ಲಿಯೂ ಕೂಡ ಮಹಿಳೆಯರ ಸಂಖ್ಯೆಗಿಂತ ಅವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕವಾಗಿದೆ. ಗುಲಬರ್ಗಾ ತಾಲೂಕು ಜಿಲ್ಲೆಯಲ್ಲಿಯೇ ದೊಡ್ಡ ಭೂ ಹಿಡುವಳಿಯಲ್ಲಿ ಅಧಿಕ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದರೂ ಮಹಿಳೆಯರ ಭೂ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಿದೆ. ಆದರೆ ಈ ಸಂಖ್ಯೆಗೆ ಹೋಲಿಸಿದರೆ ಅವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ. ಸೇಡಂ, ಗುಲಬರ್ಗಾ ಮತ್ತು ಯಾದಗಿರಿ ತಾಲೂಕುಗಳಲ್ಲಿ ಮಹಿಳೆಯರ ಭೂ ಒಡೆತನದ ಪ್ರಮಾಣ ಪುರುಷರಿಗೆ ಹೋಲಿಸಿದರೆ ಕಡಿಮೆಯಿದ್ದರೂ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಅಧಿಕವಿದೆ. ಈ ತಾಲೂಕುಗಳಲ್ಲಿ ಮಹಿಳೆಯರಿಗೆ ಕಿಂಚಿತ್ತಾದರೂ ಹೆಚ್ಚು ಭೂಮಿಯ ಒಡೆತನವನ್ನು ಹೊಂದಿರುವುದು ಕಂಡುಬರುತ್ತದೆ. ದೊಡ್ಡ ಭೂ ಹಿಡುವಳಿದಾರರು ಸಾಮಾನ್ಯವಾಗಿ ಮೇಲ್ವರ್ಗದ ಶ್ರೀಮಂತರಿರುವುದನ್ನು ಗಮನಿಸಬೇಕು.

ದೊಡ್ಡ ಭೂ ಹಿಡುವಳಿಯ ಕೋಷ್ಟಕದಲ್ಲಿ ಮಹಿಳೆಯರ ಭೂ ಒಡೆತನದ ಸಂಖ್ಯೆಯು ಕಡಿಮೆಯಿದ್ದು ಇನ್ನು ಅವರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣವು ಕಡಿಮೆಯಿರುವ ತಾಲೂಕುಗಳನ್ನು ಗಮನಿಸೋಣ, ಅಫಜಲಪೂರ ತಾಲೂಕಿನಲ್ಲಿ ಮಹಿಳೆಯರು ಶೇ. ೯.೮೩ರಷ್ಟು ಭೂ ಒಡತಿಯರಾದರೆ ಕೇವಲ ಶೇ. ೯.೫೭ ಹೆಕ್ಟೇರ್‌ನಷ್ಟು ಭೂಮಿಯ ಮಾಲೀಕತ್ವವನ್ನು ಹೊಂದಿರುವರು. ಅಂತೆಯೇ ಆಳಂದ, ಚಿಂಚೋಳಿ, ಚಿತ್ತಾಪೂರ, ಜೇವರ್ಗಿ, ಶಹಾಪುರ ಮತ್ತು ಸುರಪುರ ತಾಲೂಕುಗಳನ್ನೊಳಗೊಂಡಂತೆ ಭೂ ಒಡೆತನದ ಸಂಖ್ಯೆಗೆ ಅನುಗುಣವಾಗಿ ಭೂಮಿಯ ವಿಸ್ತೀರ್ಣವು ಇಲ್ಲದಾಗಿದೆ. ಈ ತಾಲೂಕುಗಳಲ್ಲಿ ಮಹಿಳೆಯರು ಅಧಿಕವಾಗಿ ಲಿಂಗ ತಾರತಮ್ಯಕ್ಕೆ ಒಳಗಾಗಿರುವುದು ಕಂಡು ಬಂದಿದೆ. ಜಿಲ್ಲೆಯಲ್ಲಿಯೇ ಗುಲಬರ್ಗಾ ತಾಲೂಕು ಶಿಕ್ಷಣದಿಂದ ಮುಂದುವರೆದಿದ್ದರೂ ಇಲ್ಲಿಯೂ ಕೂಡ ಮಹಿಳೆಯರು ಭೂ ಒಡೆತನ ಹೊಂದುವಲ್ಲಿ ಹಿಂದಿದ್ದಾರೆ.

ಈ ಎಲ್ಲಾ ತಾಲೂಕುಗಳಲ್ಲಿ ಮಹಿಳೆಯರಿಗಿಂತ ಪುರುಷರೆ ಅಧಿಕವಾಗಿ ಒಡೆತನವನ್ನು ಹೊಂದಿದ್ದಾರೆ. ಕಾರಣ ಹತ್ತು ಹೆಕ್ಟೇರುಗಳಿಗಿಂತ ಅಧಿಕವಾದಂಥ ಭೂಮಿಯ ವಿಸ್ತೀರ್ಣದ ಒಡೆತನವನ್ನು ಒಬ್ಬರೇ ಹೊಂದುವುದರಿಂದ ಭೂ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಿದ್ದು ಭೂಮಿಯ ವಿಸ್ತೀರ್ಣದ ಪ್ರಮಾಣ ಹೆಚ್ಚಾಗಿದೆ. ಅಲ್ಲದೆ ಪುರುಷರೆ ಅಧಿಕವಾಗಿ ಒಡೆತನ ಹೊಂದಿರಲು ಕಾರಣ, ಸಮಾಜದಲ್ಲಿ ವ್ಯಕ್ತಿಯು ಅಧಿಕ ಭೂಮಿಯನ್ನು ಹೊಂದುವುದರಿಂದ ಆತನ ಪ್ರತಿಷ್ಠೆ ಹೆಚ್ಚುವುದು, ಸಮಾಜದಲ್ಲಿ ವ್ಯಕ್ತಿಗೆ ಗೌರವದ ಸ್ಥಾನ ದೊರಕುವುದು, ಹೀಗಾಗಿ ಪುರುಷರು ಆದಾಯ ತರುವಂಥ ಸ್ಥಿರ ಆಸ್ತಿಯಾದ ಭೂಮಿಯ ಒಡೆತನವನ್ನು ಅಧಿಕವಾಗಿ ಹೊಂದುತ್ತಾ ಬಂದಿರುವರು. ಅಲ್ಲದೆ ಕುಟುಂಬದಲ್ಲಿ ವಂಶಪಾರಂಪರ್ಯವಾಗಿ ಪುರುಷನೆ ಭೂಮಿಯ ಅಧಿಕಾರವನ್ನು ಹೊಂದಬೇಕು ಎನ್ನುವ ನಂಬಿಕೆಯಿಂದಲೂ ಪುರುಷರು ಅಧಿಕವಾಗಿ ಭೂಮಿಯ ಮಾಲೀಕರಾಗುತ್ತ ಬಂದಿರುವರು. ಇದಕ್ಕೆಲ್ಲ ಮೂಲಕಾರಣ, ಗುಲಬರ್ಗಾ ಜಿಲ್ಲೆಯನ್ನು ನೋಡಿದಾಗ ಜಮೀನ್ದಾರಿ ಪದ್ಧತಿಯು ರೂಢಿಯಲ್ಲಿರುವುದು, ಪುರುಷರೇ ಅಧಿಕವಾಗಿ ಅಕ್ಷರಸ್ಥರಿದ್ದು ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಹೀಗಾಗಿ ಇತರೆ ಯಾವುದೇ ಕೆಲಸ ವ್ಯವಹಾರಗಳ ಬಗ್ಗೆ ಮಹಿಳೆಯರಿಗೆ ತಿಳುವಳಿಕೆಯೂ ಇಲ್ಲ. ಇದರ ಪರಿಣಾಮವಾಗಿ ಅನಕ್ಷರಸ್ಥರಾಗಿರುವುದರಿಂದ ಜಿಲ್ಲೆಯಲ್ಲಿ ಅಧಿಕವಾಗಿ ಮಹಿಳೆಯರು ಕೃಷಿ ಕಾರ್ಮಿಕರಾಗಿ ಉಳಿಯುವಂಥ ಪರಿಸ್ಥಿತಿ ಇದೆ. ಈ ಎಲ್ಲ ಹಿಡುವಳಿಗಳಲ್ಲಿ ಅಧಿಕಾರವೆಲ್ಲಾ ಪುರುಷನಾದರೆ, ಕೇವಲ ಶ್ರಮ ಮಾತ್ರ ಮಹಿಳೆಯದಾಗಿದೆ. ಮಹಿಳೆಯರಿಗೆ ಸಮಾಜದಲ್ಲಾಗಲಿ/ ಕುಟುಂಬದಲ್ಲಾಗಲಿ ಭೂ ಒಡೆತನ ನೀಡಿದರೂ ಸಣ್ಣ ಮತ್ತು ಅತಿ ಸಣ್ಣ ಭೂ ಹಿಡುವಳಿಯಲ್ಲಿ ಮಾತ್ರ. ದೊಡ್ಡ ಭೂ ಹಿಡುವಳಿಯಲ್ಲಿ ಒಡೆತನ ನೀಡಿದರೂ ಅದು ಜಂಟಿ ಒಡೆತನವಾಗಿರುವುದು ಮತ್ತು ಇಂಥ ಒಡೆತನ ನೀಡಲು ಯಾವುದೊ ಒಂದು ಬಲವಾದ ಇತರೆ ಕಾರಣವಿರುವುದನ್ನು ಅಧ್ಯಯನದಿಂದ ತಿಳಿಯಬಹುದು.

ಈ ಮೇಲಿನ ಐದು ಕೋಷ್ಟಕಗಳ ಮೂಲಕ ಪ್ರತಿಯೊಂದು ಹಿಡುವಳಿಯಲ್ಲಿ ಮಹಿಳೆಯರ ಒಡೆತನದ ಪ್ರಮಾಣವನ್ನು ಮತ್ತು ಪುರುಷರ ಒಡೆತನದ ಪ್ರಮಾಣದಲ್ಲಿರುವ ವ್ಯತ್ಯಾಸವನ್ನು ಜೊತೆಗೆ ಅವರು ಹೊಂದಿರುವ ಭೂಮಿಯ ವಿಸ್ತೀರ್ಣದಲ್ಲಿರುವ ವ್ಯತ್ಯಾಸವನ್ನು ಗುರುತಿಸಲಾಗಿದೆ. ಅಂತೆಯೇ ಈ ಎಲ್ಲಾ ಹಿಡುವಳಿಯಲ್ಲಿ ಯಾವ ವರ್ಗದಲ್ಲಿ (ಜಾತಿಯಲ್ಲಿ) ಮಹಿಳೆಯರು ಅಧಿಕವಾಗಿ ಭೂ ಒಡತಿಯರಾಗಿರುವರು ಎನ್ನುವುದನ್ನು ಗಮನಿಸುವುದು ಅವಶ್ಯಕವಾಗಿದೆ.

**೭.೭. ಪರಿಶಿಷ್ಟ ಜಾತಿಯ ಮಹಿಳೆಯರ ಭೂ ಒಡೆತನದ ವಿವರ**

ದಲಿತರು ಭೂಮಿಯ ಒಡೆತನವನ್ನು ಪಡೆದಿರುವುದೇ ಇತ್ತೀಚೆಗೆ. ಅಂದರೆ ಸ್ವಾತಂತ್ರ್ಯದ ನಂತರದಲ್ಲಿ ಅದರಲ್ಲೂ ದಲಿತ ಸಂಘಟನೆಗಳು ನಡೆಸಿದ ಭೂ ಹೋರಾಟದ ಫಲವಾಗಿ ಕೆಲವರು ಮಾತ್ರ ಭೂಮಿಯನ್ನು ಪಡೆದಿದ್ದಾರೆ. ಅದನ್ನು ಕರ್ನಾಟಕದ ಸಂದರ್ಭದಲ್ಲೂ ಎಲ್ಲಾ ಭಾಗಕ್ಕೂ ಸಾರಾಸಗಟಾಗಿ ಹೇಳಲು ಬರುವುದಿಲ್ಲ. ಆದರೆ ಕೆಲವರು ಪರಿಶಿಷ್ಟ ಜಾತಿಯಲ್ಲಿ ಆಸ್ತಿಯ ಬಗ್ಗೆ ಕಾಳಜಿಯಿದ್ದವರು ಮಾತ್ರ ಭೂಮಿಯನ್ನು ಪಡೆದಿದ್ದರು. ಇಂದು ಕರ್ನಾಟಕದಲ್ಲಿ

ಸುಮಾರು ಶೇಕಡ ೫ ರಿಂದ ೧೦ರಷ್ಟು ಮಾತ್ರ ದಲಿತ ಜನರು ಭೂಮಿಯನ್ನು ಹೊಂದಿರಬಹುದು. ಪರಿಶಿಷ್ಟ ಜಾತಿಯಲ್ಲಿ ಬಹುಪಾಲು ಕೃಷಿಯನ್ನು ವೃತ್ತಿಯನ್ನಾಗಿ ಮಾಡಿಕೊಂಡು ಬಂದವರೇ ಅಧಿಕವಾಗಿದ್ದಾರೆ. ಇವರು ಕೃಷಿಯನ್ನೆನೋ ಮಾಡುತ್ತಿದ್ದಾರೆ, ಆದರೆ ಕೃಷಿಗೆ ಸಂಬಂಧಿಸಿದ ಭೂಮಿಯು ಮಾತ್ರ ಅವರಿಗಾಗಿಲ್ಲ. ಮೇಲ್ಜಾತಿಯ ಭೂ ಮಾಲೀಕರ ಮನೆಯಲ್ಲಿ ಬಹುತೇಕವಾಗಿ ಇವರು ಕೂಲಿಯನ್ನು ಮಾಡುತ್ತಾರೆ. ಜೀತದಾಳಾಗಿ ಮತ್ತು ಕೂಲಿಮಾಡುವ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಇವರು ತಮ್ಮ ಬದುಕಿನ ಸಂಕಷ್ಟಗಳ ವಾಸ್ತವ ಅರಿವನ್ನು ಭೂ ಮಾಲೀಕರೊಂದಿಗೆ ತುಲನೆ ಮಾಡಿಕೊಂಡು ನೋಡುವುದೇ ಇಲ್ಲ. ಇದು ತಮ್ಮ ಬದುಕಿನ ಅನಿವಾರ್ಯ ಹಾಗೂ ತಮ್ಮ ಸ್ಥಿತಿಯೇ ಇಂತಹದು ಎಂದುಕೊಂಡು ಬದುಕನ್ನು ಸಾಗಿಸುತ್ತಾರೆ. ಇವರಲ್ಲಿ ಆಧುನಿಕತೆಯ ಮತ್ತು ಶಿಕ್ಷಣದ ಅರಿವು ಬಂದಾಗ ಮಾತ್ರ ಸಾಮಾಜಿಕ ವಾಸ್ತವದ ತಿಳುವಳಿಕೆ ಮೂಡಲು ಸಾಧ್ಯ. ಪರಿಶಿಷ್ಟ ಜಾತಿಯವರು ಮೇಲ್ವರ್ಗದವರ ಹಾಗೆ ಭೂಮಿಯನ್ನು ಖರೀದಿಸಿರುವುದು ಕೂಡ ಕಡಿಮೆ. ಇವರು ತಮ್ಮ ಸಮುದಾಯದಲ್ಲಿಯೇ ಆರ್ಥಿಕವಾಗಿ ಉತ್ತಮವಿರುವಂತಹವರು ಮಾತ್ರ ಭೂಮಿಯನ್ನು ಖರೀದಿಸಿದ್ದಾರೆ. ಅದು ಸಹ ತಮ್ಮ ಸಮುದಾಯದವರಿಂದಲೇ ಮಾತ್ರ ಭೂಮಿಯನ್ನು ಖರೀದಿಸಿರುವುದು ಕಂಡುಬರುತ್ತದೆ. ಇವರು ಭೂ ಒಡೆತನವನ್ನು ಹೊಂದಿದರೂ ಅತಿಸಣ್ಣ ಮತ್ತು ಸಣ್ಣ ಪ್ರಮಾಣದ ಭೂಮಿಯ ಒಡೆತನವನ್ನೇ ಅಧಿಕವಾಗಿ ಹೊಂದಿದವರಿದ್ದಾರೆ. ಇವರು ಹೆಚ್ಚೆಂದರೆ ೩ ರಿಂದ ೪ ಎಕರೆ ಭೂಮಿಯನ್ನು ಮಾತ್ರ ಹೊಂದಿದ್ದಾರೆ. ಇವರು ಒಡೆತನ ಹೊಂದಿರುವ ಭೂಮಿಯು ಪಿತ್ರಾರ್ಜಿತ ಭೂಮಿಯಾಗಿರಬಹುದು, 'ದರಕಾಸ್ತು ಭೂಮಿ'[೨] ಯಾಗಿರಬಹುದು ಇಲ್ಲ 'ಕುಳುವಾಡಿ ಭೂಮಿ'[೩] ಆಗಿರಬಹುದು. ಅಥವಾ ಖರೀದಿಸಿರುವ ಭೂಮಿ ಆಗಿರಬಹುದು, ಇವರ ಬದುಕಿಗೆ ಭೂ ಒಡೆತನ ಹೊಂದಿದಂಥ ಭೂಮಿಯೇ ಆಧಾರವಾಗಿರುವುದಿಲ್ಲ. ಏಕೆಂದರೆ ಇದು ಅವರ ಬದುಕಿಗೆ ಸಾಕಾಗದೆ ಇರುವುದರಿಂದ ಇವರು ಕೃಷಿ ಕೂಲಿಕಾರ್ಮಿಕರಾಗಿರುವುದು ಅನಿವಾರ್ಯವಾಗಿದೆ. ಇವರು ತಮ್ಮ ಕೂಲಿಯ ಸಮಯದಲ್ಲಿಯೇ ಸ್ವಲ್ಪ ಸಮಯವನ್ನು ಬಿಡುವು ಮಾಡಿಕೊಂಡು ತಮ್ಮ ಭೂಮಿಯನ್ನು ಸಾಗುವಳಿ ಮಾಡುತ್ತಾರೆ. ಪರಿಶಿಷ್ಟ ಜಾತಿಯವರಲ್ಲಿ ದೊಡ್ಡ ಭೂ ಹಿಡುವಳಿಯ ಮೇಲೆ ಒಡೆತನ ಹೊಂದಿರುವವರು ರಾಜ್ಯದಲ್ಲಿಯೇ ಬೆರಳೆಣಿಕೆಯಲ್ಲಿ ಮಾತ್ರ ದೊರೆಯುತ್ತಾರೆ. ಪರಿಶಿಷ್ಟ ಜಾತಿಯವರಲ್ಲಿ ಪುರುಷರಿಗೆ ಭೂಮಿಯ ಒಡೆತನ ಇರದಂಥ ಸಂದರ್ಭ ಇರುವಾಗ ಇನ್ನು ಅವರ ಕುಟುಂಬದ ಮಹಿಳೆಯರ ಸ್ಥಿತಿ ಹೇಳತೀರದು. ಆದರೂ ಈಗ ಸರ್ಕಾರದ ಸಾಲ ಸೌಲಭ್ಯಗಳನ್ನು ಪಡೆಯುವ ಸಲುವಾಗಿಯಾದರೂ ಪುರುಷರು ಜಂಟಿಯಾಗಿ ತಮ್ಮ ಮಹಿಳೆಯರ ಹೆಸರಿನಲ್ಲಿ ಭೂಮಿಯನ್ನು ಮಾಡುತ್ತಿದ್ದಾರೆ. ಕರ್ನಾಟಕದಲ್ಲಿ ಪರಿಶಿಷ್ಟ ಜಾತಿಯವರು ೨೦೦೦ - ೨೦೦೧ರ ವ್ಯವಸಾಯ ಗಣತಿಯ ಪ್ರಕಾರ ಸರಾಸರಿ ಭೂ ಒಡೆತನ ಹೊಂದಿದವರು ಕೇವಲ ೧೩.೨ ಪ್ರತಿಶತದಷ್ಟು ಮಾತ್ರ. ಆದರೆ ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಭೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ತೀರ ಕಡಿಮೆ ಇದೆ ಕೇವಲ ೩.೨ ಪ್ರತಿಶತ ಮಾತ್ರ. ಇನ್ನು ಗುಲಬರ್ಗಾ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯವರಲ್ಲಿ ಭೂ ಒಡೆತನ ಹೊಂದಿರುವ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿಯಬಹುದು.

## ಕೋಷ್ಟಕ–೭

## ಪರಿಶಿಷ್ಟ ಜಾತಿ ಮಹಿಳೆಯರ ಭೂ ಒಡೆತನದ ವಿವರ: ಗುಲಬರ್ಗಾ ಜಿಲ್ಲೆ

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರ.ಸಂ | ತಾಲೂಕುಗಳು | ಪರಿಶಿಷ್ಟ ಜಾತಿಯ ಒಟ್ಟು ಭೂ ಒಡೆತನ | | ಪರಿಶಿಷ್ಟ ಜಾತಿ ಮಹಿಳೆಯರ ಒಡೆತನ ದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೫೦೦೮ | ೯೩೭೨ | ೮೪೪ | ೧೩೯೧ |
| | | | | (೧೬.೮೫) | (೧೪.೮೪) |
| ೨ | ಆಳಂದ | ೯೭೯೨ | ೧೬೬೦೦ | ೧೧೯೬ | ೧೯೬೦ |
| | | | | (೧೨.೨೧) | (೧೧.೮೦) |
| ೩ | ಚಿಂಚೋಳಿ | ೧೧೫೪೦ | ೨೧೨೩೬ | ೧೭೪೧ | ೨೬೨೮ |
| | | | | (೧೫.೦೮) | (೧೨.೩೭) |
| ೪ | ಚಿತ್ತಾಪೂರ | ೧೨೪೫೯ | ೨೫೮೧೭ | ೧೬೨೬ | ೨೯೭೦ |
| | | | | (೧೩.೦೫) | (೧೧.೫೦) |
| ೫ | ಗುಲಬರ್ಗಾ | ೧೦೫೦೭ | ೨೨೮೪೩ | ೧೩೩೦ | ೨೬೧೧ |
| | | | | (೧೨.೬೫) | (೧೧.೪೩) |
| ೬ | ಜೇವರ್ಗಿ | ೭೨೮೯ | ೧೪೨೦೦ | ೧೦೦೬ | ೧೭೮೦ |
| | | | | (೧೩.೮೦) | (೧೨.೫೩) |
| ೭ | ಸೇಡಂ | ೭೮೪೩ | ೧೨೨೯೦ | ೯೪೩ | ೧೪೩೯ |
| | | | | (೧೨.೦೨) | (೧೧.೭೦) |
| ೮ | ಶಹಾಪುರ | ೧೧೭೯೮ | ೨೧೦೫೮ | ೧೫೩೦ | ೨೫೩೫ |
| | | | | (೧೨.೯೬) | (೧೨.೦೩) |
| ೯ | ಸುರಪುರ | ೯೪೦೫ | ೧೬೪೪೦ | ೧೧೧೬ | ೧೮೪೦ |
| | | | | (೧೧.೮೬) | (೧೧.೧೯) |
| ೧೦ | ಯಾದಗಿರಿ | ೧೬೪೧೬ | ೨೫೧೪೫ | ೧೫೩೮ | ೨೧೭೯ |
| | | | | (೯.೩೬) | (೮.೬೬) |
| ಒಟ್ಟು | | ೧೦೨೦೫೭ | ೧೮೫೦೦೧ | ೧೨೮೭೦ | ೨೧೩೩೩ |
| | | | | (೧೨.೬೧) | (೧೧.೫೩) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

೨೦೦೦ - ೨೦೦೧ ಕೃಷಿ ಗಣತಿಯ ಪ್ರಕಾರ ಪರಿಶಿಷ್ಟ ಜಾತಿಯಲ್ಲಿ ಮಹಿಳೆಯರು ಮತ್ತು ಪುರುಷರು ಹೊಂದಿರುವ ಭೂ ಒಡೆತನದ ಸ್ಥಿತಿಗತಿಯನ್ನು ಈ ಮೇಲಿನ ಕೋಷ್ಟಕದ ಮೂಲಕ ನೋಡಬಹುದು. ಗುಲಬರ್ಗಾ ಜಿಲ್ಲೆಯ ಐದು ತರಹದ ಹಿಡುವಳಿಯಲ್ಲಿ ಪರಿಶಿಷ್ಟ ಜಾತಿಯವರು ಒಡೆತನ ಹೊಂದಿರುವ ಪ್ರಮಾಣ ಶೇ. ೧೯.೦೩ ರಷ್ಟು ಇದ್ದರೆ ಒಟ್ಟು ಪರುಷರು ಒಡೆತನ ಹೊಂದಿದವರಲ್ಲಿ ಪರಿಶಿಷ್ಟ ಜಾತಿಯ ಪುರುಷರ ಪ್ರಮಾಣ ಶೇ. ೧೯.೩೦ ಪುರುಷರು ಭೂ ಮಾಲೀಕರಾಗಿರುವರು. ಜಿಲ್ಲೆಯ ಒಟ್ಟು ಮಹಿಳಾ ಒಡತಿಯರಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರ ಪ್ರಮಾಣ ಶೇ. ೧೭.೩೪ರಷ್ಟಿದೆ.

ಅದೇ ರೀತಿ ಭೂ ಒಡೆತನದ ಸಂಖ್ಯೆಯಂತೆ ಭೂ ವಿಸ್ತೀರ್ಣವನ್ನು ಗಮನಿಸಿದಾಗ ಐದು ತರಹದ ಹಿಡುವಳಿಗಳಲ್ಲಿ ಭೂಮಿಯ ವಿಸ್ತೀರ್ಣದಲ್ಲಿ ಜಿಲ್ಲೆಯಲ್ಲಿಯೇ ಪರಿಶಿಷ್ಟ ಜಾತಿಯವರು ಒಟ್ಟು ಭೂ ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣವು ಶೇ. ೧೩.೧೭ ಹೆಕ್ಟೇರುಗಳು. ಜಿಲ್ಲೆಯಲ್ಲಿ ಒಟ್ಟು ಪುರುಷರ ಸ್ವಾಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣದಲ್ಲಿ ಪರಿಶಿಷ್ಟ ಜಾತಿಯಲ್ಲಿ ಪುರುಷರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣವು ಶೇ. ೧೩.೪೧ ಹೆಕ್ಟೇರುಗಳಷ್ಟು ಮಾತ್ರ. ಅಂತೆಯೇ ಮಹಿಳಾ ಭೂ ಒಡತಿಯರಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರ ಹಿಡಿತದಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೧೧.೫೭ ಹೆಕ್ಟೇರುಗಳು.

ಪರಿಶಿಷ್ಟ ಜಾತಿಯಲ್ಲಿ ಭೂ ಒಡೆತನ ಹೊಂದಿರುವ ಕೋಷ್ಟಕದಲ್ಲಿ ತಾಲೂಕುವಾರು ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಗಮನಿಸಿದಾಗ, ಯಾದಗಿರಿ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯವರು ಅಧಿಕವಾಗಿ ಭೂ ಒಡೆತನ ಹೊಂದಿರುವ ಸಂಖ್ಯೆಯು ದೊರೆತರೆ, ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂ ಒಡೆತನ ಸಂಖ್ಯೆ ಹೊಂದಿರುವ ತಾಲೂಕು ಅಫಜಲಪೂರ. ಅಂತೆಯೇ ಭೂ ವಿಸ್ತೀರ್ಣವನ್ನು ಗಮನಿಸಿದರೆ ಜಿಲ್ಲೆಯಲ್ಲಿಯೇ ಪರಿಶಿಷ್ಟ ಜಾತಿಯಲ್ಲಿ ಅಧಿಕ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಚಿತ್ತಾಪೂರ. ಆದರೆ ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕು ಅಫಜಲಪೂರ. ಅಫಜಲಪೂರ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯವರು ಒಡೆತನ ಹೊಂದಿರುವ ಸಂಖ್ಯೆಯು ಕಡಿಮೆಯಿದೆ ಮತ್ತು ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವು ಕಡಿಮೆಯಿದೆ. ಯಾದಗಿರಿ ತಾಲೂಕಿನಲ್ಲಿ ಭೂ ಒಡೆತನದ ಸಂಖ್ಯೆ ಅಧಿಕವಾಗಿದೆ ಆದರೆ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆಯಿದೆ. ಚಿತ್ತಾಪೂರ ತಾಲೂಕಿನಲ್ಲಿ ಭೂ ಒಡೆತನದ ಸಂಖ್ಯೆ ಕಡಿಮೆಯಿದ್ದು ಭೂಮಿಯ ವಿಸ್ತೀರ್ಣದ ಪ್ರಮಾಣ ಅಧಿಕವಾಗಿದೆ.

ಜಿಲ್ಲೆಯಲ್ಲಿಯೇ ಗುಲಬರ್ಗಾ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯು ಅಧಿಕವಾಗಿದ್ದರೂ ಅವರು ಒಡೆತನ ಹೊಂದಿರುವ ಸಂಖ್ಯೆಯ ಪ್ರಮಾಣ ಮಾತ್ರ ಶೇ. ೭.೬೧ರಷ್ಟು. ಅಫಜಲಪೂರ ತಾಲೂಕಿನಲ್ಲಿ ಜಿಲ್ಲೆಯಲ್ಲಿಯೇ ಅತಿ ಕಡಿಮೆ ಪ್ರಮಾಣದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯಿದ್ದರೂ ಅಲ್ಲಿಯ ಒಡೆತನದ ಪ್ರಮಾಣ ಶೇ. ೧೫.೫೯ರಷ್ಟಿದೆ. ಅಂತೆಯೇ ಜಿಲ್ಲೆಯಲ್ಲಿಯೇ ಪರಿಶಿಷ್ಟ ಜಾತಿಯವರಲ್ಲಿ ಶೇ. ೧೪.೨೨ ರಷ್ಟು ಜನರು ಭೂಮಿಯ ಮಾಲೀಕರಾಗಿರುವರು.

ಅಂತೆಯೇ ತಾಲೂಕುವಾರು ಮಹಿಳೆಯರ ಭೂ ಒಡೆತನದ ಸ್ಥಿತಿಯನ್ನು ಗಮನಿಸಿದಾಗ ಅಫಜಲಪೂರ ತಾಲೂಕಿನಲ್ಲಿ ಶೇ. ೧೬.೮೫ರಷ್ಟು ಮಹಿಳೆಯರು ಜಿಲ್ಲೆಯಲ್ಲಿಯೇ ಅಧಿಕ ಭೂ ಒಡತಿಯರಾದರೆ ಯಾದಗಿರಿ

ತಾಲೂಕು ಶೇ. ೯.೩೬ರಷ್ಟು ಮಹಿಳೆಯರು ಒಡೆತನ ಹೊಂದಿದ್ದು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಮಹಿಳೆಯರ ಒಡೆತನವನ್ನು ಹೊಂದಿದೆ. ಹಾಗೆಯೇ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಯಾದಗಿರಿ ತಾಲೂಕು ಶೇ. ೮.೬೬ ಹೆಕ್ಟೇರು ಭೂಮಿಯು ಮಹಿಳೆಯರ ಅಧೀನದಲ್ಲಿದೆ ಇದು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕಾಗಿದೆ. ಅಫಜಲಪೂರ ತಾಲೂಕು ಅಧಿಕ ಭೂಮಿಯ ವಿಸ್ತೀರ್ಣ ಹೊಂದಿರುವ ತಾಲೂಕಾಗಿದೆ, ಶೇ. ೧೪.೮೪ ಹೆಕ್ಟೇರುಗಳಷ್ಟು. ಇಲ್ಲಿ ಗಮನಿಸುವ ಅಂಶವೇನೆಂದರೆ ಜಿಲ್ಲೆಯಲ್ಲಿಯೇ ಪರಿಶಿಷ್ಟ ಜಾತಿಯವರಲ್ಲಿ ಭೂ ಒಡೆತನದ ಸಂಖ್ಯೆಯಲ್ಲಿ ಮತ್ತು ಭೂಮಿಯ ವಿಸ್ತೀರ್ಣದಲ್ಲಿ ಅಧಿಕವಿದ್ದರೂ ಮಹಿಳೆಯರು ಭೂ ಒಡತಿಯರಾಗುವ ಸಂದರ್ಭದಲ್ಲಿ ಲಿಂಗ ಭೇದವನ್ನು ಮಾಡಿದೆ. ಈ ತಾಲೂಕಿನಲ್ಲಿ ಮಹಿಳೆಯರು ಅತಿ ಕಡಿಮೆ ಪ್ರಮಾಣದಲ್ಲಿ ಭೂ ಒಡತಿಯರಾಗುವುದಲ್ಲದೆ ಭೂಮಿಯ ಪ್ರಮಾಣವನ್ನು ಕಡಿಮೆ ಹೊಂದಿದ್ದಾರೆ. ಇಲ್ಲಿ ಮಹಿಳೆಯರು ಅತಿ ಕಡಿಮೆ ಪ್ರಮಾಣದಲ್ಲಿ ಒಡತಿಯರಾಗಿದ್ದರಿಂದ ಜಿಲ್ಲೆಯಲ್ಲಿಯೇ ಈ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರು ಅಧಿಕವಾಗಿ ಕೃಷಿ ಕಾರ್ಮಿಕರಾಗಿರುವುದನ್ನು ಕಾಣಬಹುದಾಗಿದೆ. ಅಫಜಲಪೂರ ತಾಲೂಕು ಭೂ ಒಡೆತನದ ಸಂಖ್ಯೆ ಹಾಗೂ ಭೂಮಿಯ ವಿಸ್ತೀರ್ಣದಲ್ಲಿ ಕಡಿಮೆಯಿದ್ದರೂ ಮಹಿಳೆಯರ ಭೂ ಒಡೆತನದ ಸಂದರ್ಭದಲ್ಲಿ ಅಧಿಕ ಪ್ರಮಾಣದಲ್ಲಿ ಭೂ ಒಡೆತನವನ್ನು ಹೊಂದಿದೆ. ಇಲ್ಲಿ ಪುರುಷರು ಕೇವಲ ಶೇ. ೮೩.೧೫ ರಷ್ಟು ಮಾತ್ರ ಒಡೆತನ ಹೊಂದಿದ್ದಾರೆ. ಆದರೆ ಯಾದಗಿರಿ ತಾಲೂಕಿನಲ್ಲಿ ಪುರುಷರು ಶೇ. ೯೦.೬೪ ರಷ್ಟು ಪ್ರಮಾಣದ ಒಡೆತನವನ್ನು ಹೊಂದಿದ್ದಾರೆ. ಹಾಗೆಯೇ ವಿಸ್ತೀರ್ಣದಲ್ಲಿಯೂ ಕೂಡ ಶೇ. ೯೧.೩೪ ಹೆಕ್ಟೇರ್‌ನಷ್ಟು ಪುರುಷರು ಯಾದಗಿರಿ ತಾಲೂಕಿನಲ್ಲಿ ಒಡೆತನವನ್ನು ಹೊಂದಿರುವರು. ಈ ತಾಲೂಕಿನಲ್ಲಿ ಮಹಿಳೆಯರು ಕೇವಲ ಒಂದು ಪ್ರತಿಶತ ಮಾತ್ರ ಒಡೆತನವನ್ನು ಹೊಂದಿರುವುದು ಕಂಡುಬರುತ್ತದೆ. ಅಫಜಲಪೂರ ತಾಲೂಕಿನಲ್ಲಿ ಶೇ. ೮೫.೧೬ ಹೆಕ್ಟೇರುಗಳಷ್ಟು ಜಿಲ್ಲೆಯಲ್ಲಿಯೇ ಪುರುಷರು ಅತಿ ಕಡಿಮೆ ಭೂ ಒಡೆತನ ಹೊಂದಿದ್ದಾರೆ.

ಮಹಿಳೆಯರ ಒಡೆತನದ ಪ್ರಮಾಣದಲ್ಲಿ ಪುರುಷರಿಗೆ ಹೋಲಿಸಿದರೆ ಪ್ರತಿಯೊಂದು ತಾಲೂಕಿನಲ್ಲಿ ಮಹಿಳೆಯರ ಪ್ರಮಾಣ ಕಡಿಮೆಯಿದ್ದರೂ ಅವರ ಸ್ವಾಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಸಂಖ್ಯೆಗಿಂತ ಕಡಿಮೆಯಿದೆ. ಅಫಜಲಪೂರ ತಾಲೂಕು ಭೂ ವಿಸ್ತೀರ್ಣದಲ್ಲಿ ಅಧಿಕವಾಗಿದ್ದರೂ ಒಡೆತನದ ಸಂಖ್ಯೆಗೆ ಹೋಲಿಸಿದರೆ ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ಪ್ರಮಾಣವು ಕಡಿಮೆಯಿದೆ. ಹತ್ತು ತಾಲೂಕುಗಳಲ್ಲಿ ಮಹಿಳೆಯರು ಭೂ ಒಡೆತನದ ಸಂಖ್ಯೆಗಿಂತ ಅವರು ಪಡೆದ ಭೂಮಿಯ ಪ್ರಮಾಣವನ್ನು ಕಡಿಮೆ ಹೊಂದಿದ್ದಾರೆ.

ಪರಿಶಿಷ್ಟ ಜಾತಿಯಲ್ಲಿ ಒಟ್ಟು ಮಹಿಳೆಯರು ಒಡೆತನ ಹೊಂದಿದವರು ಶೇ. ೧೨.೬೧ ಮಾತ್ರ. ಪುರುಷರು ಶೇ. ೮೭.೩೯ ರಷ್ಟಿರುವರು. ಅವರ ಅಧೀನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣ ಜಿಲ್ಲೆಯಲ್ಲಿಯೇ ಮಹಿಳೆಯರು ಕೇವಲ ಶೇ. ೧೧.೫೩ ಹೆಕ್ಟೇರು ಹೊಂದಿದ್ದರೆ ಪುರುಷರು ಶೇ. ೮೮.೪೭ರಷ್ಟು ಹೆಕ್ಟೇರು ಹೊಂದಿರುವರು.

ಸಮಾಜದಲ್ಲಿ ತುಳಿತಕ್ಕೆ ಒಳಗಾದಂಥ ಪರಿಶಿಷ್ಟ ಜಾತಿಯವರು ಅತಿಕಡಿಮೆ ಪ್ರಮಾಣದಲ್ಲಿ ಭೂಮಿಯ ಒಡೆತನ ಹೊಂದಿದ್ದರೂ ಕೂಡ ಇವರಲ್ಲಿ ಮಹಿಳೆಯರ ಒಡೆತನದ ಸಂದರ್ಭದಲ್ಲಿ ಲಿಂಗ ತಾರತಮ್ಯವಾಗಿರುವುದನ್ನು ಕಾಣಬಹುದು. ಈ ವರ್ಗದಲ್ಲಿಯೂ ಪಿತೃ ಪ್ರಧಾನ ಮೌಲ್ಯಗಳು ಬೇರೂರಿರುವುದನ್ನು ಗಮನಿಸಬಹುದು. ಈ ವರ್ಗದವರಿಗೆ ಭೂ ಒಡೆತನ ಹೊಂದುವಲ್ಲಿ ವರ್ಗತಾರತಮ್ಯವಾದರೆ, ಮಹಿಳೆಯರು ಭೂ ಒಡೆತನ ಹೊಂದುವ ಸಂದರ್ಭದಲ್ಲಿ ಲಿಂಗ ತಾರತಮ್ಯಕ್ಕೆ ಒಳಗಾಗಿದ್ದಾರೆ.

ಈ ಕೋಷ್ಟಕದ ಮೂಲಕ ಪರಿಶಿಷ್ಟ ಜಾತಿಯ ಮಹಿಳೆಯರ ಒಡೆತನದ ಸ್ಥಿತಿಗತಿಯನ್ನು ಗಮನಿಸಲಾಗಿದೆ. ಅಂತೆಯೇ ಪರಿಶಿಷ್ಟ ಪಂಗಡದವರಲ್ಲಿ ಮಹಿಳೆಯರ ಮತ್ತು ಪುರುಷರು ಒಡೆತನ ಹೊಂದಿರುವ ಪ್ರಮಾಣವನ್ನು ನೋಡುವುದು ಅವಶ್ಯಕವಾಗಿದೆ.

**೭.೮. ಪರಿಶಿಷ್ಟ ಪಂಗಡದ ಮಹಿಳೆಯರ ಭೂ ಒಡೆತನದ ವಿವರ**

ಪರಿಶಿಷ್ಟ ಜಾತಿಯ ಜನರು ಎದುರಿಸುತ್ತಿರುವ ಸಮಸ್ಯೆಯನ್ನೇ ಪರಿಶಿಷ್ಟ ಪಂಗಡದ ಜನರು ಅನುಭವಿಸುತ್ತಿದ್ದಾರೆ. ಇವರು ಸಹ ಅತಿಸಣ್ಣ ಮತ್ತು ಸಣ್ಣ ಭೂ ಹಿಡುವಳಿಯ ಮೇಲೆ ಮಾತ್ರ ಒಡೆತನವನ್ನು ಹೊಂದಿದ್ದಾರೆ. ದೊಡ್ಡ ಭೂ ಹಿಡುವಳಿಯ ಒಡೆತನವು ಬೆರಳೆಣಿಕೆಯಲ್ಲಿ ಮಾತ್ರ ಇವರಿಗಿದೆ. ಅದರಲ್ಲಿಯೂ ಅಧಿಕವಾಗಿ ಒಡೆತನವನ್ನು ಪುರುಷರೇ ಹೊಂದಿರುವವರು. ಮಹಿಳೆಯರು ಏನಿದ್ದರೂ ಅತಿಸಣ್ಣ ಮತ್ತು ಸಣ್ಣ ಭೂ ಹಿಡುವಳಿಯ ಒಡತಿಯರಾಗಿದ್ದಾರೆ. ಮಹಿಳೆಯರು ಇಂಥ ಭೂಮಿಯ ಒಡೆತನ ಹೊಂದಿದರೂ ಸಹ ಜಂಟಿ ಒಡೆತನವನ್ನು ಹೊಂದಿದ್ದಾರೆ. ಇವರಿಗೆ ಹೆಸರಿಗೆ ಮಾತ್ರ ಭೂಮಿಯಿದ್ದು, ಅದರ ಸಂಪೂರ್ಣ ನಿರ್ವಹಣೆ ಮತ್ತು ನಿಯಂತ್ರಣ ಪುರುಷರದಾಗಿದೆ. ಸಾಲ ಸೌಲಭ್ಯಗಳನ್ನು ಪಡೆಯುವುದಕ್ಕೋಸ್ಕರ ಸ್ತ್ರೀಯರ ಹೆಸರಿನಲ್ಲಿ ಭೂಮಿ ಮಾಡುತ್ತಾರೆ. ಇನ್ನೂ ಕೆಲವು ಕುಟುಂಬಗಳಲ್ಲಿ ಪುರುಷರು ಇರದಿದ್ದಾಗ ಮಾತ್ರ ಭೂಮಿಯ ಸಂಪೂರ್ಣ ಹಕ್ಕು ಮತ್ತು ನಿಯಂತ್ರಣ ಮಹಿಳೆಯ ಪಾಲಿಗೆ ಬರುತ್ತದೆ. ಆದರೆ ಅವಳು ಅಲ್ಲಿಯೂ ಪುರುಷ ಸಂಬಂಧಿಕರ ಸಹಾಯವನ್ನು ಪಡೆಯುವುದು ಕಂಡುಬರುತ್ತದೆ. ಪಿತೃ ಪ್ರಧಾನ ಕುಟುಂಬ ರಚನೆ ಮೇಲ್ವರ್ಗದ ಕುಟುಂಬಗಳಿಗೆ ಸೀಮಿತವಾಗಿರದೆ ಕೆಳವರ್ಗದ ಕುಟುಂಬಗಳಲ್ಲಿಯೂ ಕಂಡುಬರುವುದು ಸಹಜ. ಇಲ್ಲಿಯ ಪುರುಷನು ಮೇಲ್ವರ್ಗದ ಜಮೀನಿನಲ್ಲಿ ಜೀತದ ಕೆಲಸ ಮಾಡಿದರೂ ತನ್ನ ಕುಟುಂಬದಲ್ಲಿ ಯಜಮಾನನಾಗಿರುತ್ತಾನೆ. ಪರಿಶಿಷ್ಟ ಪಂಗಡದಲ್ಲಿಯೂ ಕೂಡ ಜನರು ಸಂಪೂರ್ಣವಾಗಿ ತಮ್ಮ ಭೂಮಿಯ ಮೇಲೆ ಅವಲಂಬಿತರಾಗದೆ ಕೃಷಿ ಕಾರ್ಮಿಕರಾಗಿದ್ದಾರೆ. ತಮ್ಮ ಭೂಮಿಯ ಆದಾಯ ಕಡಿಮೆಯಿರುವುದರಿಂದ ಮನೆಮಂದಿಯೆಲ್ಲ ಕೂಲಿಯನ್ನೇ ಅವಲಂಬಿಸುವಂತಾಗಿದೆ. ಇವರು ಯಾವುದೇ ಹಬ್ಬಹರಿದಿನ ಬಂದರೂ ಸಹ ಸಾಲವನ್ನು ಮಾಡಬೇಕಾಗುತ್ತದೆ. ಇವರು ಅಧಿಕವಾಗಿ ಸಾಲ ಮಾಡುವುದು ತಾವು ಕೂಲಿ ಕೆಲಸಕ್ಕೆ ಹೋಗುವ ಭೂ ಮಾಲೀಕರಲ್ಲಿ. ಕೆಲವರು ವ್ಯವಹಾರಜ್ಞಾನ ಇದ್ದವರು ಮಾತ್ರ ಸರ್ಕಾರದ ಸೌಲಭ್ಯವನ್ನು ಪಡೆಯುವರು. ಪರಿಶಿಷ್ಟ ಪಂಗಡದ ಜನರಲ್ಲಿಯೂ ಎಷ್ಟೇ ಭೂಮಿ ಹೊಂದಿದ್ದರೂ ಕೂಡ ಅವರ ಸಮುದಾಯದಲ್ಲಿ ಮಾತ್ರ ಉನ್ನತ ಸ್ಥಾನವಿರುವುದೇ ಹೊರತಾಗಿ ಮೇಲ್ವರ್ಗದವರ ಎದುರು ಆತ ಭೂಮಿಯಿದ್ದು ಇಲ್ಲದವರ ಹಾಗೆಯೇ. ೨೦೦೦-೨೦೦೧ರ ವ್ಯವಸಾಯ ಗಣತಿಯ ಪ್ರಕಾರ ಪರಿಶಿಷ್ಟ ಪಂಗಡದಲ್ಲಿ ಭೂ ಒಡೆತನ ಹೊಂದಿದವರು ರಾಜ್ಯದಲ್ಲಿಯೇ ಶೇ. ೧೪.೪೮ರಷ್ಟು. ಇವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣ ಕೇವಲ ೨.೧ ಪ್ರತಿಶತದಷ್ಟು. ರಾಜ್ಯದಲ್ಲಿಯೇ ಇವರು ಅತಿ ಕಡಿಮೆ ಭೂ ಒಡೆತನ ಹೊಂದಿದ್ದಾರೆ ಅಧ್ಯಯನ ಕ್ಷೇತ್ರವಾದ ಗುಲಬರ್ಗಾ ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡದವರು ಎಷ್ಟು ಪ್ರಮಾಣದಲ್ಲಿ ಒಡೆತನವನ್ನು ಹೊಂದಿದ್ದಾರೆ ಎನ್ನುವುದನ್ನು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

## ಕೋಷ್ಟಕ–೮

## ಪರಿಶಿಷ್ಟ ಪಂಗಡದ ಮಹಿಳೆಯರ ಭೂ ಒಡೆತನದ ವಿವರ: ಗುಲಬರ್ಗಾ ಜಿಲ್ಲೆ

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರಸಂ | ತಾಲೂಕುಗಳು | ಪರಿಶಿಷ್ಟ ಪಂಗಡದ ಒಟ್ಟು ಭೂ ಒಡೆತನ | | ಪರಿಶಿಷ್ಟ ಪಂಗಡದ ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೧೮ | ೨೩ | ೬ (೩೩.೩೩) | ೧೦ (೪೩.೪೭) |
| ೨ | ಆಳಂದ | ೪೩೦ | ೧೦೨೦ | ೩೨ (೭.೪೪) | ೬೨ (೬.೦೭) |
| ೩ | ಚಿಂಚೋಳಿ | ೫೩ | ೧೩೫ | ೧೧ (೨೦.೭೫) | ೨೦ (೧೪.೮೧) |
| ೪ | ಚಿತ್ತಾಪೂರ | ೨೨೫ | ೫೩೨ | ೩೪ (೧೫.೧೧) | ೧೦೫ (೧೯.೭೩) |
| ೫ | ಗುಲಬರ್ಗಾ | ೧೨೨ | ೩೪೧ | ೧೭ (೧೩.೯೩) | ೪೭ (೧೩.೭೮) |
| ೬ | ಜೇವರ್ಗಿ | ೧೭೩೯ | ೪೬೩೨ | ೨೭೩ (೧೫.೬೯) | ೬೬೨ (೧೪.೨೯) |
| ೭ | ಸೇಡಂ | ೬೦೮ | ೧೨೦೫ | ೭೫ (೧೨.೩೩) | ೧೨೪ (೧೦.೨೯) |
| ೮ | ಶಹಾಪುರ | ೪೯೪೬ | ೧೦೫೧೦ | ೭೩೮ (೧೪.೯೨) | ೧೪೭೦ (೧೩.೯೮) |
| ೯ | ಸುರಪುರ | ೯೬೯೦ | ೨೦೯೮೯ | ೧೨೮೦ (೧೩.೨೦) | ೨೭೩೨ (೧೩.೦೧) |
| ೧೦ | ಯಾದಗಿರಿ | ೫೩೧೪ | ೮೪೭೩ | ೫೫೬ (೧೦.೪೬) | ೮೯೮ (೧೦.೫೯) |
| ಒಟ್ಟು | | ೨೩೧೪೫ | ೪೭೯೬೦ | ೩೦೨೨ (೧೩.೫೦) | ೬೧೩೦ (೧೨.೮೦) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

ಪರಿಶಿಷ್ಟ ಪಂಗಡದವರಲ್ಲಿ ಭೂ ಒಡೆತನ ಹೊಂದಿರುವ ಕೋಷ್ಟಕವನ್ನು ಗಮನಿಸಿದಾಗ ಗುಲಬರ್ಗಾ ಜಿಲ್ಲೆಯ ಐದು ತರಹದ ಹಿಡುವಳಿಗಳಲ್ಲಿ ಇವರ ಪ್ರಮಾಣ ಶೇ. ೪.೩೧ ರಷ್ಟು ಮತ್ತು ಇವರ ಒಡೆತನ ಹೊಂದಿದ ಭೂಮಿಯ ಪ್ರಮಾಣ ಶೇ. ೩.೪೦ ಹೆಕ್ಟೇರುಗಳಷ್ಟು. ಜಿಲ್ಲೆಯಲ್ಲಿಯೇ ಇವರ ಒಡೆತನದ ಪ್ರಮಾಣ ಮತ್ತು ವಿಸ್ತೀರ್ಣದ ಪ್ರಮಾಣ ತುಂಬಾ ಕಡಿಮೆ ಇದೆ. ಜಿಲ್ಲೆಯ ಐದು ತರಹದ ಹಿಡುವಳಿಗಳಲ್ಲಿ ಒಟ್ಟು ಪುರುಷ ಭೂ ಒಡೆತನ ಹೊಂದಿದವರಲ್ಲಿ ಪರಿಶಿಷ್ಟ ಪಂಗಡದಲ್ಲಿ ಒಟ್ಟು ಪುರುಷರು ಶೇ. ೪.೩೫ ರಷ್ಟು ಸಂಖ್ಯೆಯಲ್ಲಿ ಒಡೆತನವನ್ನು ಹೊಂದಿರುವರು. ಅಲ್ಲದೆ ಒಟ್ಟು ಪುರುಷರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದಲ್ಲಿ ಪರಿಶಿಷ್ಟ ಪಂಗಡದ ಪುರುಷರು ಹೊಂದಿರುವ ಭೂಮಿಯ ಪ್ರಮಾಣ ಶೇ. ೩.೪೨ ಹೆಕ್ಟೇರುಗಳು. ಹಾಗೆಯೇ ಐದು ತರಹದ ಹಿಡುವಳಿಯಲ್ಲಿ ಮಹಿಳೆಯರು ಒಡೆತನ ಹೊಂದಿದವರಲ್ಲಿ ಪರಿಶಿಷ್ಟ ಪಂಗಡದ ಮಹಿಳೆಯರ ಒಡೆತನದ ಪ್ರಮಾಣ ಶೇ. ೪.೦೭ ರಷ್ಟಿದ್ದರೆ ಒಟ್ಟು ಮಹಿಳೆಯರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಶೇ. ೩.೩೨ ಹೆಕ್ಟೇರುಗಳಷ್ಟು ಪರಿಶಿಷ್ಟ ಪಂಗಡದ ಮಹಿಳೆಯರು ಹೊಂದಿರುವರು. ಇದರಿಂದ ತಿಳಿದು ಬರುವುದೇನೆಂದರೆ ಜಿಲ್ಲೆಯಲ್ಲಿಯೇ ಪರಿಶಿಷ್ಟ ಪಂಗಡದ ಪುರುಷರು ಅತಿ ಕಡಿಮೆ ಪ್ರಮಾಣದಲ್ಲಿ ಭೂ ಒಡೆತನ ಹೊಂದಿದ್ದರೆ ಇನ್ನು ಮಹಿಳೆಯ ಪ್ರಮಾಣ ಅವರಿಗಿಂತಲೂ ಕಡಿಮೆಯಿದೆ. ಭೂ ಒಡೆತನ ಹೊಂದಿದವರ ಸಂಖ್ಯೆಯ ಪ್ರಮಾಣ ಕಡಿಮೆಯಿರುವುದರ ಜೊತೆಗೆ ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಪುರುಷರಲ್ಲಾಗಲಿ, ಮಹಿಳೆಯರಲ್ಲಾಗಲಿ ತೀರ ಕಡಿಮೆ ಇರುವುದು ಕಂಡುಬಂದಿದೆ.

ಈ ಪಂಗಡದವರಲ್ಲಿ ತಾಲೂಕುವಾರು ಒಡೆತನ ಹೊಂದಿದವರ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣವನ್ನು ಗಮನಿಸಿದಾಗ ಜಿಲ್ಲೆಯಲ್ಲಿ ಒಟ್ಟು ಪರಿಶಿಷ್ಟ ಪಂಗಡದವರಲ್ಲಿ ಅಧಿಕ ಸಂಖ್ಯೆಯಲ್ಲಿ ಭೂ ಒಡೆತನ ಹೊಂದಿದ ತಾಲೂಕು ಸುರಪುರ. ಹಾಗೆಯೇ ಅತಿ ಕಡಿಮೆ ಭೂ ಒಡೆತನ ಹೊಂದಿರುವ ತಾಲೂಕು ಅಫಜಲಪೂರ. ಇವರು ಭೂ ಮಾಲೀಕತ್ವ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಸುರಪುರ ತಾಲೂಕಿನಲ್ಲಿ ಅಧಿಕ ಪ್ರಮಾಣದಲ್ಲಿ ಭೂಮಿಯ ವಿಸ್ತೀರ್ಣ ಕಂಡುಬಂದರೆ, ಅಫಜಲಪೂರ ತಾಲೂಕಿನಲ್ಲಿ ಅತಿಕಡಿಮೆ ಭೂಮಿಯ ವಿಸ್ತೀರ್ಣವನ್ನು ಕಾಣಬಹುದು. ಜಿಲ್ಲೆಯ ಸುರಪುರ, ಶಹಾಪೂರ, ಯಾದಗಿರಿ, ಜೇವರ್ಗಿಯನ್ನೊಳಗೊಂಡಂತೆ ಈ ತಾಲೂಕುಗಳಲ್ಲಿ ಪರಿಶಿಷ್ಟ ಪಂಗಡದವರ ಭೂ ಒಡೆತನದ ಸಂಖ್ಯೆಯು ಅಧಿಕವಾಗಿದೆ. ಕಾರಣ ಈ ಪ್ರದೇಶ ಇತಿಹಾಸದಲ್ಲಿ ನಾಯಕರ ಆಳ್ವಿಕೆಯಲ್ಲಿ ಒಳಪಟ್ಟಿತ್ತು. ಹೀಗಾಗಿ ಈ ತಾಲೂಕುಗಳಲ್ಲಿ ಪರಿಶಿಷ್ಟ ಪಂಗಡದವರ ಪ್ರಮಾಣ ಅಧಿಕವಾಗಿದೆ. ಜಿಲ್ಲೆಯ ಅಫಜಲಪೂರ ತಾಲೂಕಿನಲ್ಲಿ ಅತಿ ಕಡಿಮೆ ಪ್ರಮಾಣದಲ್ಲಿ ಈ ಸಮುದಾಯದವರು ಇರುವುದನ್ನು ಕಾಣಬಹುದಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಮಹಿಳೆಯರ ಒಡೆತನದ ಸ್ಥಾನಮಾನವನ್ನು ಗಮನಿಸಿದಾಗ, ಅಫಜಲಪೂರ ತಾಲೂಕಿನಲ್ಲಿ ಅತಿ ಕಡಿಮೆ ಪ್ರಮಾಣದ ಜನಸಂಖ್ಯೆಯನ್ನು ಹೊಂದಿದ್ದರೂ ಮಹಿಳೆಯರ ಒಡೆತನದ ಸಂಖ್ಯೆಯಲ್ಲಿ ಹೆಚ್ಚಾಗಿದೆ. ಇಲ್ಲಿ ಮಹಿಳೆಯರು ಶೇ. ೩೩.೩೩ರಷ್ಟು ಭೂ ಒಡತಿಯರಾಗಿರುವರು. ಈ ತಾಲೂಕಿನಲ್ಲಿ ಮಹಿಳೆಯರ ಒಡೆತನದ ಪ್ರಮಾಣವು ಅಧಿಕವಾದರೆ ಜಿಲ್ಲೆಯ ಇತರೆ ತಾಲೂಕುಗಳಿಗೆ ಹೋಲಿಸಿದರೆ ಈ ತಾಲೂಕಿನಲ್ಲಿ ಪುರುಷರ ಒಡೆತನದ ಪ್ರಮಾಣ ಕಡಿಮೆಯಿದೆ. ಇಲ್ಲಿ ಕೇವಲ ಶೇ. ೬೬.೬೭ ಪುರುಷರು ಭೂ ಮಾಲೀಕರಾಗಿರುವರು. ಅತಿ ಕಡಿಮೆ ಮಹಿಳಾ ಭೂ ಮಾಲೀಕರು ಇರುವ ತಾಲೂಕು ಆಳಂದ. ಇಲ್ಲಿಯ ಮಹಿಳೆಯರು ಕೇವಲ ಶೇ. ೭.೪೪ರಷ್ಟು

ಮಾತ್ರ ಒಡತಿಯರಾಗಿದ್ದು ಶೇ. ೯೩.೯೩ರಷ್ಟು ಜಿಲ್ಲೆಯಲ್ಲಿಯೇ ಅಧಿಕ ಪ್ರಮಾಣದಲ್ಲಿ ಪುರುಷರು ಭೂಮಾಲೀಕರಾಗಿರುವರು. ಈ ತಾಲೂಕು ಅವರು ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣದಲ್ಲಿಯೂ ಕಡಿಮೆಯಿದೆ ಇಲ್ಲಿ ಮಹಿಳೆಯರು ಶೇ. ೬.೦೭ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿದರೆ, ಪುರುಷರು ಶೇ. ೯೩.೯೩ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿದ್ದು. ಜಿಲ್ಲೆಯಲ್ಲಿಯೇ ಇವರ ಪ್ರಮಾಣ ಅಧಿಕವಾಗಿದೆ. ಅಫಜಲಪೂರ ತಾಲೂಕಿನಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಅಂದರೆ ಶೇ. ೪೩.೪೭ ಹೆಕ್ಟೇರುಗಳಷ್ಟು ಭೂಮಿಯನ್ನು ಪಡೆದು ಜಿಲ್ಲೆಯಲ್ಲಿಯೇ ಅಧಿಕ ಭೂ ಹಿಡುವಳಿ ಹೊಂದಿರುವ ತಾಲೂಕಾಗಿದೆ.

ಜಿಲ್ಲೆಯಲ್ಲಿ ಮಹಿಳೆಯರ ಒಡೆತನದ ಸಂಖ್ಯೆಗಿಂತ ಭೂ ವಿಸ್ತೀರ್ಣದ ಪ್ರಮಾಣ ಅಧಿಕವಾಗಿರುವ ತಾಲೂಕುಗಳಲ್ಲಿ ಅಫಜಲಪೂರ ತಾಲೂಕು ಒಂದಾಗಿದೆ. ಈ ತಾಲೂಕಿನಲ್ಲಿ ಒಟ್ಟು ಪರಿಶಿಷ್ಟ ಪಂಗಡದವರು ಒಡೆತನ ಹೊಂದಿರುವ ಸಂಖ್ಯೆ ಮತ್ತು ಭೂ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದ್ದರೂ ಸಹ ಮಹಿಳೆಯರು ಹೊಂದಿರುವ ಒಡೆತನದ ಪ್ರಮಾಣದಲ್ಲಿ ಈ ತಾಲೂಕು ಜಿಲ್ಲೆಯಲ್ಲಿಯೇ ಅಧಿಕ ಸಂಖ್ಯೆ ಮತ್ತು ಅಧಿಕ ಭೂಮಿಯ ವಿಸ್ತೀರ್ಣವನ್ನು ಹೊಂದಿದೆ. ಆದರೆ ಮಹಿಳೆಯರ ಸಂಖ್ಯೆಗೆ ಹೋಲಿಸಿದರೆ ಭೂ ವಿಸ್ತೀರ್ಣದ ಪ್ರಮಾಣವು ಇನ್ನು ಅಧಿಕವಾಗಿದೆ. ಈ ತಾಲೂಕಿನಲ್ಲಿ ಅತಿ ಕಡಿಮೆ ಪ್ರಮಾಣದಲ್ಲಿ ಪರಿಶಿಷ್ಟ ಪಂಗಡದವರಿದ್ದರೂ ಸಹ ಮಹಿಳೆಯರು ಆಸ್ತಿ ಪಡೆಯುವಲ್ಲಿ ಸಫಲರಾಗಿದ್ದಾರೆ. ಚಿತ್ತಾಪೂರ ತಾಲೂಕಿನಲ್ಲಿಯೂ ಮಹಿಳೆಯರು ಶೇ. ೧೫.೧೧ ರಷ್ಟು ಒಡತಿಯರಾದರೆ ಶೇ. ೧೯.೭೩ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿರುವರು. ಯಾದಗಿರಿ ತಾಲೂಕಿನಲ್ಲಿ ಒಡೆತನ ಹೊಂದಿದ ಸಂಖ್ಯೆಗೆ ಅನುಗುಣವಾಗಿ ಇಲ್ಲಿ ಭೂಮಿಯನ್ನು ಹೊಂದಿರುವರು. ಶೇ. ೧೦.೪೬ ಮಹಿಳೆಯರು ಒಡತಿಯರಾದರೆ ಶೇ. ೧೦.೫೯ ಹೆಕ್ಟೇರನಷ್ಟು ಭೂಮಿಯನ್ನು ಹೊಂದಿರುವರು.

ಮಹಿಳೆಯರ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣ ಕಡಿಮೆ ಹೊಂದಿರುವ ತಾಲೂಕುಗಳನ್ನು ಗಮನಿಸಿದಾಗ, ಸುರಪುರ ತಾಲೂಕು ಪರಿಶಿಷ್ಟ ಪಂಗಡದವರು ಒಡೆತನ ಹೊಂದಿದ ಸಂಖ್ಯೆಯಲ್ಲಿ ಮತ್ತು ಭೂಮಿಯ ವಿಸ್ತೀರ್ಣ ಪಡೆದವರಲ್ಲಿ ಅಧಿಕವಾಗಿದ್ದಾರೆ. ಆದರೆ ಸ್ತ್ರೀಯರಿಗೆ ಭೂ ಒಡೆತನ ದೊರೆಯುವಲ್ಲಿ ಇಲ್ಲಿಯೂ ತಾರತಮ್ಯವಾಗಿದೆ. ಇಲ್ಲಿ ಮಹಿಳೆಯರು ಕೇವಲ ಶೇ. ೧೩.೨೦ರಷ್ಟು ಭೂ ಒಡತಿಯರಾದರೂ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವು ಶೇ. ೧೩.೦೧ ಹೆಕ್ಟೇರುಗಳಷ್ಟು. ಇಲ್ಲಿ ಭೂ ಒಡೆತನದ ಸಂಖ್ಯೆಗಿಂತಲೂ ಭೂ ವಿಸ್ತೀರ್ಣದ ಪ್ರಮಾಣ ಕಡಿಮೆ ಇದೆ. ಶಹಪೂರ, ಜೇವರ್ಗಿ, ಗುಲಬರ್ಗಾ, ಚಿಂಚೋಳಿ ಮತ್ತು ಆಳಂದ ತಾಲೂಕುಗಳಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ಕಡಿಮೆಯಿದೆ. ಇಲ್ಲಿ ಗಮನಿಸುವ ಅಂಶವೆಂದರೆ ಭೂ ಒಡೆತನ ಸಂಖ್ಯೆ ಮತ್ತು ಭೂ ವಿಸ್ತೀರ್ಣದ ಪ್ರಮಾಣ ಅಧಿಕ ಹೊಂದಿರುವ ತಾಲೂಕುಗಳಲ್ಲಿ ಮಹಿಳೆಯರು ಹೊಂದಿರುವ ಭೂ ವಿಸ್ತೀರ್ಣದ ಪ್ರಮಾಣ ಮತ್ತು ಭೂ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಿದೆ. ಅತಿ ಕಡಿಮೆ ಜನಸಂಖ್ಯೆಯುಳ್ಳ ತಾಲೂಕುಗಳಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಒಡೆತನ ಪಡೆದಿದ್ದಾರೆ.

ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡದ ಮಹಿಳೆಯರು ಕೆಲವೊಂದು ತಾಲೂಕುಗಳಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವು ಅಧಿಕ ಹೊಂದಿದ್ದು, ಕೆಲವೊಂದು ತಾಲೂಕುಗಳಲ್ಲಿ ಕಡಿಮೆ ಹೊಂದಿದ್ದಾರೆ.

ಒಟ್ಟು ಭೂ ಒಡೆತನದ ಸಂಖ್ಯೆಯನ್ನು ಗಮನಿಸಿದಾಗ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣ ತೀರ ಕಡಿಮೆಯಿದೆ. ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡದ ಮಹಿಳೆಯರನ್ನು ಪುರುಷರಿಗೆ ಹೋಲಿಸಿದಾಗ ಶೇ. ೧೩.೫೮ರಷ್ಟು ಮಹಿಳೆಯರು ಒಡೆತನ ಹೊಂದಿದ್ದರೆ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಶೇ. ೧೨.೮೦ ಹೆಕ್ಟೇರು ಮಾತ್ರ ಇದೆ. ಅದೇ ರೀತಿ ಪುರುಷರನ್ನು ಗಮನಿಸಿದಾಗ ಶೇ. ೮೭.೨ ರಷ್ಟು ಒಡೆತನ ಹೊಂದಿದ್ದು ಅವರ ಮಾಲೀಕತ್ವಕ್ಕೆ ಒಳಪಟ್ಟು ಭೂಮಿಯ ಪ್ರಮಾಣವು ಶೇ. ೮೭.೨ ಹೆಕ್ಟೇರುಗಳಷ್ಟಿದೆ.

ಇದರಿಂದ ಸ್ಪಷ್ಟವಾಗಿ ತಿಳಿಯುವುದೆನೆಂದರೆ ಪರಿಶಿಷ್ಟ ಜಾತಿಯವರಿಗಿಂತ ಪರಿಶಿಷ್ಟ ಪಂಗಡದವರ ಭೂ ಒಡೆತನದ ಪ್ರಮಾಣವು ಕಡಿಮೆ ಇದೆ. ಅತೀ ಕಡಿಮೆ ಪ್ರಮಾಣದಲ್ಲಿ ಮಹಿಳೆಯರು ಭೂ ಒಡೆತನ ಹೊಂದಿರುವ ತಾಲೂಕುಗಳಲ್ಲಿ ಪುರುಷ ಪ್ರಧಾನ ಮೌಲ್ಯಗಳ ಜೊತೆಗೆ ಶಿಕ್ಷಣದ ಅಭಾವವಿದೆ. ಹೀಗಾಗಿ ಮಹಿಳೆಯರು ಅತಿ ಕಡಿಮೆ ಪ್ರಮಾಣದಲ್ಲಿ ಭೂ ಒಡೆತನವನ್ನು ಹೊಂದಿರುವರು. ಪರಿಶಿಷ್ಟ ಜಾತಿಯವರಿಗಿಂತ, ಪರಿಶಿಷ್ಟ ಪಂಗಡದವರು ಗುಲಬರ್ಗಾ ಜಿಲ್ಲೆಯಲ್ಲಿ ಸುರಪುರ, ಶಹಾಪುರ, ಜೇವರ್ಗಿ ಮತ್ತು ಯಾದಗಿರಿ ತಾಲೂಕುಗಳಲ್ಲಿ ಮಾತ್ರ ಅಧಿಕವಾಗಿರುವರು. ಉಳಿದ ತಾಲೂಕುಗಳಲ್ಲಿ ಅವರ ಪ್ರಮಾಣ ತೀರ ಕಡಿಮೆ ಇದ್ದರೂ ಮಹಿಳೆಯರು ಸ್ವಲ್ಪಮಟ್ಟಿಗಾದರೂ ಪುರುಷರಿಗೆ ಸರಿಸಮನಾಗಿ ಒಡೆತನ ಹೊಂದಿರುವರು. ಇನ್ನೂ ಅಧಿಕ ಜನಸಂಖ್ಯೆಯುಳ್ಳ ತಾಲೂಕುಗಳಲ್ಲಿ ಮಹಿಳೆ ಭೂ ಒಡೆತನ ಪಡೆಯುವಲ್ಲಿ ಲಿಂಗತಾರತಮ್ಯವಾಗಿದೆ. ಹೀಗಾಗಿ ಅತಿ ಕಡಿಮೆ ಪ್ರಮಾಣದಲ್ಲಿ ಮಹಿಳೆಯರು ಭೂ ಒಡೆತನ ಹೊಂದಿದ್ದಾರೆ.

**೭.೯. ಇತರ ಮಹಿಳೆಯರ ಭೂ ಒಡೆತನದ ವಿವರ**

ಪರಿಶಿಷ್ಟ ಜಾತಿಯವರನ್ನು ಮತ್ತು ಪರಿಶಿಷ್ಟ ಪಂಗಡದವರನ್ನು ಹೊರತುಪಡಿಸಿದ ಜನವರ್ಗದವರನ್ನು 'ಇತರರು' ಎಂದು ಪರಿಗಣಿಸಲಾಗಿದೆ. ಪರಿಶಿಷ್ಟ ಜಾತಿಯ ಮಹಿಳೆಯರು ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗಿಂತ ಈ ವರ್ಗದ ಮಹಿಳೆಯರು ಅಧಿಕವಾಗಿ ಭೂ ಒಡೆತನವನ್ನು ಹೊಂದಿದ್ದಾರೆ. ಹಾಗೆಯೇ ಭೂ ಒಡೆತನದ ಸಂಖ್ಯೆಗೆ ಅನುಗುಣವಾಗಿ ಅಧಿಕ ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದಾರೆ. ಇತರೆ ಜನವರ್ಗದವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಹಾಗೆ ಆರ್ಥಿಕ ದುಸ್ಥಿತಿಗೆ ಒಳಗಾದವರು ಕಡಿಮೆ ಪ್ರಮಾಣದಲ್ಲಿದ್ದಾರೆ. ಇಲ್ಲಿಯೂ ಕೆಲವು ಮಹಿಳೆಯರು ಒಡೆತನದ ಜೊತೆಗೆ ಭೂಮಿಯ ಸಂಪೂರ್ಣ ನಿಯಂತ್ರಣವನ್ನು ಹೊಂದಿದ್ದಾರೆ. ಇನ್ನುಳಿದವರೆಲ್ಲ ಹೆಸರಿಗೆ ಮಾತ್ರ ಭೂಮಿಯನ್ನು ಹೊಂದಿರುವುದನ್ನು ಕಾಣಬಹುದು. ಕಾರಣ ಇವರಲ್ಲಿ ಪಿತೃಪ್ರಧಾನ ವ್ಯವಸ್ಥೆಯು ತಾಂಡವಾಡುತ್ತಿರುವುದರಿಂದ ಆಸ್ತಿಗೆ ಸಂಬಂಧಿಸಿದ ಅಧಿಕಾರವೆಲ್ಲ ಪುರುಷನದೇ ಆಗಿರುತ್ತದೆ. ಹಾಗೆಯೇ ಇಲ್ಲಿಯ ಪುರುಷರು ಅಧಿಕವಾಗಿ ಭೂಮಿಯನ್ನು ಹೊಂದಿರುವುದರಿಂದ ಹೊಲದ ತೆರಿಗೆಯನ್ನು ಕಟ್ಟಬೇಕಾಗುತ್ತದೆ. ಹೀಗಾಗಿ ತಮ್ಮ ಹೆಸರಿನಲ್ಲಿರುವ ಭೂಮಿಯನ್ನು ತಮ್ಮ ಕುಟುಂಬದ ಮಹಿಳೆಯರ ಹೆಸರಿನಲ್ಲಿ ಜಂಟಿಯಾಗಿ ಭೂ ಒಡೆತನವನ್ನು ಹೊಂದುವಂತೆ ಮಾಡುವರು. ಅಲ್ಲದೆ ಮಹಿಳೆಯರಿಗೆ ಕೃಷಿ ಸಾಲವನ್ನು ಪಡೆಯುವಲ್ಲಿ ರಿಯಾಯಿತಿ ಕೂಡ ಇರುವುದರಿಂದ ಮಹಿಳೆಯರ ಹೆಸರಿನಲ್ಲಿ ಭೂಮಿಯನ್ನು ಮಾಡುವುದು ಕಂಡುಬರುತ್ತದೆ. ಅಲ್ಲದೆ ಪತಿ ಸರ್ಕಾರಿ ನೌಕರನಾಗಿದ್ದರೆ ಪತ್ನಿಯ ಹೆಸರಿನಲ್ಲಿ ಭೂಮಿಯನ್ನು ಮಾಡುತ್ತಾರೆ. ಇವರು ಕೃಷಿ ಕೂಲಿಯನ್ನು ಅವಲಂಬಿಸಿರದೇ ಉತ್ತಮ ಜೀವನವನ್ನು ನಡೆಸುತ್ತಿರುವುದು ವಾಸ್ತವ ಸಂಗತಿ. ಗುಲಬರ್ಗಾ ಜಿಲ್ಲೆಯಲ್ಲಿ ಇವರ ಭೂ ಒಡೆತನದ ಪ್ರಮಾಣವನ್ನು ತಾಲೂಕುವಾರು ತಿಳಿಯುವುದು ಅವಶ್ಯಕವಾಗಿದೆ.

## ಕೋಷ್ಟಕ–೯
## ಗುಲಬರ್ಗಾ ಜಿಲ್ಲೆ ಭೂ ಒಡೆತನದ ವಿವರ: ಇತರರಲ್ಲಿ

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರಸಂ | ತಾಲೂಕುಗಳು | ಇತರರಲ್ಲಿ ಭೂ ಒಡೆತನ | | ಇತರೆ ಜಾತಿಯಲ್ಲಿ ಮಹಿಳೆಯರ ಒಡೆತನದಲ್ಲಿರುವ ಭೂ ಹಿಡುವಳಿಗಳ ವಿವರ | |
|---|---|---|---|---|---|
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೩೬೭೯೯ | ೧೧೪೫೦೦ | ೫೨೪೬ (೧೪.೨೫) | ೧೫೨೬೪ (೧೩.೩೩) |
| ೨ | ಆಳಂದ | ೫೧೯೧೯ | ೧೪೩೭೫೧ | ೬೦೫೨ (೧೧.೬೫) | ೧೫೮೨೫ (೧೧.೦೦) |
| ೩ | ಚಿಂಚೋಳಿ | ೩೧೮೪೩ | ೮೯೬೮೯ | ೫೫೦೬ (೧೭.೨೯) | ೧೪೮೩೬ (೧೬.೫೪) |
| ೪ | ಚಿತ್ತಾಪೂರ | ೪೨೪೯೯ | ೧೨೪೪೨೬ | ೬೩೦೯ (೧೪.೮೪) | ೧೮೪೭೩ (೧೪.೮೪) |
| ೫ | ಗುಲಬರ್ಗಾ | ೪೧೪೨೨ | ೧೩೦೨೫೮ | ೬೨೦೮ (೧೪.೯೮) | ೧೭೯೯೬ (೧೩.೮೧) |
| ೬ | ಜೇವರ್ಗಿ | ೪೯೧೭೧ | ೧೫೨೬೪೬ | ೬೪೭೭ (೧೩.೧೭) | ೧೯೫೩೪ (೧೨.೭೯) |
| ೭ | ಸೇಡಂ | ೨೯೩೩೬ | ೭೫೨೨೬ | ೪೩೪೬ (೧೪.೮೧) | ೧೧೪೮೭ (೧೫.೨೬) |
| ೮ | ಶಹಾಪುರ | ೪೫೩೩೬ | ೧೧೭೪೪೫ | ೬೫೧೧ (೧೪.೩೬) | ೧೬೬೧೬ (೧೪.೧೪) |
| ೯ | ಸುರಪುರ | ೪೭೦೫೩ | ೧೧೭೨೧೮ | ೬೨೬೮ (೧೩.೩೨) | ೧೫೩೧೩ (೧೪.೦೦) |
| ೧೦ | ಯಾದಗಿರಿ | ೪೮೩೩೧ | ೯೮೦೩೧ | ೫೪೧೦ (೧೧.೧೯) | ೧೧೫೦೯ (೧೧.೭೪) |
| ಒಟ್ಟು | | ೪೨೩೭೦೯ | ೧೧೬೩೧೯೦ | ೫೮೩೩೩ (೧೩.೭೬) | ೧೫೬೮೫೩ (೧೩.೪೮) |

ಆಧಾರ : ಕೃಷಿ ಗಣತಿ ೨೦೦೦–೨೦೦೧ ಕರ್ನಾಟಕ

ಟಿಪ್ಪಣಿ : ಇತರರು ಎಂದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ದವರನ್ನು ಹೊರತುಪಡಿಸಿ

ಟಿಪ್ಪಣಿ : ಆವರಣದಲ್ಲಿರುವ ಅಂಕಿಗಳು ಶೇಕಡವಾರುಗಳನ್ನು ತಿಳಿಸುತ್ತದೆ.

ಈ ಮೇಲಿನ ಕೋಷ್ಟಕದ ಪ್ರಕಾರ ಗುಲಬರ್ಗಾ ಜಿಲ್ಲೆಯಲ್ಲಿಯೇ ಇತರರಲ್ಲಿ ಮಹಿಳೆಯರು ಶೇ. ೧೩.೭೬ ರಷ್ಟು ಭೂ ಒಡತಿಯರಾದರೆ ಶೇ. ೮೬.೨೪ ರಷ್ಟು ಪುರುಷರು ಭೂ ಒಡೆತನ ಹೊಂದಿದ್ದಾರೆ. ಹಾಗೆಯೇ ವಿಸ್ತೀರ್ಣವನ್ನು ಗಮನಿಸಿದಾಗ ಮಹಿಳೆಯರು ಜಿಲ್ಲೆಯಲ್ಲಿಯೇ ಶೇ. ೧೩.೪೮ ಹೆಕ್ಟೇರ್‌ನಷ್ಟು ಭೂಮಿಯ ವಿಸ್ತೀರ್ಣವನ್ನು ಹೊಂದಿರುವರು. ಪುರುಷರು ಶೇ. ೮೬.೫೨ ಹೆಕ್ಟೇರ್‌ನಷ್ಟು ಭೂಮಿಯ ಒಡೆತನವನ್ನು ಹೊಂದಿರುವರು. ಇಲ್ಲಿ ಪುರುಷರಿಗೆ ಹೋಲಿಸಿದಾಗ ಮಹಿಳೆಯರು ಹೊಂದಿರುವ ಭೂ ಒಡೆತನದ ಪ್ರಮಾಣ ಕಡಿಮೆಯಿದೆ ಮತ್ತು ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣವಂತೂ ಇನ್ನು ಕಡಿಮೆಯಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಐದು ತರಹದ ಹಿಡುವಳಿಗಳಲ್ಲಿ ಇತರರು ಒಟ್ಟು ಭೂ ಒಡೆತನ ಹೊಂದಿದವರು ಶೇ. ೭೯.೦೩ ರಷ್ಟು. ಇವರು ಜಿಲ್ಲೆಯಲ್ಲಿಯೆ ಅಧಿಕ ಪ್ರಮಾಣದಲ್ಲಿ ಭೂ ಒಡೆತನವನ್ನು ಹೊಂದಿದ್ದಾರೆ. ಅಂತೆಯೇ ಒಟ್ಟು ಪುರುಷ ಭೂ ಒಡೆಯರಲ್ಲಿ ಇತರರ ಪ್ರಮಾಣ ಶೇ. ೭೯.೧೦ರಷ್ಟು ಇದ್ದರೆ, ಒಟ್ಟು ಮಹಿಳಾ ಭೂ ಒಡತಿಯರಲ್ಲಿ ಜಿಲ್ಲೆಯಲ್ಲಿ ಇವರ ಪ್ರಮಾಣ ಶೇ. ೭೮.೫೯ ರಷ್ಟಿದೆ. ಜಿಲ್ಲೆಯಲ್ಲಿ ಇತರರು ಒಟ್ಟು ಭೂ ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣ ಶೇ. ೮೨.೮೨ ಹೆಕ್ಟೇರುಗಳು. ಇದರಲ್ಲಿ ಪುರುಷರ ಕೈಯಲ್ಲಿರುವ ಭೂಮಿಯ ವಿಸ್ತೀರ್ಣ ಶೇ. ೮೨.೪೮ ಹೆಕ್ಟೇರುಗಳು, ಮತ್ತು ಒಟ್ಟು ಮಹಿಳೆಯರು ಒಡೆತನ ಹೊಂದಿರುವ ಭೂ ವಿಸ್ತೀರ್ಣದಲ್ಲಿ ಇತರ ವರ್ಗದ ಮಹಿಳೆಯರು ಯಜಮಾನರಾಗಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಶೇ. ೮೫.೧೧ ಹೆಕ್ಟೇರುಗಳು. ಮಹಿಳಾ ಭೂ ಒಡತಿಯರಲ್ಲಿ ಇತರ ಮಹಿಳೆಯರ ಸಂಖ್ಯೆ ಅಧಿಕವಾಗಿದ್ದರೂ ಪುರುಷರಿಗೆ ಹೋಲಿಸಿದರೆ ಮಹಿಳೆಯರ ಭೂ ಒಡೆತನದ ಪ್ರಮಾಣ ಕಡಿಮೆಯೇ ಇದೆ. ಅಂತೆಯೇ ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ಹೋಲಿಸಿದರೆ ಇತರರಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಇರುವುದನ್ನು ನೋಡುತ್ತೇವೆ. ಇದರಿಂದ ಭೂಮಿಯಂತಹ ಆಸ್ತಿಯ ಮಾಲೀಕತ್ವ ಮೇಲ್ವರ್ಗದ ಮಹಿಳೆಯರಿಗೆ ಮೀಸಲಾಗಿದೆ. ಅದರಲ್ಲೂ ಮೇಲ್ವರ್ಗದ ಪುರುಷರು ಅಧಿಕ ಪ್ರಮಾಣದಲ್ಲಿ ಒಡೆತನವನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ.

ಇತರರಲ್ಲಿ ತಾಲೂಕುವಾರು ಭೂ ಒಡೆತನದ ಸ್ಥಿತಿಯನ್ನು ಗಮನಿಸಿದರೆ ಆಳಂದ ತಾಲೂಕಿನಲ್ಲಿ ಇತರರು ಅಧಿಕವಾಗಿ ಭೂ ಒಡೆತನವನ್ನು ಹೊಂದಿರುವರು. ಇಲ್ಲಿ ಪುರುಷರು ಶೇ. ೮೮.೩೫ ರಷ್ಟು ಭೂಮಿಯ ಒಡೆಯರಾದರೆ ಮಹಿಳೆಯರು ಕೇವಲ ಶೇ. ೧೧.೬೫ರಷ್ಟು ಮಾತ್ರ ಒಡೆತನ ಹೊಂದಿದ್ದಾರೆ. ಅಂತೆಯೇ ಜಿಲ್ಲೆಯಲ್ಲಿ ಅತಿ ಕಡಿಮೆ ಭೂ ಒಡೆತನ ಹೊಂದಿರುವ ತಾಲೂಕು ಸೇಡಂ. ಇಲ್ಲಿ ಶೇ. ೧೪.೮೧ ರಷ್ಟು ಮಹಿಳೆಯರು ಭೂ ಒಡತಿಯರಾದರೆ ಶೇ. ೮೫.೧೯ ರಷ್ಟು ಪುರುಷರು ಭೂ ಒಡೆಯರಾಗಿರುವರು. ಅಂತೆಯೇ ಭೂ ವಿಸ್ತೀರ್ಣವನ್ನು ಗಮನಿಸಿದಾಗ ಗುಲಬರ್ಗಾ ಜಿಲ್ಲೆಯಲ್ಲಿ ಇತರರು ಅಧಿಕ ಭೂ ವಿಸ್ತೀರ್ಣ ಹೊಂದಿರುವ ತಾಲೂಕು ಜೇವರ್ಗಿ. ಇಲ್ಲಿ ಮಹಿಳೆಯರಿಗೆ ಶೇ. ೧೨.೭೯ ಹೆಕ್ಟೇರುಗಳಷ್ಟಿದ್ದರೆ, ಶೇ. ೮೭.೨೧ ಹೆಕ್ಟೇರುಗಳಷ್ಟು ಭೂಮಿಯನ್ನು ಪುರುಷರು ತಮ್ಮದಾಗಿಸಿಕೊಂಡಿದ್ದಾರೆ. ಜಿಲ್ಲೆಯಲ್ಲಿಯೇ ಅತಿ ಕಡಿಮೆ ಭೂ ವಿಸ್ತೀರ್ಣ ಹೊಂದಿರುವ ತಾಲೂಕು ಸೇಡಂ. ಈ ತಾಲೂಕು ಭೂ ವಿಸ್ತೀರ್ಣ ಮತ್ತು ಭೂ ಒಡೆತನದ ಸಂಖ್ಯೆಯಲ್ಲೂ ಜಿಲ್ಲೆಯಲ್ಲಿಯೇ ಕಡಿಮೆ ಹೊಂದಿದೆ. ಇಲ್ಲಿ

ಮಹಿಳೆಯರು ಶೇ. ೧೫.೨೬ ಹೆಕ್ಟೇರುಗಳಷ್ಟು ಭೂಮಿಯ ವಿಸ್ತೀರ್ಣದ ಮಾಲೀಕರಾಗಿರುವರು, ಅಂತೆಯೇ ಶೇ. ೮೪.೭೪ ಹೆಕ್ಟೇರುಗಳಷ್ಟು ಭೂಮಿಯನ್ನು ಪುರುಷರು ಹೊಂದಿರುವರು.

ಮಹಿಳೆಯರ ಒಡೆತನದ ಸಂದರ್ಭವನ್ನು ನೋಡಿದಾಗ ಜಿಲ್ಲೆಯಲ್ಲಿ ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಶೇ. ೧೭.೨೯ ರಷ್ಟು ಅಧಿಕ ಪ್ರಮಾಣದಲ್ಲಿ ಭೂ ಒಡತಿಯರಾಗಿದ್ದಾರೆ. ಅಂತೆಯೇ ಜಿಲ್ಲೆಯಲ್ಲಿ ಅತಿ ಕಡಿಮೆ ಮಹಿಳೆಯರು ಯಾದಗಿರಿ ತಾಲೂಕಿನಲ್ಲಿ ಶೇ. ೧೧.೧೯ರಷ್ಟು ಭೂ ಒಡತಿಯರಾಗಿದ್ದಾರೆ. ಯಾದಗಿರಿ ತಾಲೂಕಿನಲ್ಲಿ ಶೇ. ೮೮.೮೧ ರಷ್ಟು ಜಿಲ್ಲೆಯಲ್ಲಿಯೇ ಪುರುಷರು ಅಧಿಕವಾಗಿ ಒಡೆತನ ಹೊಂದಿದ್ದಾರೆ. ಚಿಂಚೋಳಿ ತಾಲೂಕಿನಲ್ಲಿ ಶೇ. ೮೨.೭೧ರಷ್ಟು ಪುರುಷರು ಒಡೆತನ ಹೊಂದಿದ್ದಾರೆ. ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣವನ್ನು ಗಮನಿಸಿದರೆ ಜಿಲ್ಲೆಯ ಚಿಂಚೋಳಿ ತಾಲೂಕಲ್ಲಿ ಮಹಿಳೆಯರು ಅಧಿಕವಾಗಿ ಅಂದರೆ ಶೇ. ೧೬.೫೪ ಹೆಕ್ಟೇರುಗಳಷ್ಟು ಭೂಮಿಯ ವಿಸ್ತೀರ್ಣವನ್ನು ಹೊಂದಿದ್ದಾರೆ. ಆಳಂದ ತಾಲೂಕಿನಲ್ಲಿ ಶೇ. ೧೧ ಹೆಕ್ಟೇರ್‌ನಷ್ಟು ಮಾತ್ರ ಮಹಿಳೆಯರು ಅತಿ ಕಡಿಮೆ ಭೂಮಿಯ ಒಡತಿಯರಾಗಿರುವರು. ಶೇ. ೮೯ ಹೆಕ್ಟೇರುಗಳಷ್ಟು ಭೂಮಿಯನ್ನು ಪುರುಷರು ಆಳಂದ ತಾಲೂಕಿನಲ್ಲಿ ಅಧಿಕವಾಗಿ ಹೊಂದಿದ್ದರೆ, ಚಿಂಚೋಳಿ ತಾಲೂಕಿನಲ್ಲಿ ಶೇ. ೮೩.೪೬ ಹೆಕ್ಟೇರು ಭೂಮಿ ಅಂದರೆ ಜಿಲ್ಲೆಯಲ್ಲಿಯೇ ಈ ತಾಲೂಕಿನಲ್ಲಿ ಪುರುಷರು ಅತಿ ಕಡಿಮೆ ಭೂಮಿಯ ಮಾಲೀಕತ್ವವನ್ನು ಪಡೆದಿರುವರು.

ಮಹಿಳೆಯರ ಒಡೆತನದ ಸಂಖ್ಯೆಗೆ ಅನುಗುಣವಾಗಿ ವಿಸ್ತೀರ್ಣದ ಭೂಮಿಯನ್ನು ಹೊಂದಿರುವ ತಾಲೂಕುಗಳಲ್ಲಿ ಚಿತ್ತಾಪೂರ ಒಂದು. ಇಲ್ಲಿ ಮಹಿಳೆಯರ ಒಡೆತನದ ಸಂಖ್ಯೆ ಶೇ. ೧೪.೮೪ ರಷ್ಟಿದೆ, ಹಾಗೆಯೇ ಅವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣ ಶೇ. ೧೪.೮೪ ಹೆಕ್ಟೇರುಗಳಷ್ಟಿದೆ.

ಇತರ ವರ್ಗದ ಮಹಿಳೆಯರಲ್ಲಿ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣ ಅಧಿಕವಾಗಿ ಹೊಂದಿರುವ ತಾಲೂಕು ಸೇಡಂ. ಈ ತಾಲೂಕು ಒಟ್ಟಾರೆ ಭೂ ಒಡೆತನ ಹೊಂದಿರುವ ಸಂಖ್ಯೆ ಮತ್ತು ವಿಸ್ತೀರ್ಣದಲ್ಲಿ ಕಡಿಮೆಯಿದ್ದರೂ ಮಹಿಳೆಯರ ಒಡೆತನದ ಸಂದರ್ಭದಲ್ಲಿ ಶೇ. ೧೪.೮೧ ಮಹಿಳೆಯರು ಒಡತಿಯರಾದರೆ ಶೇ. ೧೫.೨೬ ಹೆಕ್ಟೇರು ಭೂಮಿಯನ್ನು ಪಡೆದಿರುವರು. ಈ ತಾಲೂಕು ವಿಸ್ತೀರ್ಣದಲ್ಲಿ ಕಡಿಮೆಯಿದ್ದರೂ ಮಹಿಳೆಯರಿಗೆ ಅಧಿಕ ಪ್ರಮಾಣದಲ್ಲಿ ಭೂಮಿಯನ್ನು ನೀಡಿದೆ. ಸುರಪುರ ತಾಲೂಕಿನಲ್ಲಿ ಮಹಿಳೆಯರು ಶೇ. ೧೩.೩೭ರಷ್ಟು ಸಂಖ್ಯೆಯಲ್ಲಿ ಒಡತಿಯರಾದರೆ ಅವರ ಅಧೀನಕ್ಕೆ ಒಳಪಟ್ಟ ಭೂಮಿಯ ವಿಸ್ತೀರ್ಣ ಶೇ. ೧೪ ಹೆಕ್ಟೇರುಗಳು. ಹಾಗೆಯೇ ಯಾದಗಿರಿ ತಾಲೂಕು ಇಲ್ಲಿ ಮಹಿಳೆಯರ ಒಡೆತನದ ಸಂಖ್ಯೆಯಲ್ಲಿ ಅತಿಕಡಿಮೆ ಪ್ರಮಾಣದಲ್ಲಿ ಮಹಿಳೆಯರು ಭೂ ಒಡತಿಯರಾಗಿದ್ದರೂ ಕೂಡ ಅವರ ಅಧೀನದಲ್ಲಿರುವ ಭೂಮಿಯ ವಿಸ್ತೀರ್ಣದ ಪ್ರಮಾಣ ಸಂಖ್ಯೆಗೆ ಹೋಲಿಸಿದರೆ ಅಧಿಕವಾಗಿದೆ. ಮಹಿಳೆಯರು ಅಧಿಕ ಪ್ರಮಾಣದ ಭೂಮಿಯ ವಿಸ್ತೀರ್ಣವನ್ನು ಪಡೆದಿದ್ದರೂ ಅದು ಪುರುಷರಿಗೆ ಹೋಲಿಸಿದರೆ ತುಂಬಾ ಕಡಿಮೆ ಪ್ರಮಾಣದಲ್ಲಿರುವುದು. ಸೇಡಂ, ಚಿತ್ತಾಪೂರ, ಸುರಪುರ, ಯಾದಗಿರಿ ತಾಲೂಕುಗಳಲ್ಲಿ ಮಹಿಳೆಯರಿಗೆ ಸ್ವಲ್ಪಮಟ್ಟಿಗಾದರೂ ಭೂಮಿಯನ್ನು ಕೊಡುವುದರ ಮೂಲಕ ಅವರು ಆಸ್ತಿಯನ್ನು ಹೊಂದುವಂತಾಗಿದೆ. ಕುಟುಂಬಗಳು ಸ್ವಲ್ಪ ಮಟ್ಟಿಗಾದರೂ ಮಹಿಳೆಯರಿಗೆ ಸರಿಸಮಾನವಾಗಿ ಕಾಣುವಂತೆ ಯತ್ನಿಸಿವೆ.

ಇನ್ನೂ ಮಹಿಳಾ ಭೂ ಒಡತಿಯರ ಸಂಖ್ಯೆಗಿಂತಲೂ ಭೂ ವಿಸ್ತೀರ್ಣವನ್ನು ಕಡಿಮೆ ಹೊಂದಿರುವ ತಾಲೂಕು ಅಫಜಲಪೂರ. ಈ ತಾಲೂಕಿನಲ್ಲಿ ಶೇ. ೧೪.೨೫ರಷ್ಟು ಸಂಖ್ಯೆಯಲ್ಲಿ ಮಹಿಳೆಯರು ಭೂ ಒಡತಿಯರಾದರೆ ಶೇ. ೧೩.೩೩ ಹೆಕ್ಟೇರುಗಳಷ್ಟು ಭೂಮಿಯ ಮಾಲೀಕರಾಗಿರುವರು. ಆಳಂದ ತಾಲೂಕಿನಲ್ಲೂ ಕೂಡ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಮಹಿಳೆಯರು ಕಡಿಮೆ ಹೊಂದಿರುವರು. ಜಿಲ್ಲೆಯಲ್ಲಿಯೇ ಚಿಂಚೋಳಿ ತಾಲೂಕಿನಲ್ಲಿ ಮಹಿಳೆಯರು ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಹೊಂದುವಲ್ಲಿ ಅಧಿಕವಾಗಿದ್ದರು ಮಹಿಳೆಯರ ಒಡೆತನದ ಪ್ರಮಾಣಕ್ಕಿಂತ ಅವರ ಅಧೀನದಲ್ಲಿರುವ ಭೂಮಿಯ ಪ್ರಮಾಣವು ಕಡಿಮೆ ಇರುವುದು ಕಂಡು ಬಂದಿದೆ. ಗುಲಬರ್ಗಾ ತಾಲೂಕಿನಲ್ಲಿ ಶೇ. ೧೪.೯೮ ಮಹಿಳೆಯರು ಭೂ ಒಡತಿಯರಾದರೆ ಅವರ ಸ್ವಾಧೀನಕ್ಕೆ ಒಳಪಟ್ಟ ಭೂಮಿಯ ಪ್ರಮಾಣ ಶೇ. ೧೩.೮೧ ಹೆಕ್ಟೇರುಗಳು ಮಾತ್ರ. ಜೇವರ್ಗಿ ತಾಲೂಕಿನಲ್ಲಿ ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದಲ್ಲಿ ಅಧಿಕವಿದ್ದರೂ ಮಹಿಳೆಯರು ಭೂ ಒಡೆತನ ಹೊಂದುವಲ್ಲಿ ಅತಿ ಕಡಿಮೆ ಪ್ರಮಾಣದಲ್ಲಿ ಇರುವುದನ್ನು ಕಾಣುತ್ತೇವೆ. ಈ ತಾಲೂಕಿನಲ್ಲಿಯೂ ಭೂ ಒಡೆತನದ ಸಂಖ್ಯೆಗಿಂತ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆಯಿದೆ. ಶಹಪೂರ ತಾಲೂಕಿನಲ್ಲಿ ಶೇ. ೧೪.೩೭ ರಷ್ಟು ಮಹಿಳೆಯರು ಭೂ ಒಡತಿಯರಾದರೂ ಶೇ. ೧೪.೧೪ ಹೆಕ್ಟೇರ್‌ನಷ್ಟು ಭೂಮಿಯ ಒಡತಿಯರಾಗಿರುವರು ಮಹಿಳೆಯರು ಭೂಮಿಯ ವಿಸ್ತೀರ್ಣ ಕಡಿಮೆ ಹೊಂದಿರುವ ತಾಲೂಕುಗಳಲ್ಲಿ ಪಿತೃ ಪ್ರಧಾನ ಮೌಲ್ಯಗಳ ಜೊತೆಗೆ ಲಿಂಗ ತಾರತಮ್ಯವಾಗಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ಹೋಲಿಸಿದರೆ ಇತರರಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಭೂ ಒಡೆತನ ಹೊಂದಿರುವರು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಲ್ಲಿ ಭೂ ಒಡೆತನ ಹೊಂದಿದವರ ಪ್ರಮಾಣ ಕಡಿಮೆಯಿರುವುದರಿಂದ ಅವರು ಅಧಿಕವಾಗಿ ಕೃಷಿ ಕೂಲಿ ಕಾರ್ಮಿಕರಾಗಿರುವರು.

ಈ ಮೇಲೆ ಕೊಟ್ಟಿರುವ ಎಲ್ಲಾ ಕೋಷ್ಟಕಗಳ ಅಂಕಿ-ಅಂಶಗಳಿಂದ ಮತ್ತು ಪೂರಕವಾದ ವಿವರಣೆಗಳಿಂದ ಗುಲಬರ್ಗಾ ಜಿಲ್ಲೆಯಲ್ಲಿ ಮಹಿಳೆಯರು ಪಡೆದ ಭೂ ಒಡೆತನದ ಸ್ಥಿತಿಗತಿಯನ್ನು ಗುರುತಿಸಬಹುದು.

ಹೈದ್ರಾಬಾದ್ ನಿಜಾಮರ ಆಳ್ವಿಕೆಯ ಕಾಲದಿಂದಲೂ ಗುಲ್ಬರ್ಗಾ ಜಿಲ್ಲೆಯಲ್ಲಿ ಜಮೀನ್ದಾರಿ ಪದ್ಧತಿಯೇ ಜಾರಿಯಲ್ಲಿದ್ದಿದ್ದು, ಭಾಗಶಃ ಇಂದೂ ಕಾಣಬರುತ್ತದೆ. ಸ್ವಾತಂತ್ರ್ಯ ಬಂದು ಐದು ದಶಕಗಳು ಕಳೆದರೂ ಜಮೀನ್ದಾರಿ, ಪಾಳೇಗಾರಿಕೆಯ ಅಂಶಗಳು ಕ್ರಿಯಾಶೀಲವಾಗಿರುವುದನ್ನು ಜಿಲ್ಲೆಯಲ್ಲಿ ನೋಡಬಹುದು. ಜಿಲ್ಲೆಯು ಅತೀ ಹೆಚ್ಚಾಗಿ ಭೂ ರಹಿತ ಕೃಷಿ ಕಾರ್ಮಿಕರನ್ನು ಹೊಂದಿದೆ. ಬಹುತೇಕ ಅಧ್ಯಯನಗಳು ಸ್ಪಷ್ಟಪಡಿಸಿದಂತೆ ಕೃಷಿ ಉತ್ಪನ್ನದಲ್ಲಿ ಹಾಗೂ ಕೃಷಿ ಕ್ಷೇತ್ರದ ದುಡಿಮೆಯಲ್ಲಿ ಮಹಿಳೆಯರ ಪಾಲು, ಅವರ ಪಾತ್ರ ಮಹತ್ತರವಾದುದು. ಇದನ್ನು ನಮ್ಮ ದೇಶದ ಜ್ಞಾನಶಿಸ್ತುಗಳಾಗಲೀ, ಸರ್ಕಾರಗಳಾಗಲಿ ಮನ್ನಿಸುತ್ತಿಲ್ಲ. ಇದು ಒಂದು ದೇಶದ ದುರಂತವೆಂದೇ ಹೇಳಬೇಕು. ಗುಲಬರ್ಗಾ ಜಿಲ್ಲೆಯ ಜನರು ಪೂರ್ಣ ಪ್ರಮಾಣದಲ್ಲಿ ಕೃಷಿಯನ್ನೇ ನಂಬಿಸಿಕೊಂಡವರೆ ಅಧಿಕವಿದ್ದಾರೆ. ಹಾಗಾಗಿ ಜಿಲ್ಲೆಯಲ್ಲಿ ಮಹಿಳೆಯರ ಶ್ರಮ ಅಧಿಕವಾಗಿದೆ. ಕಾರಣ ಯಾವುದೇ ರೀತಿಯ ಕೃಷಿಯಲ್ಲಿಯೂ ಸ್ತ್ರೀಯ ಭಾಗವಹಿಸುವಿಕೆ ಇರಲೇಬೇಕಾಗುತ್ತದೆ. ಸಹಜವಾಗಿಯೇ ಕೃಷಿ ಕಾರ್ಮಿಕರ ದುಡಿಮೆಯ ಸಹಭಾಗಿತ್ವವು ಗುಲಬರ್ಗಾ

ವಿಭಾಗದಲ್ಲಿ ಅಧಿಕವಾಗಿರುವುದು ಕಂಡುಬರುತ್ತದೆ. ಎಲ್ಲಿ ಜಮೀನ್ದಾರಿ, ಪಾಳೆಗಾರಿಕೆ ವ್ಯವಸ್ಥೆ ಅಸ್ತಿತ್ವದಲ್ಲಿರುತ್ತದೋ ಅಲ್ಲಿ ಮಹಿಳೆಯರ ಬದುಕು ತೀವ್ರ ತರಹದ ಶೋಷಣೆಗೆ ಒಳಗಾಗಿರುತ್ತದೆ ಎಂಬುದು ಇತಿಹಾಸದಿಂದ ತಿಳಿದುಕೊಳ್ಳಬಹುದು.

ಗುಲ್ಬರ್ಗಾ ಜಿಲ್ಲೆಯ ಭೂ ಹಿಡುವಳಿಯ ಅಂಕಿ-ಅಂಶಗಳನ್ನು ಗಮನಿಸಿದಾಗ, ದೊಡ್ಡ ಭೂ ಹಿಡುವಳಿಗೆ ಸಂಬಂಧಿಸಿದಂತೆ ಭೂಮಿಯ ಗಾತ್ರ ಪ್ರತಿಶತ ೧೨.೭೪ ಹೆಕ್ಟೇರುಗಳು. ಅತಿ ಸಣ್ಣ ಭೂ ಹಿಡುವಳಿಯ ಗಾತ್ರ ಕೇವಲ ೪.೭೬ ಪ್ರತಿಶತ ಹೆಕ್ಟೇರುಗಳು. ಈ ಮೊದಲೇ ತಿಳಿಸಿರುವಂತೆ ಜಿಲ್ಲೆಯಲ್ಲಿ ಇಂದಿಗೂ ಜಮೀನ್ದಾರಿ ಮತ್ತು ಪಾಳೆಗಾರಿಕೆ ವ್ಯವಸ್ಥೆ ಇರುವುದರಿಂದ ದೊಡ್ಡ ದೊಡ್ಡ ಜಮೀನ್ದಾರರು ಸುಮಾರು ೧೦೦-೨೦೦ ಎಕರೆ ಜಮೀನು ಹೊಂದಿದ್ದಾರೆ. ಜಮೀನ್ದಾರರ ಸಂಖ್ಯೆ ಕಡಿಮೆಯಿದ್ದು ಅವರು ಹೊಂದಿದ ಜಮೀನು ಅಧಿಕವಾಗಿರುತ್ತದೆ. ಆದರೆ ಜಿಲ್ಲೆಯ ಅತಿ ಸಣ್ಣ ರೈತರಲ್ಲಿ ಕಾಣಬರುವ ಜಮೀನು ಕೇವಲ ೪.೭೬ ಪ್ರತಿಶತ ಹೆಕ್ಟೇರುಗಳಷ್ಟು, ಸಾಮಾನ್ಯವಾಗಿ ೧ ರಿಂದ ೨ ಎಕರೆ ಭೂಮಿಯನ್ನು ಪಡೆದವರಾಗಿರುವರಾಗಿದ್ದು ಇವರ ಬದುಕು ಅತಂತ್ರವಾಗಿರುತ್ತದೆ.

ಇನ್ನು ಭೂ ಒಡೆತನ ಹೊಂದಿದವರ ಸಂಖ್ಯೆಯನ್ನು ಗಮನಿಸಿದರೆ ಗುಲಬರ್ಗಾ ಜಿಲ್ಲೆ ರೈತಾಪಿ (ಅತಿಸಣ್ಣ, ಸಣ್ಣ, ಅರೆಮಧ್ಯಮ ರೈತರು) ಹಿಡುವಳಿದಾರರ ಸಂಖ್ಯೆ ಶೇ. ೮೪.೧೪ ರಷ್ಟಿದ್ದರೆ ಅವರು ಹೊಂದಿದ ಭೂಮಿ ಶೇ. ೫೬.೧೪ ಹೆಕ್ಟೇರುಗಳು. ಇಲ್ಲಿ ರೈತಾಪಿ ವರ್ಗದವರ ಭೂ ಒಡೆತನದ ಸಂಖ್ಯೆಗೂ, ಭೂಮಿಯ ವಿಸ್ತೀರ್ಣಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ಹಾಗೆಯೇ ಶೇ. ೧೫.೭೬ ರಷ್ಟಿರುವ ಜಮೀನ್ದಾರರು ಶೇ. ೩೯.೯೧ ಹೆಕ್ಟೇರ್‌ನಷ್ಟು ಭೂಮಿಯನ್ನು ಪಡೆದಿದ್ದಾರೆ. ಜಮೀನ್ದಾರರ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ನೋಡಿದಾಗ ಅವರ ಭೂ ಒಡೆತನದ ಸಂಖ್ಯೆ ಕಡಿಮೆಯಿದ್ದರೂ ಅವರ ಒಡೆತನದಲ್ಲಿರುವ ಭೂಮಿಯ ಪ್ರಮಾಣ ಅಧಿಕವಾಗಿದೆ. ಆದರೆ ರೈತಾಪಿ ವರ್ಗದವರ ಭೂ ಒಡೆತನದ ಸಂಖ್ಯೆ ಹೆಚ್ಚಿದ್ದರೆ ಅವರು ಕಡಿಮೆ ಪ್ರಮಾಣದ ಭೂಮಿಯನ್ನೇ ಪಡೆದಿರುವುದನ್ನು ಅಂಕಿ-ಅಂಶಗಳಿಂದ ತಿಳಿದುಕೊಳ್ಳಬಹುದಾಗಿದೆ. ಇವು ಜಿಲ್ಲೆಯ ಒಟ್ಟು ರೈತರದಾದರೆ ಮಹಿಳೆಯರನ್ನು ಬೇರ್ಪಡಿಸಿ ನೋಡಿದಾಗ.

ಜಿಲ್ಲೆಯಲ್ಲಿ ಜಮೀನ್ದಾರಿ ಭೂ ಹಿಡುವಳಿ ಹೊಂದಿರುವ ಮಹಿಳೆಯರ ಸಂಖ್ಯೆ ಶೇ. ೧೪.೮೯ ಇದ್ದರೆ, ಅವರ ಮಾಲೀಕತ್ವದಡಿಯಲ್ಲಿರುವ ಭೂಮಿಯ ಪ್ರಮಾಣ ಶೇ. ೪೬.೩೨ ಹೆಕ್ಟೇರುಗಳಷ್ಟು. ಹಾಗೆಯೇ ರೈತಾಪಿ ಭೂ ಹಿಡುವಳಿಯ ಮೇಲೆ ಒಡೆತನ ಹೊಂದಿರುವ ಮಹಿಳೆಯರು ಶೇ. ೮೫.೧೦ ರಷ್ಟಿದ್ದಾರೆ. ಆದರೆ ಅವರು ಒಡೆತನ ಹೊಂದಿರುವ ಭೂಮಿಯ ಪ್ರಮಾಣ ಶೇ. ೬೪.೨೩ ಹೆಕ್ಟೇರುಗಳಷ್ಟು ಮಾತ್ರ. ಇಲ್ಲಿಯೂ ಜಮೀನ್ದಾರಿ ಮತ್ತು ರೈತಾಪಿ ವರ್ಗದ ಮಹಿಳೆಯರು ಹೊಂದಿರುವ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಪ್ರಮಾಣದಲ್ಲಿರುವ ವ್ಯತ್ಯಾಸಗಳನ್ನು ಗಮನಿಸಬಹುದಾಗಿದೆ. ಮಹಿಳೆಯರಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಜಮೀನ್ದಾರಿ ವರ್ಗದವರಿದ್ದರೆ, ಬಹುಪಾಲು ರೈತಾಪಿ ವರ್ಗದಲ್ಲಿಯೇ ಇದ್ದಾರೆ. ಆರ್ಥಿಕವಾಗಿ ಇತರರ (ಪುರುಷರ ಮತ್ತು ಭೂಮಾಲೀಕರ) ಅಧೀನದಲ್ಲಿರಬೇಕಾದ ಪರಿಸ್ಥಿತಿಯನ್ನು ಮಹಿಳೆಯರು ಎದುರಿಸುತ್ತಿದ್ದಾರೆ. ಇವರು ಶೈಕ್ಷಣಿಕವಾಗಿಯೂ ಹಿಂದುಳಿದಿದ್ದಾರೆ. ಇಡೀ ಕುಟುಂಬವೇ ಇವರ ಮೇಲೆ ಅವಲಂಬಿತವಾಗಿರುತ್ತದೆ ಎಂದರೂ

ತಪ್ಪಾಗಲಾರದು. ಮಹಿಳೆಯರಲ್ಲೂ ಮೇಲ್ವರ್ಗದ ಮಹಿಳೆಯರಿಗೆ ಆಸ್ತಿ ಹಕ್ಕು ದೊರಕಿದೆಯೇ ಹೊರತು ಕೆಳವರ್ಗದ ಮಹಿಳೆಯರಿಗೆ ಆಸ್ತಿ ಹಕ್ಕು ಕಡಿಮೆ ಪ್ರಮಾಣದಲ್ಲಿ ದಕ್ಕಿಲ್ಲದಿರುವುದು ಕಂಡು ಬರುತ್ತದೆ.

ಗುಲಬರ್ಗಾ ಜಿಲ್ಲೆಯಲ್ಲಿ ಭೂ ಒಡೆತನ ಹೊಂದಿರುವ ಮಹಿಳೆಯರ ಪ್ರಮಾಣವನ್ನು ಪುರುಷರು ಹೊಂದಿರುವ ಭೂ ಒಡೆತನದ ಪ್ರಮಾಣಕ್ಕೆ ಹೋಲಿಸಿದರೆ ತೀರಾ ಕಡಿಮೆ ಇರುವುದು ಕಂಡುಬರುತ್ತದೆ. ಭಾರತದ ಸಂವಿಧಾನದಲ್ಲಿ ಮಹಿಳೆಯರಿಗೆ ಆಸ್ತಿ ಹಕ್ಕು ನೀಡಿ ಸುಮಾರು ೫೦ ವರ್ಷಗಳಾದರೂ ವಾಸ್ತವದಲ್ಲಿ ಅದನ್ನು ಪಡೆಯುವಲ್ಲಿ ಸಾಧ್ಯವಾಗದಿರುವುದು ವಿಷಾದವೇ ಸರಿ. ಅಲ್ಪ ಪ್ರಮಾಣದಲ್ಲಿ ಭೂ ಒಡೆತನದ ಹಕ್ಕು ಪಡೆದ ಮಹಿಳೆಯರಿಗಾದರೂ ಅದರ ಮೇಲೆ ನಿಯಂತ್ರಣ ಮತ್ತು ನಿರ್ವಹಣೆ ಪೂರ್ಣಪ್ರಮಾಣದಲ್ಲಿಲ್ಲ ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ಕಂಡುಕೊಳ್ಳಲಾಗಿದೆ. ಭೂಮಿಯು ಸ್ತ್ರೀಯ ಹೆಸರಲ್ಲಿರುತ್ತದೆ, ಆದರೆ ಭೂಮಿಯ ಮೇಲೆ ಯಾವುದೇ ಬಗೆಯ ನಿರ್ಣಯಾತ್ಮಕವಾದ ಹಕ್ಕು ಅವಳಿಗಿಲ್ಲ. ಆಕೆಯ ಪತಿ ಅಥವಾ ಪತಿಯ ಮನೆಯವರ ಇಲ್ಲವೇ ಆಕೆಯ ಸಹೋದರ, ಒಟ್ಟಾರೆ ಆ ಕುಟುಂಬದ ಪುರುಷರ ನಿರ್ಣಯದಂತೆ ಭೂಮಿಯು ಬಳಕೆಯಾಗುತ್ತದೆ.

ಗುಲಬರ್ಗಾ ಜಿಲ್ಲೆಯ ಕೆಲವೇ ಕೆಲವು ಕುಟುಂಬಗಳಲ್ಲಿ ಮಹಿಳೆಯರಿಗೆ ಭೂ ಒಡೆತನ ದಕ್ಕಿದೆ. ಕುಟುಂಬದ ಸ್ತ್ರೀ ಸದಸ್ಯೆಯೊಬ್ಬಳು ಆರ್ಥಿಕವಾಗಿ ಸಬಲಳಾಗಲಿ ಅಥವಾ ಇನ್ಯಾವುದೇ ಕಾಳಜಿಯಿಂದಾಗಲೀ ಭೂಮಿಯನ್ನು ಅವಳ ಹೆಸರಿಗೆ ಮಾಡಿರುವುದಿಲ್ಲ. ಶ್ರೀಮಂತ ಕುಟುಂಬಗಳಲ್ಲಿ ಅಧಿಕ ಭೂಮಿಯಿರುತ್ತದೆ. ಮನೆಯ ಯಜಮಾನನ ಹೆಸರಿನಲ್ಲಿಯೇ ಎಲ್ಲಾ ಭೂಮಿಯೂ ಇದ್ದರೆ ಸರಕಾರ ವಿಧಿಸಿದ ಆದಾಯ ಮಿತಿ ಮೀರಿರುತ್ತದೆ. ಅಂತಹ ಸಂದರ್ಭಗಳಲ್ಲಿ ಪತ್ನಿ, ತಾಯಿಯ ಹೆಸರಿನಲ್ಲಿ ಭೂಮಿಯನ್ನು ವರ್ಗಾಯಿಸಲಾಗುತ್ತದೆ. ಈ ರೀತಿ ಭೂಮಿಯನ್ನು ಕುಟುಂಬದ ಇತರರಿಗೆ ವರ್ಗಾಯಿಸುವುದರಿಂದ ಭೂಮಿಯಂಥ ಸ್ಥಿರ ಆಸ್ತಿಯ ಮೇಲೆ ಸರಕಾರ ವಿಧಿಸುವ ಹೆಚ್ಚುವರಿ ತೆರಿಗೆಯಿಂದ ಮುಕ್ತರಾಗುತ್ತಾರೆ. ಇನ್ನು ಕೆಲವು ಕುಟುಂಬಗಳಲ್ಲಿ ಬ್ಯಾಂಕ್ ಸಾಲ, ಸಬ್ಸಿಡಿ ಮತ್ತು ಇನ್ನಿತರ ಸರಕಾರದ ಸೌಲಭ್ಯವನ್ನು ಪಡೆಯುವ ಉದ್ದೇಶದಿಂದ ಮಹಿಳೆಯರ ಹೆಸರಿಗೆ ಭೂಮಿಯನ್ನು ಮಾಡಿರುವುದು ಕಂಡುಬರುತ್ತದೆ.

ಅಧಿಕಾರ, ಭೂ ಒಡೆತನ ಮತ್ತು ಇತರೆ ಆಸ್ತಿಯ ಒಡೆತನದ ಸಂದರ್ಭದಲ್ಲಿ ಪುರುಷರು ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಂಡರೆ, ದುಡಿಮೆ ಶ್ರಮದ ವಿಷಯಕ್ಕೆ ಬಂದಾಗ ಅವರ ಸಂಖ್ಯೆ ಗೌಣವಾಗಿರುತ್ತದೆ. ಪುರುಷರ ಹಿತಾಸಕ್ತಿ, ಪುರುಷ ಸೌಖ್ಯ, ಪುರುಷರ ಯೋಗಕ್ಷೇಮ ಮುಖ್ಯವಾಗಿರುತ್ತದೆಯೇ ಹೊರತು ಮಹಿಳೆಯರ ಯೋಗಕ್ಷೇಮ ಮುಖ್ಯವಾಗಿರುವುದಿಲ್ಲ. ಹೀಗಾಗಿ ಎಲ್ಲಿ ದುಡಿಮೆಯ ನಿರಂತರತೆ, ಅಧಿಕವಾಗಿ ಭೌತಿಕ ಶ್ರಮವನ್ನು ವಿನಿಯೋಗ ಮಾಡಬೇಕಾಗುತ್ತೋ ಅಲ್ಲಿ ಪುರುಷರ ಪಾಲುದಾರಿಕೆ ಕಡಿಮೆ ಇರುತ್ತದೆ. ಎಲ್ಲಿ ಸುಲಭವಾಗಿ ಲಾಭ, ಹೆಗ್ಗಳಿಕೆ, ಪ್ರತಿಷ್ಠೆ ದೊರೆಯುತ್ತದೆಯೋ, ಅಲ್ಲಿ ಪುರುಷರ ಪಾಲುದಾರಿಕೆ ಅಧಿಕವಾಗಿರುತ್ತದೆ. ಹೀಗಾಗಿ ಗುಲಬರ್ಗಾ ಜಿಲ್ಲೆಯಲ್ಲಿ ಪುರುಷರು ಅಧಿಕ ಪ್ರಮಾಣದಲ್ಲಿ ಭೂ ಒಡೆತನ ಹೊಂದಿರುವುದನ್ನು ಕೃಷಿ ಗಣತಿಯ ಅಂಕಿ-ಅಂಶಗಳ ಮೂಲಕ ತಿಳಿದು ಬರುತ್ತದೆ.

## ಕೊನೆ ಟಿಪ್ಪಣಿ

೧. ಭೂ ಹಿಡುವಳಿ: ಒಂದು ದೇಶದ ಅಥವಾ ಪ್ರಾಂತದಲ್ಲಿ ಭೂಮಿಯ ಒಡೆತನದ ಸ್ವರೂಪ ಮತ್ತು ವ್ಯಾಪ್ತಿ ಮೊದಲಾದವುಗಳನ್ನು ತಿಳಿಸಿಕೊಡುವುದಕ್ಕೆ 'ಭೂ ಹಿಡುವಳಿ' ಎನ್ನುವರು.

೨. ದರಕಾಸ್ತು ಭೂಮಿ: ಸಾಗುವಳಿ ಮಾಡಲು ಸರ್ಕಾರ ಸಾಗುವಳಿಯಲ್ಲದ ಭೂಮಿಯನ್ನು ಹಂಚುತ್ತದೆ. ಈ ರೀತಿಯ ಭೂಮಿಗೆ 'ದರಕಾಸ್ತು ಭೂಮಿ'ಎಂದು ಹೇಳುತ್ತಾರೆ. ಬಹುತೇಕ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ರೈತರಿಗೆ ಸರ್ಕಾರ ಈ ರೀತಿಯ ಜಮೀನನ್ನು ಸಾಗುವಳಿಗಾಗಿ ಕೊಟ್ಟಿದೆ.

೩. ಕುಳುವಾಡಿ ಭೂಮಿ: ಊರಿಗೆ ಒಬ್ಬ ಕುಳುವಾಡಿ ಇರುತ್ತಾನೆ. ಊರನ್ನು ನಿಯಂತ್ರಿಸುವ ಯಜಮಾನನಿದ್ದಂತೆ ಊರಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾನೆ. ಕುಳುವಾಡಿ ಆತನಿಗೆ ಗ್ರಾಮದ ಕುಳುವಾಡಿ ಜಮೀನನ್ನು ಮೀಸಲಿಡುತ್ತಾರೆ. ಜಮೀನನ್ನು ಅನುಭವಿಸಲು ಊರಿನ ಕೆಲಸ ಕಾರ್ಯಗಳಲ್ಲಿ ನಿರಂತರವಾಗಿ ತೊಡಗಿರಬೇಕು. ಜಮೀನಿನ ಒಡೆತನ ಮಾತ್ರ ಗ್ರಾಮಕ್ಕೇ ಸೇರಿರುತ್ತದೆ. ಕುಳುವಾಡಿಗೆ ನಿಗದಿಪಡಿಸಿರುವ ಭೂಮಿಯು ಅರ್ಧ ಎಕರೆಯಿಂದ ಎರಡು ಎಕರೆಯವರೆಗೂ ಇರುತ್ತದೆ. ಈತ ಊರ ಸುದ್ದಿಯನ್ನು ಸಾರುವುದು, ಊರ ಸ್ವಚ್ಛತೆಯನ್ನು ಮಾಡುವುದು, ಸತ್ತ ಜಾನುವಾರುಗಳನ್ನು ಊರ ಹೊರಗೆ ಸಾಗಿಸುವುದು, ಸತ್ತವರಿಗೆ ಗುಂಡಿ ತೋಡುವುದು ಇತ್ಯಾದಿ ಕೆಲಸಗಳು ಕುಳವಾಡಿಯದಾಗಿರುತ್ತದೆ.

* * *

# ಅಧ್ಯಾಯ - ಎಂಟು

## ಸಮಕಾಲೀನ ಸಂದರ್ಭ : ಭೂ ಒಡೆತನದ ಹಕ್ಕುದಾರಿಕೆ

೮.೧. ಭೂ ಒಡೆತನದ ಬಗೆಗಿನ ಸಾಮಾಜಿಕ ಗ್ರಹಿಕೆಗಳು

೮.೨. ಭೂ ಒಡೆತನ ಪಡೆದ ಹಿನ್ನೆಲೆ

೮.೩. ಒಡೆತನ ಹೊಂದಿರುವ ಭೂಮಿಯ ಸ್ವರೂಪ

೮.೪. ನಿಯಂತ್ರಣ ಮತ್ತು ನಿರ್ವಹಣೆ

೮.೫. ಆಸ್ತಿಗೆ ಸಂಬಂಧಿಸಿದ ಕಾನೂನಿನ ಅರಿವು

## ಸಮಕಾಲೀನ ಸಂದರ್ಭ: ಭೂ ಒಡೆತನದ ಹಕ್ಕುದಾರಿಕೆ

ಪ್ರಸ್ತುತ ಅಧ್ಯಾಯದಲ್ಲಿ ಮಹಿಳೆಯರು ಭೂ ಒಡೆತನವನ್ನು ಹೇಗೆ ಪರಿಭಾವಿಸಿದ್ದಾರೆ ಎಂಬುದನ್ನು ಅಧ್ಯಾಯದ ಮೊದಲ ಭಾಗದಲ್ಲಿ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಎರಡನೆಯ ಭಾಗದಲ್ಲಿ ಮಹಿಳೆಯರು ಕೃಷಿ ಭೂ ಒಡೆತನ ಪಡೆದ ಹಿನ್ನೆಲೆಯನ್ನು ವಕ್ತೃಗಳ ಮಾಹಿತಿಯ ಮೂಲಕ ಅರಿತುಕೊಳ್ಳಲಾಗಿದೆ. ಮಹಿಳೆಯರ ಒಡೆತನಕ್ಕೆ ಒಳಪಟ್ಟಿರುವ ಭೂಮಿಯ ಸ್ವರೂಪವನ್ನು ಮೂರನೆ ಭಾಗದಲ್ಲಿ ನೀಡಿದರೆ, ನಾಲ್ಕನೆಯ ಭಾಗದಲ್ಲಿ ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ಮೇಲೆ ಎಷ್ಟರಮಟ್ಟಿಗೆ ನಿಯಂತ್ರಣ ಮತ್ತು ನಿರ್ವಹಣೆಯನ್ನು ಹೊಂದಿರುವವರು ಎನ್ನುವುದನ್ನು ಮಹಿಳೆಯರ ಅಭಿಪ್ರಾಯದ ಮೇರೆಗೆ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಹಾಗೂ ಭೂ ಒಡೆತನಕ್ಕೆ ಮತ್ತು ಆಸ್ತಿಗೆ ಸಂಬಂಧಿಸಿದಂತೆ ಕಾನೂನುಗಳ ಬಗ್ಗೆ ಮಹಿಳೆಯರಿಗಿರುವ ಅರಿವು ಮತ್ತು ಎಷ್ಟರಮಟ್ಟಿಗೆ ಅದರ ಪ್ರಯೋಜನ ಪಡೆದಿರುವರು ಎನ್ನುವುದರ ಬಗೆಗೆ ಕೊನೆಯ ಭಾಗದಲ್ಲಿ ವಿಶ್ಲೇಷಿಸಲಾಗಿದೆ. ಒಟ್ಟಾರೆ ಈ ಅಧ್ಯಾಯದಲ್ಲಿ ವಕ್ತೃಗಳ ಅಭಿಪ್ರಾಯಗಳನ್ನು ಆಧಾರವಾಗಿಟ್ಟುಕೊಂಡು ಕೆಲವು ಅಂಕಿ-ಅಂಶಗಳ ಮೂಲಕ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಕ್ಷೇತ್ರಾಧ್ಯಯನವು ಗುಲಬರ್ಗಾ ಜಿಲ್ಲೆಯ ಹತ್ತು ತಾಲೂಕುಗಳ ಬೇರೆ ಬೇರೆ ಜಾತಿಯ, ವಿವಿಧ ವರ್ಗಕ್ಕೆ ಸೇರಿದ ಗ್ರಾಮೀಣ ಪ್ರದೇಶದ ಮಹಿಳೆಯರನ್ನು ಒಳಗೊಂಡಿದೆ. ಕ್ಷೇತ್ರಗಳಲ್ಲಿನ ವಕ್ತೃಗಳು ನೀಡಿದ ಮಾಹಿತಿಯ ಆಧಾರದ ಮೇಲೆ ಈ ಅಧ್ಯಾಯವು ರೂಪುಗೊಂಡಿದೆ. ಅಧ್ಯಾಯಕ್ಕೆ ಸಂಬಂಧಿಸಿದ ಹೆಚ್ಚಿನ ವಿವರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

### ೮.೧. ಭೂ ಒಡೆತನದ ಬಗೆಗೆ ಸಾಮಾಜಿಕ ಗ್ರಹಿಕೆಗಳು

ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರಿಗೆ ಭೂ ಒಡೆತನ ನೀಡುವ ಬಗೆಗೆ ಇರುವ ಸಾಮಾಜಿಕ ಗ್ರಹಿಕೆಗಳು ಯಾವುವು? ಸ್ವತಃ ಮಹಿಳೆಯರೆ ಭೂ ಒಡೆತನದ ಬಗ್ಗೆ ಹೇಗೆ ಗ್ರಹಿಸಿದ್ದಾರೆ ಎನ್ನುವುದನ್ನು ಮತ್ತು ಮಹಿಳೆಯರಿಗೆ ಭೂ ಒಡೆತನದ ಅವಶ್ಯಕತೆ ಕುರಿತು ಮಹಿಳೆಯರೇ ವ್ಯಕ್ತಪಡಿಸಿದ ವಿಚಾರಗಳ ಮೂಲಕ ಚರ್ಚಿಸಲಾಗಿದೆ.

ಕೋಷ್ಟಕ -೧

**ಮಹಿಳೆಯರ ದೃಷ್ಟಿಯಲ್ಲಿ ಭೂ ಒಡೆತನ**

(ಶೇಕಡವಾರು)

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಭೂಮಿಯ ಮೇಲೆ ಸಂಪೂರ್ಣ ಹುಕ್ಕು ಮತ್ತು ನಿಯಂತ್ರಣ | ೩೫ | ೪೫ | ೩೧ | ೩೪ |
| ೦೨ | ಭೂಮಿ ತಮ್ಮ ಹೆಸರಿನಲ್ಲಿರುವುದಕ್ಕೆ | ೩೪ | ೪೫ | ೩೯ | ೩೮ |
| ೦೩ | ಭೂಮಿ ತಮ್ಮ ಹೆಸರಿನಲ್ಲಿದ್ದು ಅದರ ಹಕ್ಕು ಮತ್ತು ನಿಯಂತ್ರಣ ತಮ್ಮದಾಗಿರುವುದಕ್ಕೆ | ೩೧ | ೧೦ | ೩೦ | ೨೮ |

ಪ.ಜಾ-ಪರಿಶಿಷ್ಟ ಜಾತಿ, ಪ.ಪಂ-ಪರಿಶಿಷ್ಟ ಪಂಗಡ, ಹಿಂ.ವ-ಹಿಂದುಳಿದ ವರ್ಗ.

ಈ ಮೇಲಿನ ಕೋಷ್ಟಕದ ಪ್ರಕಾರ ಪರಿಶಿಷ್ಟ ಜಾತಿಯಲ್ಲಿ ಶೇ.೩೪ ರಷ್ಟು, ಪರಿಶಿಷ್ಟ ಪಂಗಡದಲ್ಲಿ ಶೇ.೪೫ ರಷ್ಟು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೩೯ ರಷ್ಟು ಮಹಿಳೆಯರು 'ಹೆಸರಿಗೆ ಮಾತ್ರ ಭೂಮಿ ಇರುವುದಕ್ಕೆ ಭೂ ಒಡೆತನ ಎನ್ನುತ್ತಾರೆ' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗೆಯೇ ಪರಿಶಿಷ್ಟ ಜಾತಿಯಲ್ಲಿ ಶೇ.೩೫ ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ.೪೫ ರಷ್ಟು ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೩೧ ರಷ್ಟು ಮಹಿಳೆಯರು. 'ಭೂಮಿಯ ಮೇಲೆ ಸಂಪೂರ್ಣ ಹಕ್ಕು ಮತ್ತು ನಿಯಂತ್ರಣ ಇರುವುದಕ್ಕೆ ಭೂ ಒಡೆತನ ಎಂದು ಕರೆಯುವರು' ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. 'ಭೂಮಿಯು ತಮ್ಮ ಹೆಸರಿನಲ್ಲಿದ್ದು, ಅದರ ಹಕ್ಕು ಮತ್ತು ನಿಯಂತ್ರಣ ಹೊಂದಿದ್ದರೆ ಭೂ ಒಡೆತನ ಹೊಂದಿದಂತೆ' ಎಂದು ಅಭಿಪ್ರಾಯ ವ್ಯಕ್ತಪಡಿಸಿದವರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇ.೩೧ ರಷ್ಟು ಮಹಿಳೆಯರು, ಶೇ.೧೦ ರಷ್ಟು ಪರಿಶಿಷ್ಟ ಪಂಗಡದ ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೩೦ ರಷ್ಟು ಮಹಿಳೆಯರು ಕಂಡುಬರುತ್ತಾರೆ. 'ಹೆಸರಿಗೆ ಮಾತ್ರ ಭೂಮಿ ಇದ್ದರೆ ಭೂ ಒಡೆತನ ಎಂದು ಹೇಳುವವರು' ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟು ಸರಾಸರಿ ಶೇ.೩೮ ರಷ್ಟು ಮಹಿಳೆಯರಿದ್ದಾರೆ. 'ಭೂಮಿಯು ಬೇರೆಯವರ ಹೆಸರಿನಲ್ಲಿದ್ದು ಅದರ ಮೇಲೆ ಹಕ್ಕು ಮತ್ತು ನಿಯಂತ್ರಣ ಇರುವುದಕ್ಕೆ ಭೂ ಒಡೆತನ ಎಂದು ಹೇಳಿದವರು' ಜಿಲ್ಲೆಯಲ್ಲಿ ಒಟ್ಟು ಸರಾಸರಿ ಶೇ.೩೪ ರಷ್ಟು ಮಹಿಳೆಯರು, ಶೇ.೨೮ ರಷ್ಟು ಮಹಿಳೆಯರು 'ಭೂಮಿ ತಮ್ಮದೇ ಹೆಸರಿನಲ್ಲಿದ್ದು, ಅದರ ಹಕ್ಕು ಮತ್ತು ನಿಯಂತ್ರಣ ತಮ್ಮ ಕೈಯಲ್ಲಿದ್ದರೆ ಮಾತ್ರ ಭೂ ಒಡೆತನವಾಗುತ್ತದೆ' ಎಂಬುದು ಅಲ್ಪ ಪ್ರಮಾಣದ ಮಹಿಳೆಯರ ಅಭಿಪ್ರಾಯವಾಗಿದೆ.

ಹೆಚ್ಚಿನ ಪ್ರಮಾಣದ ಮಹಿಳೆಯರಿಗೆ ಇಲ್ಲಿ ಭೂ ಒಡೆತನದ ಬಗ್ಗೆ ನಿಖರವಾದ ತಿಳುವಳಿಕೆ ಇಲ್ಲವೆಂದು ತಿಳಿಯಬಹುದು. ಅಲ್ಪ ಪ್ರಮಾಣದಲ್ಲಿ ಮಾತ್ರ ಮಹಿಳೆಯರು ಭೂ ಒಡೆತನದ ಬಗ್ಗೆ ಅರಿವನ್ನು ಹೊಂದಿದ್ದು, ಸಹಜವಾಗಿ ಅವರಿಗೆ ಹಕ್ಕು, ಕಾನೂನುಗಳ ಬಗ್ಗೆ ಯಾವುದೇ ರೀತಿಯಲ್ಲಿ ಜ್ಞಾನ ಇಲ್ಲದಿರುವುದರಿಂದ ಈ ರೀತಿಯ ಅಭಿಪ್ರಾಯಗಳು ದೊರೆತಿವೆ.

ಮಹಿಳೆಯರಿಗೆ ಭೂ ಒಡೆತನ ನೀಡಲು ಕುಟುಂಬ ಸಮಾಜದ ಸಮ್ಮತಿಯ ಕುರಿತು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ -೨**

**ಮಹಿಳೆಯರಿಗೆ ಭೂ ಒಡೆತನ ನೀಡಲು ಕುಟುಂಬ/ಸಮಾಜದ ಸಮ್ಮತಿ**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಮಹಿಳೆಯರಿಗೆ ಭೂ ಒಡೆತನ ನೀಡಲು ಕುಟುಂಬ/ಸಮಾಜದ ಸಮ್ಮತಿ ಇದೆ | ೧೮ | ೧೦ | ೧೫ | ೧೫.೫ |
| ೦೨ | ಮಹಿಳೆಯರಿಗೆ ಭೂ ಒಡೆತನ ನೀಡಲು ಕುಟುಂಬ/ಸಮಾಜದ ಸಮ್ಮತಿ ಇಲ್ಲ | ೮೨ | ೯೦ | ೮೫ | ೮೪.೫ |

ಕೋಷ್ಟಕದ ಅಂಕಿ-ಅಂಶಗಳನ್ನು ಗಮನಿಸಿದಾಗ 'ಮಹಿಳೆಯರಿಗೆ ಭೂ ಒಡೆತನ ನೀಡಲು ಕುಟುಂಬ/ ಸಮಾಜದ ಸಮ್ಮತಿ ಇದೆ' ಎಂದವರು ಪರಿಶಿಷ್ಟ ಜಾತಿಯಲ್ಲಿ ಶೇ. ೧೮ ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ. ೧೦ ರಷ್ಟು ಮಹಿಳೆಯರು ಮತ್ತು ಹಿಂದುಳಿದ ವರ್ಗದವರಲ್ಲಿ ೧೫ ಪ್ರತಿಶತದಷ್ಟು ಮಹಿಳೆಯರು.ಕಂಡುಬರುತ್ತಾರೆ. ಪರಿಶಿಷ್ಟ ಜಾತಿಯ ಮಹಿಳೆಯರು ಅಧಿಕವಾಗಿ ಕುಟುಂಬದ ಸಮ್ಮತಿ ಇದೆ ಎಂದು ಹೇಳಿದ್ದಾರೆ. ಈ ಪ್ರಮಾಣವನ್ನು ಗಮನಿಸಿದರೆ ಪರಿಶಿಷ್ಟ ಪಂಗಡದ ಮಹಿಳೆಯರಲ್ಲಿ ಕಡಿಮೆ ಎಂಬುದನ್ನು ಗಮನಿಸಬೇಕು.

'ಕುಟುಂಬ/ಸಮಾಜದಲ್ಲಿ ಮಹಿಳೆಯರಿಗೆ ಭೂ ಒಡೆತನ ನೀಡಲು ಸಮ್ಮತಿ ಇಲ್ಲ' ಎಂದು ಹೇಳಿದವರನ್ನು ಗಮನಿಸಿದಾಗ, ಪರಿಶಿಷ್ಟ ಜಾತಿಯಲ್ಲಿ ಶೇ.೮೨ ರಷ್ಟು, ಪರಿಶಿಷ್ಟ ಪಂಗಡದಲ್ಲಿ ಶೇ.೯೦ ರಷ್ಟು ಮಹಿಳೆಯರು ಇದ್ದರೆ, ಶೇ.೮೫ ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡುಬರುತ್ತಾರೆ. ಪರಿಶಿಷ್ಟ ಪಂಗಡದ ಕುಟುಂಬಗಳಲ್ಲಿ ಅಧಿಕವಾಗಿ ಮಹಿಳೆಯರು ಭೂ ಒಡೆತನ ನೀಡಲು ನಿರಾಕರಿಸಿದರೆ, ಪರಿಶಿಷ್ಟ ಪಂಗಡದಲ್ಲಿ ಕಡಿಮೆ ಪ್ರಮಾಣದಲ್ಲಿ ಸಮಾಜದ/ಕುಟುಂಬದ ಸಮ್ಮತಿ ಇಲ್ಲ ಎಂದು ಹೇಳಿರುವರು.

ಒಟ್ಟಾರೆ ಗುಲಬರ್ಗಾ ಜಿಲ್ಲೆಯಲ್ಲಿ ವಕ್ತೃ ಮಾಹಿತಿ ಪ್ರಕಾರ ಅತಿ ಕಡಿಮೆ ಪ್ರಮಾಣದಲ್ಲಿ ಅಂದರೆ ೧೫.೫ ಪ್ರತಿಶತದಷ್ಟು ಮಹಿಳೆಯರು ಭೂ ಒಡೆತನವನ್ನು ನೀಡಲು ಕುಟುಂಬದಲ್ಲಿ ಸಮ್ಮತಿ ಇದೆ ಎಂದಿದ್ದಾರೆ.ಶೇ .೮೪.೫ ರಷ್ಟು ಮಹಿಳೆಯರು ಕುಟುಂಬದಲ್ಲಿ ಮಹಿಳೆಯರಿಗೆ ಭೂ ಒಡೆತನವನ್ನು ನೀಡಲು ನಿರಾಕರಿಸುತ್ತಾರೆ. ಪುರುಷನೆ ಕುಟುಂಬದ ಯಜಮಾನನಾಗಿದ್ದು, ಅಧಿಕಾರವೆಲ್ಲ ಆತನ ಕೈಯಲ್ಲಿಯೇ ಇರುತ್ತದೆ. ಅಧಿಕವಾಗಿ ಪುರುಷರೆ ಭೂ ಒಡೆತನ ಹೊಂದುವುದರಿಂದ ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಅವರ ಪ್ರತಿಷ್ಠೆಯು ಅಧಿಕವಾಗುವುದು ಎನ್ನುವ ಮನೋಭಾವನೆ ಇರುವುದರಿಂದ ಮತ್ತು ವಂಶಪಾರಂಪರ್ಯವಾಗಿ ಪುರುಷನೆ ಆಸ್ತಿಯ ಒಡೆಯನಾಗುತ್ತ ಬಂದಿರುವುದರಿಂದ ಸಮಾಜದಲ್ಲಾಗಲಿ/ಕುಟುಂಬದಲ್ಲಾಗಲಿ ಮಹಿಳೆಗೆ ಭೂ ಒಡೆತನ ನೀಡಲು ನಿರಾಕರಿಸಲಾಗಿದೆ.

ಸಮ್ಮತಿ ಇದೇ ಎಂದ ಕುಟುಂಬಗಳಲ್ಲಿ ಪತಿ ಸರ್ಕಾರಿ ನೌಕರನಾಗಿರುವುದರಿಂದ ಮಹಿಳೆಯ ಹೆಸರಿಗೆ ಭೂಮಿ ಮಾಡುವರು, ಗಂಡು ಮಕ್ಕಳಿಲ್ಲದ ಕಾರಣ, ಸರ್ಕಾರದಿಂದ ಸಾಲ ಸೌಲಭ್ಯ ಪಡೆಯಲು ಮಹಿಳೆಯರಿಗೆ ಭೂ ಒಡೆತನದ ಅವಶ್ಯಕತೆ ಇದೆ ಎನ್ನುವರು ಹೊರತಾಗಿ ಅವಳು ಕುಟುಂಬದ ಸದಸ್ಯಳು, ಆಸ್ತಿಯಲ್ಲಿ ಭಾಗಿದಾರಳು,

ಅವಳು ಪುರುಷನಂತೆ ಭೂ ಒಡೆತನ ಹೊಂದಿ ಸ್ವಾವಲಂಬಿಯಾಗಿ ಬದುಕಬೇಕು ಎಂದು ಭೂ ಒಡೆತನದ ಹಕ್ಕು ಕೊಡುವುದಿಲ್ಲ. ಭೂ ಒಡೆತನದ ಹಕ್ಕು ನೀಡಿದರೂ ಅದರ ಮೇಲೆ ಅಧಿಕಾರ ನಿಯಂತ್ರಣ ಪುರುಷನದಾಗಿರುತ್ತದೆ. ಮಹಿಳೆಯರಿಗೆ ಹೆಸರಿಗೆ ಮಾತ್ರ ಭೂಮಿ ಇರುವುದು. ಒಟ್ಟಿನಲ್ಲಿ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯು ಮಹಿಳೆಯರಿಗೆ ಆಸ್ತಿಯ, ಭೂ ಒಡೆತನದ ಅಧಿಕಾರ ಕೊಡಲು ನಿರಾಕರಿಸುವುದನ್ನು ಕಾಣಬಹುದು.

**೮.೨ ಭೂ ಒಡೆತನ ಪಡೆದ ಹಿನ್ನೆಲೆ**

ಮಹಿಳೆಯರು ಯಾವ ಹಿನ್ನೆಲೆಯಲ್ಲಿ ಭೂ ಒಡೆತನವನ್ನು ಹೊಂದಿರುವರು? ಅವರು ಹೊಂದಿರುವ ಭೂಮಿಯಲ್ಲಿ ವಂಚನೆ ಆಗಿರುವ ಕುರಿತು ಮತ್ತು ತಂದೆ - ತಾಯಿಯರನ್ನು ನೋಡಿಕೊಳ್ಳಲು ಇರುವ ಕಾರಣಗಳನ್ನು ವ್ಯಕ್ತಪಡಿಸಿದ ವಿಚಾರಗಳಿಂದ ತಿಳಿಯಲಾಗಿದೆ.

**ಕೋಷ್ಟಕ -೩**

**ಮಹಿಳೆಯರು ಭೂ ಒಡೆತನ ಹೊಂದಿರುವ ಮನೆತನ/ಕುಟುಂಬ**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ತವರು ಮನೆಯಿಂದ ಭೂ ಒಡೆತನ ಹೊಂದಿದವರು | ೩ | ೧೦ | ೯ | ೭ |
| ೦೨ | ಪತಿಯ ಮನೆಯಿಂದ ಭೂ ಒಡೆತನ ಹೊಂದಿದವರು. | ೯೭ | ೯೦ | ೯೧ | ೯೩ |

ಗುಲಬರ್ಗಾ ಜಿಲ್ಲೆಯಲ್ಲಿ ಭೂ ಒಡೆತನ ಪಡೆದ ಹಿನ್ನೆಲೆಯ ವಿಚಾರವಾಗಿ, ಮಹಿಳೆಯರು ಯಾವ ಮನೆತನ (ಗಂಡನ ಮನೆ, ತವರುಮನೆ)ದ ಭೂಮಿಯ ಒಡೆತನ ಹೊಂದಿರುವರು ಎಂಬುದನ್ನು ಗಮನಿಸಿದಾಗ, ಶೇ.೩ ರಷ್ಟು ಪರಿಶಿಷ್ಟ ಜಾತಿಯ ಮಹಿಳೆಯರು, ಶೇ.೧೦ರಷ್ಟು ಪರಿಶಿಷ್ಟ ಪಂಗಡದ ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೯ರಷ್ಟು ಮಹಿಳೆಯರು 'ತವರು ಮನೆಯಿಂದ' ಭೂ ಒಡೆತನ ಪಡೆದಿದ್ದೇವೆ ಎಂದಿರುವರು. ಪರಿಶಿಷ್ಟ ಪಂಗಡದ ಮಹಿಳೆಯರು ಅಧಿಕ ಪ್ರಮಾಣದಲ್ಲಿ ತವರು ಮನೆಯಿಂದ ಭೂ ಒಡೆತನವನ್ನು ಹೊಂದಿದ್ದರೆ, ಪರಿಶಿಷ್ಟ ಜಾತಿಯ ಮಹಿಳೆಯರು ಕಡಿಮೆ ಪ್ರಮಾಣದಲ್ಲಿ ತವರು ಮನೆಯಿಂದ ಭೂ ಒಡೆತನ ಹೊಂದಿರುವರು. ಒಟ್ಟಿನಲ್ಲಿ ತವರು ಮನೆಯಿಂದ ಭೂ ಒಡೆತನ ಹೊಂದಿರುವ ಮಹಿಳೆಯರ ಸರಾಸರಿ ಪ್ರಮಾಣ ಶೇ.೭ರಷ್ಟು ಮಾತ್ರ.

ಮಹಿಳೆಯರು ಅಧಿಕ ಪ್ರಮಾಣದಲ್ಲಿ ಅಂದರೆ ಶೇ. ೯೩ರಷ್ಟು 'ಪತಿಯ ಮನೆಯಿಂದ' ಭೂಮಿಯ ಒಡೆತನವನ್ನು ಹೊಂದಿದ್ದಾರೆ. ಇವರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇ. ೯೭ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ. ೯೦ರಷ್ಟು ಮಹಿಳೆಯರು ಮತ್ತು ಶೇ. ೯೧ರಷ್ಟು ಹಿಂದುಳಿದ ವರ್ಗದ ಮಹಿಳೆಯರು ಪತಿಯ ಮನೆಯ ಭೂಮಿಯ ಒಡೆತನವನ್ನು ಹೊಂದಿದ್ದಾರೆ. ಪರಿಶಿಷ್ಟ ಜಾತಿಯ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಪತಿಯ ಮನೆಯ ಭೂ ಒಡೆತನವನ್ನು ಹೊಂದಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಈ ಪ್ರಮಾಣ ಅತಿ ಕಡಿಮೆಯಲ್ಲಿರುವುದನ್ನು ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

ಪ್ರತಿಯೊಂದು ವರ್ಗದ ಮಹಿಳೆಯರು ತವರು ಮನೆಯಿಂದ ಭೂ ಒಡೆತನವನ್ನು ಕಡಿಮೆ ಪ್ರಮಾಣದಲ್ಲಿ ಹೊಂದಿರುವರು, ಕಾರಣ ಅವರು ತವರಿನಿಂದ ಪಡೆದ ಆಸ್ತಿಯು ತಮಗಿರುವ ಕಾನೂನು, ಹಕ್ಕುಗಳ ಮೂಲಕ ಪಡೆದಿಲ್ಲ. ಬದಲಾಗಿ ವರದಕ್ಷಿಣೆ ಮತ್ತು ತವರು ಮನೆಯಲ್ಲಿ ಗಂಡು ಮಕ್ಕಳಿಲ್ಲದ ಕಾರಣಗಳಿಗಾಗಿ ತವರಿನಿಂದ ಆಸ್ತಿಹಕ್ಕನ್ನು ಪಡೆದಿದ್ದಾರೆ. ಒಂದು ವೇಳೆ ಕಾನೂನಿನ ಮುಖಾಂತರ ತವರು ಮನೆಯಿಂದ ಆಸ್ತಿಹಕ್ಕು ಪಡೆಯಲು ಪ್ರಯತ್ನಿಸಿದರೆ ತವರು ಮನೆಯ ಬಾಂಧವ್ಯ ಕಡಿದು ಹೋಗಬಹುದೆಂಬ ಆತಂಕ ಬಹುತೇಕ ಮಹಿಳೆಯರಲ್ಲಿರುವುದನ್ನು ಕಾಣಬಹುದು. ಹಾಗೆಯೇ ಪತಿಯ ಮನೆಯಿಂದ ಭೂ ಒಡೆತನ ಹೊಂದಿದರೂ ಕೂಡ ಅದು ತನ್ನ ಹಕ್ಕು ಎಂದು ಪಡೆದಿಲ್ಲ. ಪತಿ ಸರ್ಕಾರಿ ನೌಕರನಾಗಿದ್ದಾಗ ಸರ್ಕಾರಕ್ಕೆ ತೆರಿಗೆ ಕೊಡಬೇಕಾಗುತ್ತದೆಂಬ ಕಾರಣದಿಂದ, ಮತ್ತು ಕುಟುಂಬದಲ್ಲಿ ಅಧಿಕ ಭೂಮಿಯಿರುವ ಸಂದರ್ಭದಲ್ಲಿ ಭೂ ಕಂದಾಯ ಕಟ್ಟಬೇಕಾಗುವುದೆಂಬ ಕಾರಣದಿಂದ. ಹಾಗೂ ಮಧ್ಯಮ ವರ್ಗದ ಕೃಷಿಕರು ಬ್ಯಾಂಕ್‌ನಿಂದ ಕೃಷಿ ಸಾಲವನ್ನು ಪಡೆಯಲು ಸುಲಭವಾಗುವ ಸಲುವಾಗಿ ಮಹಿಳೆಯರ ಹೆಸರಿನಲ್ಲಿ ಭೂಮಿಯನ್ನು ಮಾಡಿರುವುದು ಗುಲಬರ್ಗಾ ಜಿಲ್ಲೆಯಾದ್ಯಂತ ಕಂಡುಬರುತ್ತದೆ. ಕ್ಷೇತ್ರಕಾರ್ಯದ ಮೂಲಕ ಅಧಿಕ ಪ್ರಮಾಣದಲ್ಲಿ ಮಹಿಳೆಯರು ಪತಿಯ ಮನೆಯಿಂದ ಭೂಮಿಯ ಒಡೆತನ ಹೊಂದಿರುವುದನ್ನು ಕಾಣಬಹುದು.

ಮಹಿಳೆಯರು ಭೂ ಒಡೆತನ ಹೊಂದಿರುವ ಹಿನ್ನೆಲೆಯನ್ನು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿದುಕೊಳ್ಳಲಾಗಿದೆ.

**ಕೋಷ್ಟಕ -೪**

**ಮಹಿಳೆಯರು ಭೂ ಒಡೆತನ ಹೊಂದಿರುವ ಹಿನ್ನೆಲೆ**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಕುಟುಂಬದಲ್ಲಿ ಗಂಡು ಸಂತಾನವಿರದ ಕಾರಣ ಭೂ ಒಡೆತನ ಹೊಂದಿದವರು | ೧ | ೫ | ೪ | ೩.೫ |
| ೦೨ | ವರದಕ್ಷಿಣೆಯ ರೂಪದಲ್ಲಿ ಭೂ ಒಡೆತನ ಹೊಂದಿದವರು | ೧ | ೫ | ೪ | ೩.೫ |
| ೦೩ | ಪತಿಯು ಸರ್ಕಾರಿ ನೌಕರನಾಗಿರುವುದರಿಂದ/ ಕುಟುಂಬದಲ್ಲಿ ಅಧಿಕ ಭೂಮಿ ಇರುವುದರಿಂದ ಭೂ ಒಡೆತನ ಹೊಂದಿದವರು | ೩೩ | ೩೦ | ೩೬ | ೩೪ |
| ೦೪. | ಸರ್ಕಾರದಿಂದ ಸಾಲ ಸೌಲಭ್ಯ ಪಡೆಯಲು ಭೂ ಒಡೆತನ ಹೊಂದಿದವರು. | ೯೮ | ೯೦ | ೫೬ | ೫೯ |

ಈ ಕೋಷ್ಟಕದ ಮೂಲಕ ಗಮನಿಸುವ ಅಂಶವೆಂದರೆ, 'ಕುಟುಂಬದಲ್ಲಿ ಗಂಡು ಸಂತಾನವಿಲ್ಲದ ಕಾರಣ ಭೂ ಒಡೆತನವನ್ನು ಹೊಂದಿದ್ದೇವೆ' ಎಂದವರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇ.೧ರಷ್ಟು ಮಹಿಳೆಯರು, ಪರಿಶಿಷ್ಟ

ಪಂಗಡದಲ್ಲಿ ಶೇ.೫ರಷ್ಟು ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೪ರಷ್ಟು ಮಹಿಳೆಯರು. ಕಂಡುಬರುತ್ತಾರೆ.

ಪತಿ ಸರ್ಕಾರಿ ನೌಕರನಾಗಿರುವುದರಿಂದ ಭೂ ಒಡೆತನ ಹೊಂದಿದವರು ಕಂಡುಬರದೆ ಕುಟುಂಬದಲ್ಲಿ ಅಧಿಕ ಭೂಮಿ ಇರುವ ಸಂದರ್ಭದಲ್ಲಿ ಮಾತ್ರ ಮಹಿಳೆಯರು ಭೂ ಒಡೆತನ ಹೊಂದಿರುವುದು ಕಂಡುಬರುವುದು. ಇವರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇ. ೩೩ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ. ೩೦ ರಷ್ಟು ಮಹಿಳೆಯರು ಮತ್ತು ಶೇ. ೩೬ ರಷ್ಟು ಹಿಂದುವಳಿದ ವರ್ಗದ ಮಹಿಳೆಯರು ಕಂಡುಬರುವರು.

ಹಾಗೆಯೇ 'ವರದಕ್ಷಿಣೆ ರೂಪದಲ್ಲಿ' ತಂದೆಯ ಮನೆಯಿಂದ ಭೂಮಿಯನ್ನು ಪಡೆದವರ ಪ್ರಮಾಣವನ್ನು ಗಮನಿಸಿದಾಗ ಈ ಮೊದಲೇ ಹೇಳಿದಂತೆ ಕುಟುಂಬದಲ್ಲಿ ಗಂಡು ಸಂತಾನವಿಲ್ಲದ ಕಾರಣ ಭೂ ಒಡೆತನ ಹೊಂದಿದ ಮಹಿಳೆಯರ ಪ್ರಮಾಣದಷ್ಟೆ, ಪರಿಶಿಷ್ಟ ಜಾತಿಯ, ಪರಿಶಿಷ್ಟ ಪಂಗಡದ ಮತ್ತು ಹಿಂದುಳಿದ ವರ್ಗದ ಮಹಿಳೆಯರು ವರದಕ್ಷಿಣೆ ರೂಪದಲ್ಲಿ ಭೂಮಿಯನ್ನು ಹೊಂದಿರುವರು.

'ಸರ್ಕಾರದಿಂದ ಕೃಷಿ ಸಾಲ ಸೌಲಭ್ಯಗಳನ್ನು ಪಡೆಯುವುದಕ್ಕೋಸ್ಕರ' ಜಿಲ್ಲೆಯ ಬಹಳಷ್ಟು ಪುರುಷರು ತಮ್ಮ ಪತ್ನಿಯ ಅಥವಾ ತಾಯಿಯ ಹೆಸರಿನಲ್ಲಿ ಭೂಮಿ ಮಾಡಿರುವುದನ್ನು ಕಾಣಬಹುದು. ಇವರ ಪ್ರಮಾಣವನ್ನು ಗಮನಿಸಿದಾಗ ಪರಿಶಿಷ್ಟ ಜಾತಿಯಲ್ಲಿ ಶೇ. ೬೫ ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದ ಶೇ. ೬೦ ರಷ್ಟು ಮಹಿಳೆಯರು ಮತ್ತು ಶೇ. ೫೬ ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡುಬರುತ್ತಾರೆ. ಇವರಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರು ಅಧಿಕವಿದ್ದರೆ ಪರಿಶಿಷ್ಟ ಪಂಗಡದ ಮಹಿಳೆಯರ ಪ್ರಮಾಣ ಕಡಿಮೆ ಇದೆ.

ಪರಿಶಿಷ್ಟ ಜಾತಿಯ ಮಹಿಳೆಯರು, ಪರಿಶಿಷ್ಟ ಪಂಗಡದ ಮಹಿಳೆಯರು ಮತ್ತು ಹಿಂದುಳಿದ ವರ್ಗದ ಮಹಿಳೆಯರು, ಕುಟುಂಬದಲ್ಲಿ ಗಂಡು ಸಂತಾನವಿರದ ಕಾರಣ ಮತ್ತು ವರದಕ್ಷಿಣೆ ರೂಪದಲ್ಲಿ ಭೂಮಿಯನ್ನು ಪಡೆದಿರುವುದು ಅತಿ ಕಡಿಮೆ ಪ್ರಮಾಣದಲ್ಲಾದರೆ, ಸರ್ಕಾರದಿಂದ ಕೃಷಿ ಸಾಲ ಪಡೆಯಲು ಭೂಮಿಯ ಒಡೆತನ ಹೊಂದಿದ ಮಹಿಳೆಯರ ಪ್ರಮಾಣ ಮೂರು ವರ್ಗಗಳಲ್ಲಿ ಅಧಿಕವಾಗಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಕ್ಷೇತ್ರಕಾರ್ಯಾಧಾರಿತ ಈ ಕೋಷ್ಟಕವನ್ನು ಗಮನಿಸಿದಾಗ, ವರದಕ್ಷಿಣೆ ರೂಪದಲ್ಲಿ ಭೂ ಒಡೆತನ ಪಡೆದ ಮಹಿಳೆಯರ ಪ್ರತಿಶತ ಪ್ರಮಾಣ ಹಾಗೂ ಕುಟುಂಬದಲ್ಲಿ ಗಂಡು ಮಕ್ಕಳಿರದ ಕಾರಣ ಭೂ ಒಡೆತನ ಹೊಂದಿರುವ ಮಹಿಳೆಯರ ಸರಾಸರಿ ಪ್ರಮಾಣ ಶೇ.೩.೫ ರಷ್ಟು ಮಾತ್ರ. ಸರ್ಕಾರದಿಂದ ಸಾಲ ಸೌಲಭ್ಯ ಪಡೆಯುವ ಸಲುವಾಗಿ ಭೂ ಒಡೆತನ ಹೊಂದಿದ ಮಹಿಳೆಯರ ಸರಾಸರಿ ಪ್ರಮಾಣ ಶೇ.೫೯ ರಷ್ಟಿದೆ.

ತವರು ಮನೆಯಿಂದ ಭೂ ಒಡೆತನ ಹೊಂದಿರುವವರು ಅತಿ ಕಡಿಮೆ ಪ್ರಮಾಣದಲ್ಲಿದ್ದಾರೆ. ಭೂ ಒಡೆತನ ಹಕ್ಕಿನ ರೂಪದಲ್ಲಿ ಇರದೆ, ವರದಕ್ಷಿಣೆಯ ರೂಪದಲ್ಲಿ ಅಥವಾ ತವರು ಮನೆಯಲ್ಲಿ ಗಂಡು ಮಕ್ಕಳಿಲ್ಲದ ಕಾರಣಕ್ಕಾಗಿಯೇ ಹೊಂದಿರುವುದನ್ನು ಕಾಣಬಹುದು. ಸರ್ಕಾರದಿಂದ ಸಾಲ ಪಡೆಯಲು ಮಹಿಳೆಯು ಭೂ ಒಡತಿಯಾಗಿರುವುದು ಗುಲಬರ್ಗಾ ಜಿಲ್ಲೆಯಾದ್ಯಂತ ಕಂಡುಬರುತ್ತದೆ. ಇಲ್ಲಿ ಪತಿಯು ಸರ್ಕಾರಿ ನೌಕರನಾಗಿರುವುದರ ಜೊತೆಗೆ ಅಧಿಕ ಪ್ರಮಾಣದಲ್ಲಿ ಭೂಮಿ ಇದ್ದಂಥ ಸಂದರ್ಭದಲ್ಲಿ ಮತ್ತು ಪತಿ ಸರ್ಕಾರಿ ನೌಕರನಿಲ್ಲದಿದ್ದರೂ ಭೂಮಿ ಅಧಿಕವಿದ್ದರೆ (ದೊಡ್ಡ ಭೂ ಹಿಡುವಳಿಯ ಒಡೆತನವನ್ನು ಹೊಂದಿರುವಂಥ ಸಂದರ್ಭದಲ್ಲಿ) ಸರ್ಕಾರಕ್ಕೆ

ಅಧಿಕ ಕಂದಾಯ ಕಟ್ಟಬೇಕಾಗುತ್ತದೆ ಎನ್ನುವ ಕಾರಣಕ್ಕಾಗಿ ಮನೆಯಲ್ಲಿ ಪತ್ನಿಯ ಹೆಸರಿಗೆ, ತಾಯಿಯ ಹೆಸರಿಗೆ ಭೂಮಿಯನ್ನು ವರ್ಗಾಯಿಸುವರೇ ಹೊರತಾಗಿ ಮದುವೆಯಾಗಿ ಹೋಗುವಂಥ ಮಹಿಳೆಗೆ ಭೂ ಒಡೆತನ ನೀಡುವುದಿಲ್ಲ. ಒಂದು ವೇಳೆ ಆಕೆಯ ಹೆಸರಿನಲ್ಲಿ ಭೂಮಿಯನ್ನು ಮಾಡಿದರೆ ಮದುವೆ ಸಂದರ್ಭದಲ್ಲಿ ಭೂಮಿಯನ್ನು ಕೂಡ ವರದಕ್ಷಿಣೆಯ ರೂಪದಲ್ಲಿ ಕೊಡಬೇಕಾಗುತ್ತದೆ. ಹೀಗಾಗಿ ಕುಟುಂಬದಲ್ಲಿ ಪುರುಷರ ಹೆಸರಿನಲ್ಲಿ ಭೂಮಿಯನ್ನು ವರ್ಗಾಯಿಸಿದ ನಂತರ ಉಳಿದ ಭೂಮಿಯನ್ನು ಹೆಂಡತಿಯ ಅಥವಾ ತಾಯಿಯ ಹೆಸರಿಗೆ ವರ್ಗಾಯಿಸುತ್ತಾರೆ. ಆದರೆ ಯಾವುದೇ ರೀತಿಯಲ್ಲಿ ಆ ಭೂಮಿಯ ಮೇಲೆ ಮಹಿಳೆಯರಿಗೆ ನಿಯಂತ್ರಣ, ಜವಾಬ್ದಾರಿ ಯಾವುದು ಇರುವುದಿಲ್ಲ. ಅಂತೆಯೇ ಅಧಿಕ ಪ್ರಮಾಣದಲ್ಲಿ ಜಂಟಿ ಒಡೆತನ ಹೊಂದಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ. ಒಟ್ಟಿನಲ್ಲಿ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಹಕ್ಕು ಎಂದು ಭೂ ಒಡೆತನವನ್ನು ನೀಡದೆ ಪುರುಷರಿಗೆ ಅನುಕೂಲವಾಗುವ ರೀತಿಯಲ್ಲಿ ಕೇವಲ ಹೆಸರಿಗೆ ಮಾತ್ರ ಭೂ ಒಡೆತನವನ್ನು ನೀಡಲಾಗಿದೆ.

ಮಹಿಳೆಯರು ತಮ್ಮ ತಂದೆ-ತಾಯಿಯರನ್ನು ನೋಡಿಕೊಳ್ಳಲು ಇರುವ ಕಾರಣಗಳ ಬಗ್ಗೆ ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ -೫**

**ಮಹಿಳೆಯರು ತಮ್ಮ ತಂದೆ - ತಾಯಿಯರ ತಿಥಿ ಮಾಡುವ ಕುರಿತು**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ತಂದೆ-ತಾಯಿಯರ ತಿಥಿ ಮಾಡುವುದರಿಂದ ಕುಟುಂಬಕ್ಕೆ ಕೆಡುಕಾಗುತ್ತದೆ | ೩ | ೫ | ೧ | ೨ |
| ೦೨ | ಗಂಡು ಮಕ್ಕಳೆ ತಂದೆ - ತಾಯಿಯರ ತಿಥಿ ಮಾಡಬೇಕು ಎಂಬ ನಂಬಿಕೆ ಇದೆ | ೩೭ | ೩೫ | ೨೪ | ೨೯.೫ |
| ೦೩ | ತಂದೆ-ತಾಯಿಯರ ತಿಥಿ ಮಾಡದವರು | ೬೦ | ೬೦ | ೭೫ | ೬೮.೫ |

ಈ ಮೇಲಿನ ಕೋಷ್ಟಕದ ಅಂಕಿ-ಅಂಶಗಳನ್ನು ಗಮನಿಸಿದಾಗ ತಂದೆ-ತಾಯಿಯರ ಮೂಲಕ ಆಸ್ತಿ ಪಡೆದಿದ್ದರೂ ಅಥವಾ ಪಡೆಯದಿದ್ದರೂ ಅವರ ಮರಣದ ನಂತರ ತಿಥಿ ಮಾಡುವ ಕುರಿತಂತೆ ಈ ರೀತಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು. 'ತಂದೆ-ತಾಯಿಯ ತಿಥಿ ಹೆಣ್ಣು ಮಕ್ಕಳು ಮಾಡುವುದರಿಂದ ಕುಟುಂಬಕ್ಕೆ ಕೇಡಾಗುತ್ತದೆ. ಹಾಗಾಗಿ ನಾವು ತಂದೆ-ತಾಯಿ ಮರಣದ ನಂತರ ತಿಥಿ ಮಾಡಲು ಹೋಗುವುದಿಲ್ಲ' ಎಂದವರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇ.೩ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದ ಮಹಿಳೆಯರಲ್ಲಿ ಈ ಪ್ರಮಾಣ ಶೇ.೫ ರಷ್ಟು ಕಂಡುಬರುತ್ತದೆ. ಹಾಗೆಯೇ ಶೇ.೧ ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇವರಲ್ಲಿ ಪರಿಶಿಷ್ಟ ಪಂಗಡದ ಮಹಿಳೆಯರ ಪ್ರಮಾಣ ಅಧಿಕವಿದ್ದರೆ, ಹಿಂದುಳಿದ ವರ್ಗದ ಮಹಿಳೆಯರ ಪ್ರಮಾಣ ಕಡಿಮೆ ಇದೆ.

‘ಗಂಡು ಮಕ್ಕಳೇ ತಂದೆ-ತಾಯಿಯರ ತಿಥಿ ಮಾಡಬೇಕು ಎಂಬ ನಂಬಿಕೆ ಇರುವ ಕಾರಣ ಮಹಿಳೆಯರು ತಂದೆ-ತಾಯಿಯರ ತಿಥಿ ಮಾಡುವುದಿಲ್ಲ’ ಎಂಬ ಅಭಿಪ್ರಾಯವನ್ನು ನೀಡಿದವರು ಪರಿಶಿಷ್ಟ ಜಾತಿಯಲ್ಲಿ ಶೇ.೩೭ ರಷ್ಟು ಮಹಿಳೆಯರು, ಶೇ.೩೫ರಷ್ಟು ಪರಿಶಿಷ್ಟ ಪಂಗಡದ ಮಹಿಳೆಯರು ಮತ್ತು ಶೇ.೨೪ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡುಬರುತ್ತಾರೆ. ಇವರಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರು ಈ ಅಭಿಪ್ರಾಯವನ್ನು ಅಧಿಕವಾಗಿ ವ್ಯಕ್ತಪಡಿಸಿದರೆ ಹಿಂದುಳಿದ ವರ್ಗದ ಮಹಿಳೆಯರು ಕಡಿಮೆ ಪ್ರಮಾಣದಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದನ್ನು ಕಾಣಬಹುದು.

ಕೆಲವು ಕುಟುಂಬದ ಮಹಿಳೆಯರು ಸ್ಪಷ್ಟವಾಗಿ ಯಾವುದೇ ಕಾರಣಗಳನ್ನು ನೀಡದೆ ತಂದೆ-ತಾಯಿಯರ ತಿಥಿ ಮಾಡುವುದು ತಮಗೆ ಸಂಬಂಧಿಸಿಲ್ಲ ಎಂದಿರುವವರು. ಅವರಲ್ಲಿ ಪರಿಶಿಷ್ಟ ಜಾತಿಯ ಶೇ.೬೦ ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದ ಶೇ.೬೦ ಮಹಿಳೆಯರು ಮತ್ತು ಶೇ.೭೫ ರಷ್ಟು ಮಹಿಳೆಯರು ಹಿಂದುಳಿದ ವರ್ಗದ ವರ್ಗದಲ್ಲಿ ಕಂಡುಬರುವವರು. ಇಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರು ಒಂದೇ ಪ್ರಮಾಣದಲ್ಲಿದ್ದರೆ, ಹಿಂದುಳಿದ ವರ್ಗದ ಮಹಿಳೆಯರು ಅಧಿಕ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಗಮನಿಸಿದಾಗ ತಂದೆ-ತಾಯಿಯರ ತಿಥಿ ಮಾಡುವುದಿಲ್ಲ ಎಂದು ಹೇಳಿದವರ ಸರಾಸರಿ ಪ್ರಮಾಣ ಶೇ.೬೫.೫ ರಷ್ಟು. ಕಾರಣವೇನೆಂದರೇ ಆಸ್ತಿ ಪಡೆದರೂ, ಪಡೆಯದಿದ್ದರೂ ಬೇರೆ ಕುಟುಂಬಕ್ಕೆ ಮದುವೆಯಾಗಿ ಬಂದಿರುವುದರಿಂದ ಪತಿಯ ಕುಟುಂಬದವರೆಂದು ಗುರುತಿಸಿಕೊಳ್ಳುವರು ಹೊರತಾಗಿ ತವರಿನ ಕುಟುಂಬದ ಮೂಲಕ ಗುರುತಿಸಿಕೊಳ್ಳುವುದಿಲ್ಲ. ಒಳ್ಳೆಯದಾಗಲಿ, ಕೆಟ್ಟದಾಗಲಿ ತಂದೆ-ತಾಯಿಯರ ತಿಥಿ ಮಾಡಲು ಹೋಗುವುದಿಲ್ಲ. ಒಟ್ಟಿನಲ್ಲಿ ಹೆಣ್ಣು ಮದುವೆ ಆದ ಮೇಲೆ ಪತಿ ಮನೆಗೆ ಮಾತ್ರ ಸಂಬಂಧಿತಳು. ತಂದೆ-ತಾಯಿ ಇರುವವರೆಗೆ ಅವರನ್ನು ನೋಡಿಕೊಳ್ಳಬಹುದು ಹೊರತಾಗಿ ಅವರ ತಿಥಿ ಮಾಡಕೂಡದು, ಏನಿದ್ದರೂ ಅದು ಆ ಕುಟುಂಬದವರಿಗೆ ಮೀಸಲು ಎನ್ನುವ ಭಾವನೆಯು ಮಹಿಳೆಯರ ಮನಸ್ಸಿನಲ್ಲಿ ನಮ್ಮ ವ್ಯವಸ್ಥೆಯು ಮೂಡಿಸಿದೆ.

ತಂದೆ-ತಾಯಿಯರ ತಿಥಿಯನ್ನು ಗಂಡು ಮಕ್ಕಳೇ ಮಾಡಬೇಕೆಂಬ ನಂಬಿಕೆ ಇರುವುದರಿಂದ ನಾವು (ಮಹಿಳೆಯರು) ತಿಥಿ ಮಾಡಲಾಗುವುದಿಲ್ಲ ಎಂದು ಹೇಳಿದವರ ಒಟ್ಟಾರೆ ಸರಾಸರಿ ಪ್ರಮಾಣ ಶೇ.೨೯.೫ ರಷ್ಟು ಇದೆ. ತಂದೆ-ತಾಯಿಯರು ತೀರಿಕೊಂಡಾಗ ಬೆಂಕಿ ಇಡುವುದು, ಪಿಂಡ ಬಿಡುವುದು ಮತ್ತು ತಿಥಿ ಮಾಡುವುದು ಕುಟುಂಬದ ಗಂಡು ಮಕ್ಕಳೆ, ಇವರೆ ತಿಥಿ ಮಾಡುವುದರಿಂದ ಗತಿಸಿದವರು ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆ ಇರುವುದರಿಂದಲೇ ಗಂಡು ಸಂತಾನಕ್ಕೆ ಪ್ರಾಮುಖ್ಯತೆ ಒದಗಿತು. ಈ ರೀತಿಯ ಅನೇಕ ನಂಬಿಕೆಗಳು ಪ್ರಾಚೀನ ಕಾಲದಿಂದ ಇಂದಿನ ಕಾಲದವರೆಗೂ ಮುಂದುವರೆದುಕೊಂಡೇ ಬಂದಿದೆ. ಇದಕ್ಕೆ ಗುಲಬರ್ಗಾ ಜಿಲ್ಲೆಯ ಜನರು ಹೊರತಾಗಿಲ್ಲ. ಈ ರೀತಿಯ ಸಂಪ್ರದಾಯ, ನಂಬಿಕೆಗಳನ್ನು ಮೀರಿ ಮಹಿಳೆಯರು ಮುಂದೆ ಬರಬೇಕಾಗಿದೆ.

ತಂದೆ-ತಾಯಿಯರ ತಿಥಿ ಮಾಡುವುದರಿಂದ ಕುಟುಂಬಕ್ಕೆ ಕೆಡುಕಾಗುತ್ತದೆ ಎಂಬ ಅಭಿಪ್ರಾಯಪಟ್ಟ ಮಹಿಳೆಯರ ಒಟ್ಟಾರೆ ಸರಾಸರಿ ಪ್ರಮಾಣ ಶೇ.೨ರಷ್ಟು ಮಾತ್ರ. ಹೆಣ್ಣು ಮಕ್ಕಳು ತಂದೆ-ತಾಯಿಯರ ತಿಥಿ ಮಾಡುವುದರಿಂದ ಕುಟುಂಬದಲ್ಲಿ ಎಲ್ಲಾ ರೀತಿಯಲ್ಲಿ ನಷ್ಟವಾಗುತ್ತದೆ, ಮಕ್ಕಳು ಸರಿದಾರಿ ಹಿಡಿಯುವುದಿಲ್ಲ, ಕುಟುಂಬದ ಸದಸ್ಯರು ಕಾಯಿಲೆಗಳಿಗೆ ಒಳಗಾಗುವರು ಎಂದು ಹೀಗೆ ಕೆಲವು ನಂಬಿಕೆಗಳನ್ನು ಸಮಾಜದಲ್ಲಿ ಕಾಣಬಹುದು. ಒಟ್ಟಿನಲ್ಲಿ ಸಮಾಜದಲ್ಲಿ ಗಂಡು ಮಕ್ಕಳ ಪ್ರಾಮುಖ್ಯತೆ ಮತ್ತು ಗಂಡು ಮಕ್ಕಳೆ ಆಸ್ತಿಯ ವಾರಸುದಾರರಾಗುವುದರಿಂದ ಅವರೇ ತಂದೆ-ತಾಯಿಯರ ತಿಥಿಯನ್ನು ಮಾಡಬೇಕು ಮತ್ತು ಮದುವೆಯಾದ ಮಹಿಳೆಯರಿಗೆ ತವರು ಮನೆಯಲ್ಲಿ

ಯಾವುದೇ ಪ್ರಮುಖವಾದ ಸದಸ್ಯತ್ವ ಇರಬಾರದೆಂಬ ನಂಬಿಕೆಗಳು ಇವೆ. ಈ ಎಲ್ಲ ನಂಬಿಕೆಗಳ ಮೂಲಕ ಮಹಿಳೆಗೆ ಆಸ್ತಿ ನೀಡದೆ ಪುರುಷನಿಗೆ ಆಸ್ತಿಯ ವಾರಸುದಾರರನ್ನಾಗಿ ಮಾಡಲು ಹೂಡಿರುವ ಹುನ್ನಾರವಾಗಿದೆ.

ಇಷ್ಟೆಲ್ಲಾ ಮಹಿಳಾ ಆಸ್ತಿಹಕ್ಕು ಕಾಯ್ದೆಗಳು ಜಾರಿಗೆ ಬಂದರೂ ಕೂಡ ಮಹಿಳೆಯು ತವರು ಮನೆಯ ಭೂ ಒಡತಿಯಾಗಿರುವುದು ಅತಿ ಕಡಿಮೆ. ವರದಕ್ಷಿಣೆ ರೂಪದಲ್ಲಿ, ಗಂಡು ಸಂತಾನವಿರದ ಕಾರಣ ಭೂಮಿಯನ್ನು ಪಡೆದಿದ್ದಾರೆ ಹೊರತು ತನಗೂ ಹಕ್ಕಿದೆ ಎನ್ನುವ ಕಾರಣಕ್ಕಾಗಿ ಪಡೆದಿಲ್ಲ. ಇನ್ನು ಪತಿಯ ಮನೆಯಿಂದ ಭೂ ಒಡೆತನವನ್ನು ಪಡೆದಿದ್ದರೂ ಅದು ಹಕ್ಕೆಂದು ಪಡೆಯದೆ ಪತಿ ಸರ್ಕಾರಿ ನೌಕರನಾಗಿರುವ ಸಂದರ್ಭದಲ್ಲಿ ಮತ್ತು ಪತಿ ತೀರಿಕೊಂಡ ಸಂದರ್ಭದಲ್ಲಿ, ಪತಿಯನ್ನು ಬಿಟ್ಟು ಜೀವನ ನಡೆಸುವುದು ದುಸ್ಥರವಾದ ಸಂದರ್ಭದಲ್ಲಿ ಮತ್ತು ಸರ್ಕಾರದಿಂದ ಸಾಲ ಪಡೆಯಬೇಕೆಂಬ ಕಾರಣಕ್ಕಾಗಿಯೇ ಮಹಿಳೆಯು ಭೂ ಒಡೆತನ ಹೊಂದಿರುವಳು. ಇನ್ನು ಕೆಲವು ಸಂದರ್ಭಗಳಲ್ಲಿ ಮಹಿಳೆಯು ತವರು ಮನೆಯಿಂದ ಭೂಮಿ ಹೊಂದಿದ್ದರೆ ತಂದೆ-ತಾಯಿಯರನ್ನು ನೋಡಿಕೊಳ್ಳುವರೆ ಹೊರತಾಗಿ ಅವರು ತೀರಿದ್ದರೆ ತಿಥಿ ಮಾಡುವುದಿಲ್ಲ. ಅದರಿಂದ ಕುಟುಂಬಕ್ಕೆ ಕೆಡುಕಾಗುತ್ತದೆ ಎನ್ನುವ ನಂಬಿಕೆ ಈಗಲೂ ಇದೆ. ಅಲ್ಲದೆ ಮಹಿಳೆಯು ತವರು ಮನೆಯಿಂದ ವರದಕ್ಷಿಣೆಯ ರೂಪದಲ್ಲಿ ಭೂಮಿಯನ್ನು ಪಡೆದರೂ ಕೂಡ ಅದು ಅವಳ ಹೆಸರಿನಲ್ಲಿರದೆ ಪತಿಯ ಕುಟುಂಬದವರ ಹೆಸರಿನ ಜೊತೆ ಕೂಡಿರುತ್ತದೆ. ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವ ರೀತಿಯಲ್ಲಿ ಭೂ ಒಡೆತನ ನೀಡಿದ್ದೇವೆ ಎಂದು ಹೇಳಿಕೊಳ್ಳಲಾಗಿದೆ. ಆ ಮೂಲಕ ಮಹಿಳೆಗೆ ಹಕ್ಕಿನಿಂದ ಭೂ ಒಡೆತನ ದೊರೆಯದೆ ವ್ಯವಸ್ಥೆಯು ಯಾವುದಾದರೂ ಹಿನ್ನೆಲೆಯನ್ನು ಇಟ್ಟುಕೊಂಡೆ ಮಹಿಳೆಗೆ ಒಡೆತನ ಹೊಂದುವಂತೆ ಮಾಡಿದೆ.

**೮.೩. ಒಡೆತನ ಹೊಂದಿರುವ ಭೂಮಿಯ ಸ್ವರೂಪ**

ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ಸ್ವರೂಪ, ಭೂಮಿಯ ಗುಣಧರ್ಮ ಕುರಿತು ಅವರೇ ವ್ಯಕ್ತಪಡಿಸಿದಂಥ ವಿಚಾರಗಳನ್ನು ಇಲ್ಲಿ ನೀಡಲಾಗಿದೆ.

**ಕೋಷ್ಟಕ -೬**

**ಮಹಿಳೆಯರು ಒಡೆತನ ಹೊಂದಿರುವ ಭೂ ಹಿಡುವಳಿ**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | 'ಅತಿ ಸಣ್ಣ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು | ೨೨ | ೩೦ | ೨೯ | ೨೬.೫ |
| ೦೨ | 'ಸಣ್ಣ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು | ೬೦ | ೪೦ | ೩೨ | ೪೨.೫ |
| ೦೩ | 'ಅರೆ ಮಧ್ಯಮ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು | ೧೨ | ೨೦ | ೧೮ | ೧೬ |
| ೦೪. | 'ಮಧ್ಯಮ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು | ೬ | ೧೦ | ೧೭ | ೧೨.೫ |
| ೦೫. | 'ದೊಡ್ಡ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು | - | - | ೪ | ೨.೫ |

ಈ ಮೇಲಿನ ಕೋಷ್ಟಕದ ಅಂಕಿ-ಅಂಶಗಳ ಪ್ರಕಾರ ಗುಲಬರ್ಗಾ ಜಿಲ್ಲೆಯಲ್ಲಿ ಕಂಡುಬರುವ ಐದು ತರಹದ ಹಿಡುವಳಿಗಳಲ್ಲಿ ಭೂ ಒಡೆತನ ಹೊಂದಿರುವ ಮಹಿಳೆಯರ ಪ್ರಮಾಣವನ್ನು ಗಮನಿಸಲಾಗಿದೆ. 'ಅತಿಸಣ್ಣ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು ಪರಿಶಿಷ್ಟ ಜಾತಿಯಲ್ಲಿ ಶೇ.೨೨ರಷ್ಟಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ.೩೦ ರಷ್ಟಿರುವುದು ಕಂಡುಬರುತ್ತದೆ. ಹಿಂದುಳಿದ ವರ್ಗದಲ್ಲಿ ಈ ಪ್ರಮಾಣ ಶೇ.೨೯ರಷ್ಟಿದೆ. ಈ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು ಪರಿಶಿಷ್ಟ ಪಂಗಡದಲ್ಲಿ ಅಧಿಕವಿದ್ದರೆ, ಪರಿಶಿಷ್ಟ ಜಾತಿಯಲ್ಲಿ ಕಡಿಮೆ ಪ್ರಮಾಣದಲ್ಲಿ ಒಡೆತನವನ್ನು ಹೊಂದಿರುವರು. ಈ ವರ್ಗದ ಕುಟುಂಬಗಳಲ್ಲಿರುವ ಭೂಮಿಯ ಪ್ರಮಾಣ ೧ ಹೆಕ್ಟೇರುಗಳಿಗಿಂತ ಕಡಿಮೆ ಇರುವುದು.

ಪರಿಶಿಷ್ಟ ಜಾತಿಯಲ್ಲಿ ಶೇ.೬೦ ರಷ್ಟು ಮಹಿಳೆಯರು 'ಸಣ್ಣ ಭೂ ಹಿಡುವಳಿಯ' ಒಡೆತನ ಹೊಂದಿದ್ದಾರೆ. ಈ ಪ್ರಮಾಣವು ಪರಿಶಿಷ್ಟ ಪಂಗಡದಲ್ಲಿ ೪೦ ಪ್ರತಿಶತದಷ್ಟಿದ್ದರೆ, ಹಿಂದುಳಿದ ವರ್ಗದವರಲ್ಲಿ ಶೇ.೩೨ ರಷ್ಟು ಮಹಿಳೆಯರು ಸಣ್ಣ ಭೂ ಹಿಡುವಳಿಯ ಮಾಲೀಕರಾಗಿರುವರು. ಇಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರ ಪ್ರಮಾಣ ಅಧಿಕವಾಗಿದ್ದರೆ, ಹಿಂದುಳಿದ ವರ್ಗದ ಮಹಿಳೆಯರ ಪ್ರಮಾಣ ಕಡಿಮೆ ಇದೆ. ಈ ಹಿಡುವಳಿಯಲ್ಲಿ ೧ ರಿಂದ ೨ ಹೆಕ್ಟೇರನಷ್ಟು ಭೂ ವಿಸ್ತೀರ್ಣ ಒಳಗೊಂಡಿರುತ್ತದೆ.

'ಅರೆ ಮಧ್ಯಮ' ಭೂ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರನ್ನು ನೋಡಿದಾಗ ಪರಿಶಿಷ್ಟ ಜಾತಿಯಲ್ಲಿ ಶೇ.೧೨ರಷ್ಟಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ.೨೦ರಷ್ಟು ಮಹಿಳೆಯರು ಕಂಡುಬರುತ್ತಾರೆ. ಶೇ.೧೮ರಷ್ಟು ಪ್ರಮಾಣದಲ್ಲಿ ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡುಬರುತ್ತಾರೆ. ಅರೆಮಧ್ಯಮ ಭೂ ಹಿಡುವಳಿಯು ೨ ರಿಂದ ೪ ಹೆಕ್ಟೇರುಗಳಷ್ಟು ಭೂಮಿಯನ್ನು ಹೊಂದಿರುತ್ತದೆ. ಈ ಭೂ ಹಿಡುವಳಿಯ ಒಡೆತನ ಹೊಂದಿದವರಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರ ಪ್ರಮಾಣ ಕಡಿಮೆಯಿದ್ದರೆ ಪರಿಶಿಷ್ಟ ಪಂಗಡದಲ್ಲಿ ಮಹಿಳೆಯರ ಪ್ರಮಾಣ ಅಧಿಕವಾಗಿದೆ.

ರೈತಾಪಿ ಹಿಡುವಳಿಯ (ಅತಿಸಣ್ಣ, ಸಣ್ಣ, ಅರೆಮಧ್ಯಮ) ಭೂ ಮಾಲೀಕತ್ವದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರ ಪ್ರಮಾಣವು ಹಿಂದುಳಿದ ವರ್ಗದ ಮಹಿಳೆಯರ ಪ್ರಮಾಣಕ್ಕಿಂತ ಹೆಚ್ಚಾಗಿದೆ. ಕಾರಣ ಈ ತರಹದ ಹಿಡುವಳಿಯಲ್ಲಿ ಭೂಮಿಯ ವಿಸ್ತೀರ್ಣದ ಪ್ರಮಾಣವು ಕಡಿಮೆ ಇರುವುದರಿಂದ ಬಹುತೇಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಈ ಹಿಡುವಳಿಯಲ್ಲಿ ಅಧಿಕವಾಗಿ ಕಂಡು ಬರುತ್ತಾರೆ. ಕಾರಣ ದೊಡ್ಡ ಭೂ ಹಿಡುವಳಿಯ ಒಡೆತನವೆಲ್ಲ ಮೇಲ್ವರ್ಗದ ಪುರುಷರೆ ಅಧಿಕಾರವಾಗಿ ಹೊಂದಿರುವರು. ಇವರು ಭೂ ಒಡೆತನ ಹೊಂದಿದ್ದರೂ ಅಧಿಕವಾಗಿ ಕೃಷಿ ಸಾಲವನ್ನು ಪಡೆಯುವರು ಹಾಗೂ ಇವರು ಕಡಿಮೆ ಭೂಮಿ ಹೊಂದಿರುವುದರಿಂದ ಆದಾಯದ ಪ್ರಮಾಣವು ಕಡಿಮೆಯಿರುವುದು. ಹೀಗಾಗಿ ಬಹುತೇಕ ಮಹಿಳೆಯರು ಕೃಷಿ ಭೂಮಿಯನ್ನೇ ಅವಲಂಬಿಸದೆ ಕೃಷಿ ಕೂಲಿ ಕಾರ್ಮಿಕರಾಗಿರುವುದು ಗುಲಬರ್ಗಾ ಜಿಲ್ಲೆಯಲ್ಲಿ ಕಂಡುಬರುತ್ತದೆ. ಈ ರೀತಿಯ ಭೂ ಹಿಡುವಳಿ ಹೊಂದಿದಂಥವರು ಬರಗಾಲದ ಸಂದರ್ಭದಲ್ಲಿ ಗುಲಬರ್ಗಾದಿಂದ ಇತರ ಜಿಲ್ಲೆಗಳಿಗೆ ವಲಸೆ ಹೋಗುವುದು ಸಹ ಕಂಡುಬರುತ್ತದೆ.

ಜಮೀನ್ದಾರಿ ಭೂ ಹಿಡುವಳಿಗಳೆನಿಸಿರುವ ಮಧ್ಯಮ ಭೂ ಹಿಡುವಳಿಯಲ್ಲಿ ಮಹಿಳೆಯರ ಭೂ ಒಡೆತನದ ಪ್ರಮಾಣವನ್ನು ಗಮನಿಸಿದರೆ ಶೇ.೦ರಷ್ಟು ಪರಿಶಿಷ್ಟ ಜಾತಿಯ ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ.೧೧ರಷ್ಟು, ಹಿಂದುಳಿದ ವರ್ಗದಲ್ಲಿ ಶೇ.೧೭ರಷ್ಟು ಮಹಿಳೆಯರು ಕಂಡು ಬಂದಿರುವರು ಇವರಲ್ಲಿ ಹಿಂದುಳಿದ ವರ್ಗದ ಮಹಿಳೆಯರು ಮಧ್ಯಮ ಭೂ ಹಿಡುವಳಿಯ ಒಡೆತನ ಹೊಂದಿದವರು ಅಧಿಕವಿದ್ದರೆ, ಪರಿಶಿಷ್ಟ ಜಾತಿಯ ಮಹಿಳೆಯರು ಕಡಿಮೆ ಪ್ರಮಾಣದಲ್ಲಿರುವರು.

ಗುಲಬರ್ಗಾ ಜಿಲ್ಲೆಯಲ್ಲಿ ವಿರಳವಾಗಿ ಕೆಲವು ಕುಟುಂಬಗಳಲ್ಲಿ ಮಾತ್ರ ಮಹಿಳೆಯರು ದೊಡ್ಡ ಭೂ ಹಿಡುವಳಿಯ ಒಡತಿಯರಾಗಿದ್ದಾರೆ. ಈ ತರಹದ ಭೂ ಹಿಡುವಳಿಯಲ್ಲಿ ಪರಿಶಿಷ್ಟ ಜಾತಿಯಲ್ಲಿ ಮತ್ತು ಪರಿಶಿಷ್ಟ ಪಂಗಡದಲ್ಲಿ ಮಹಿಳೆಯರು ಕಂಡು ಬರುವುದಿಲ್ಲ. ಹಿಂದುಳಿದ ವರ್ಗದಲ್ಲಿ ಶೇ. ೪ ರಷ್ಟು ಮಹಿಳೆಯರು ಮಾತ್ರ ಕಂಡು ಬಂದಿದ್ದಾರೆ. ಇದರಿಂದ ಅತೀ ಶ್ರೀಮಂತ ಅದರಲ್ಲೂ ಮೇಲ್ವರ್ಗದ ಮಹಿಳೆಯರು ಮಾತ್ರ ಜಮೀನ್ದಾರಿ ಭೂ ಹಿಡುವಳಿಯ ಒಡೆತನವನ್ನು ಹೊಂದಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ.

ಒಟ್ಟಾರೆಯಾಗಿ ಗಮನಿಸಿದಾಗ ದೊಡ್ಡ ಭೂ ಹಿಡುವಳಿಯ ಒಡೆತನ ಹೊಂದಿದವರಲ್ಲಿ ಸರಾಸರಿ ಶೇ. ೨.೫ ರಷ್ಟು ಮಹಿಳೆಯರು ಅತಿ ಕಡಿಮೆ ಪ್ರಮಾಣದಲ್ಲಿ ಭೂ ಒಡತಿಯರಾದರೆ, ಸಣ್ಣ ಭೂ ಹಿಡುವಳಿಯಲ್ಲಿ ಮಹಿಳೆಯರು ಸರಾಸರಿ ಶೇ.೪೨.೫ರಷ್ಟು ಅಧಿಕ ಪ್ರಮಾಣದಲ್ಲಿರುವುದನ್ನು ಜಿಲ್ಲೆಯಲ್ಲಿ ಕಾಣಬಹುದು. ಹಾಗೆಯೇ ಅತಿ ಸಣ್ಣ ಭೂ ಹಿಡುವಳಿಯ ಒಡೆತನ ಹೊಂದಿದವರಲ್ಲಿ ಸರಾಸರಿ ಶೇ.೨೬.೫ರಷ್ಟು ಇದ್ದರೆ, ಅರೆಮಧ್ಯಮ ಭೂ ಹಿಡುವಳಿಯ ಮಾಲೀಕತ್ವ ಹೊಂದಿದ ಮಹಿಳೆಯರ ಪ್ರಮಾಣ ಸರಾಸರಿ ಶೇ.೧೨.೫ರಷ್ಟಿರುವುದು ಕೋಷ್ಟಕದಿಂದ ತಿಳಿದು ಬರುವ ಸಂಗತಿಯಾಗಿದೆ.

ಜಿಲ್ಲೆಯಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧಿಕ ಪ್ರಮಾಣದ ಮಹಿಳೆಯರು ರೈತಾಪಿ ಭೂ ಹಿಡುವಳಿಯ ಮಾಲೀಕರಾಗಿರುವುದು ಕಂಡು ಬಂದಿದೆ. ಜಮೀನ್ದಾರಿ ಭೂ ಹಿಡುವಳಿಯಲ್ಲಿ ಪುರುಷರೇ ಅಧಿಕ ಪ್ರಮಾಣದಲ್ಲಿದ್ದು, ಅಲ್ಲಿ ಮಹಿಳೆಯರು ಬೆರಳೆಣಿಕೆಯಷ್ಟು ಮಾತ್ರ ಇರುವರು. ಅದರಲ್ಲೂ ಮೇಲ್ವರ್ಗದ ಸ್ತ್ರೀಯರೇ ಭೂ ಒಡತಿಯರಾಗಿರುವುದು ಗಮನೀಯ. ರೈತಾಪಿ ಹಿಡುವಳಿಗಳಲ್ಲೂ ಪುರುಷರ ಪ್ರಮಾಣವು ಮಹಿಳೆಯರ ಪ್ರಮಾಣಕ್ಕಿಂತ ಅಧಿಕವಾಗಿದ್ದರೂ ಇಲ್ಲಿ ಮಹಿಳೆಯರು ಸ್ವಲ್ಪ ಮಟ್ಟಿಗಾದರೂ ಭೂ ಒಡತಿಯರಾಗಿದ್ದಾರೆ. ದೊಡ್ಡ ಭೂ ಹಿಡುವಳಿಗಳಿಗೆ ಸಂಬಂಧಿಸಿದಂತೆ ಭೂಮಿಯ ವಿಸ್ತೀರ್ಣದ ಪ್ರಮಾಣ ಹೆಚ್ಚಾದಂತೆ ಒಡೆತನದ ಸಂಖ್ಯೆಯ ಪ್ರಮಾಣ ಕಡಿಮೆಯಾಗುತ್ತದೆ. ೧೦೦ ರಿಂದ ೨೦೦ ಎಕರೆವರೆಗಿನ ಭೂಮಿಯ ಒಡೆತನವನ್ನು ಇಲ್ಲಿ ಒಬ್ಬರೇ ಹೊಂದಿರುವುದನ್ನು ಕಾಣಬಹುದು. ಗುಲಬರ್ಗಾದಂಥ ಮಳೆಯಾಶ್ರಿತ ಪ್ರದೇಶದಲ್ಲಿ ೧೦೦ ರಿಂದ ೨೦೦ ಎಕರೆವರೆಗಿನ ಭೂಮಿಯನ್ನು ಹೊಂದಿದ್ದರೂ ಆದಾಯದ ಪ್ರಮಾಣ ಕಡಿಮೆಯಿರುವುದನ್ನು ಗಮನಿಸಬೇಕು. ಅಧಿಕ ಭೂಮಿ ಹೊಂದಿರುವಂಥ ಕುಟುಂಬಗಳಲ್ಲಿ ಸರ್ಕಾರಕ್ಕೆ ತೆರಿಗೆ ಕಟ್ಟಬೇಕಾಗುವುದು ಎಂಬ ಭಯದಿಂದ ಮಹಿಳೆಯರಿಗೆ ಭೂ ಒಡೆತನ ಹಕ್ಕು ನೀಡುತ್ತಾರೆ. ಜಿಲ್ಲೆಯಲ್ಲಿ ರೈತಾಪಿ ಹಿಡುವಳಿಯ (ಅತಿಸಣ್ಣ, ಸಣ್ಣ ಮತ್ತು ಅರೆಮಧ್ಯಮ) ಭೂ ಒಡೆತನ ಹೊಂದಿದವರ ಸಂಖ್ಯೆಯೇ ಅಧಿಕವಾಗಿದೆ. ಇದಕ್ಕೆ ಮೂಲ ಕಾರಣ ಇಲ್ಲಿ ಜಮೀನ್ದಾರಿ ಪದ್ಧತಿಯು ಇನ್ನೂ ಅಸ್ತಿತ್ವದಲ್ಲಿರುವುದರಿಂದ ಬಡವರು ತಮ್ಮ ಭೂಮಿಯನ್ನು ಶ್ರೀಮಂತರಲ್ಲಿ ಒತ್ತೆಯಿಟ್ಟು ಹಣ ತಂದು, ಆ ಹಣವನ್ನು

ತೀರಿಸಲಾಗದಿದ್ದಾಗ ಶ್ರೀಮಂತರು ಆ ಭೂಮಿಯನ್ನು ಕಸಿದುಕೊಳ್ಳುವರು. ಹೀಗಾಗಿ ಕಡಿಮೆ ಸಂಖ್ಯೆಯ ಜನರು ಅತಿ ಹೆಚ್ಚು ಭೂಮಿಯನ್ನು ಹೊಂದಿರುವರು. ಅಲ್ಲದೆ ಮೊದಲು ಎಲ್ಲ ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿದ್ದವು. ಆಗ ಭೂಮಿಯ ಪ್ರಮಾಣವು ಅಧಿಕವಾಗಿತ್ತು, ಬರಬರುತ್ತ ಅವಿಭಕ್ತ ಕುಟುಂಬಗಳೆಲ್ಲ ಹೋಗಿ ವಿಭಕ್ತ ಕುಟುಂಬಗಳೇ ಆಗಿರುವುದರಿಂದ ಭೂಮಿಯು ಕುಟುಂಬದ ಸದಸ್ಯರಲ್ಲಿ ಹರಿದು ಹಂಚಿ ಹೋಗುತ್ತಿದೆ. ಆ ಮೂಲಕ ವ್ಯಕ್ತಿಯು ಕಡಿಮೆ ಪ್ರಮಾಣದ ಭೂಮಿ ಹೊಂದುವಂತಾಯಿತು. ಅಲ್ಲದೆ ವಿಭಕ್ತ ಕುಟುಂಬದಲ್ಲಿಯೇ ಸರ್ಕಾರದಿಂದ ಸಾಲ ಪಡೆಯಲು ಮತ್ತು ಪತಿ ಸರ್ಕಾರಿ ನೌಕರನಾಗಿರುವುದರಿಂದ ಕೂಡ ಭೂಮಿ ಮತ್ತೆ ಕುಟುಂಬದ ಸದಸ್ಯರಲ್ಲಿ ಹರಿದು ಹಂಚಲಾಗಿದೆ. ಇದರಿಂದ ರೈತಾಪಿ ಹಿಡುವಳಿಯ ಪ್ರಮಾಣವೆ ಅಧಿಕವಾಗಿದೆ. ಹಿಂದುಳಿದ ವರ್ಗದ ಮಹಿಳೆಯರು ರೈತಾಪಿ ಹಿಡುವಳಿಯ ಮಾಲೀಕರಾಗುವುದರ ಜೊತೆಗೆ ಜಮೀನ್ದಾರಿ ಹಿಡುವಳಿಯ ಮಾಲೀಕರು ಆಗಿರುವರು. ಆದರೆ ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರು ಅಧಿಕವಾಗಿ ರೈತಾಪಿ ಹಿಡುವಳಿಯ ಮಾಲೀಕರಾಗಿರುವರು ಹೊರತಾಗಿ ಜಮೀನ್ದಾರಿ ಹಿಡುವಳಿಯ ಮಾಲೀಕರಾಗಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿಲ್ಲ. ಪರಿಶಿಷ್ಟ ಪಂಗಡದವರು ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳಲ್ಲಿ ಮಾತ್ರ ಜಮೀನ್ದಾರಿ ಹಿಡುವಳಿಯ ಮಾಲೀಕರಾದರೂ ಅದು ಬೆರಳೆಣಿಕೆಯಲ್ಲಿ ಮಾತ್ರ ಎನ್ನುವುದು ಕೃಷಿ ಗಣತಿಯ ಅಂಕಿ-ಅಂಶಗಳ ಮೂಲಕ ತಿಳಿಯಬಹುದು. ಜಮೀನ್ದಾರಿ ಹಿಡುವಳಿಯ ಒಡೆತನ ಹೊಂದಿರುವ ಕುಟುಂಬಗಳು ಆರ್ಥಿಕವಾಗಿ ಚೆನ್ನಾಗಿದ್ದರೆ, ರೈತಾಪಿ ಹಿಡುವಳಿಯ ಒಡೆತನ ಹೊಂದಿರುವ ಮಹಿಳೆಯರು ಆರ್ಥಿಕವಾಗಿ ತುಂಬಾ ಕೆಳಮಟ್ಟದಲ್ಲಿದ್ದಾರೆ. ಹೀಗಾಗಿ ರೈತಾಪಿ ಹಿಡುವಳಿ ಹೊಂದಿರುವ ಬಹುತೇಕ ಕುಟುಂಬಗಳಲ್ಲಿ ಮಹಿಳೆಯರು ಅಧಿಕವಾಗಿ ಕೃಷಿ ಕೂಲಿ ಕಾರ್ಮಿಕರಾಗಿರುವುದನ್ನು ಜಿಲ್ಲೆಯಲ್ಲಿ ಕಾಣಬಹುದು.

**ಕೋಷ್ಟಕ -೭**

**ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ಗುಣಧರ್ಮ ಮತ್ತು ಸ್ವರೂಪ**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ನಿರಾವರಿ ಭೂಮಿಯ ಒಡೆತನ ಹೊಂದಿದವರು | ೩೧ | ೨೫ | ೨೦ | ೨೪ |
| ೦೨ | ಬಂಜರು ಭೂಮಿಯ ಒಡೆತನ ಹೊಂದಿದವರು | ೬೯ | ೭೫ | ೮೦ | ೭೬ |
| ೦೩ | ಸ್ವಂತ/ವೈಯಕ್ತಿಕ ಒಡೆತನ ಹೊಂದಿದವರು | ೩೮ | ೫೦ | ೪೨ | ೪೧.೫ |
| ೦೪ | ಜಂಟಿ ಒಡೆತನ ಹೊಂದಿದವರು | ೬೨ | ೫೦ | ೫೮ | ೫೮.೫ |

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಮಹಿಳೆಯರು ಹೊಂದಿರುವ ಐದು ತರಹದ ಭೂ ಹಿಡುವಳಿಗಳಲ್ಲಿ ತವರು ಮನೆಯ ಭೂಮಿಯ ಒಡೆತನ ಹೊಂದಿರಬಹುದು ಅಥವಾ ಪತಿಯ ಮನೆಯ ಭೂಮಿಯ ಒಡೆತನ ಹೊಂದಿರಬಹುದು. ಒಡೆತನ ಹೊಂದಿರುವ ಭೂಮಿಯಲ್ಲಿ ಎರಡು ರೀತಿಯ ಗುಣಧರ್ಮವನ್ನು ಕಾಣಬಹುದು. ಒಂದು ಫಲವತ್ತಾದ ಭೂಮಿ, ಇದನ್ನು ನೀರಾವರಿ ಭೂಮಿ ಎಂದು ಕರೆಯಲಾಗುತ್ತದೆ. ಹಾಗೆಯೇ ಬಂಜರು

ಭೂಮಿ, ಈ ತರಹದ ಭೂಮಿಯು ಒಣ ಭೂಮಿಯಾಗಿದ್ದು, ಈ ಭೂಮಿಯಿಂದ ನಿರೀಕ್ಷಿತ ಫಲ ಪಡೆಯಲು ಅಸಾಧ್ಯ. ಜಿಲ್ಲೆಯಲ್ಲಿ ಅಧಿಕವಾಗಿ ಬಂಜರು ಭೂಮಿಯೇ ಇರುವುದು ಕಂಡು ಬರುತ್ತದೆ. ನೀರಾವರಿ ಭೂಮಿಯಲ್ಲಿ ಗೋಧಿ, ಶೇಂಗಾ, ಭತ್ತ, ಕಬ್ಬು, ತರಕಾರಿಗಳನ್ನು ಬೆಳೆದರೆ, ಬಂಜರು ಭೂಮಿಯಲ್ಲಿ ನೀರನ್ನು ಕಡಿಮೆ ಪ್ರಮಾಣದಲ್ಲಿ ಕೇಳುವ, ಮಳೆಯಾಶ್ರಿತ ಬೆಳೆಗಳಾದ ಜೋಳ, ಸಜ್ಜೆ, ತೊಗರಿ, ಕಡಲೆ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯುತ್ತಾರೆ.

ನೀರಾವರಿ ಭೂಮಿಯ ಒಡೆತನ ಹೊಂದಿದವರಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರ ಪ್ರಮಾಣ ಶೇ.೩೧ರಷ್ಟಿದ್ದರೆ, ಪರಿಶಿಷ್ಟ ಪಂಗಡದ ಮಹಿಳೆಯರು ಶೇ.೨೫ರಷ್ಟಿದ್ದಾರೆ. ಶೇ.೨೦ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡು ಬರುತ್ತಾರೆ. ಜಿಲ್ಲೆಯ ಯಾದಗಿರಿ, ಜೇವರ್ಗಿ ಮತ್ತು ಶಹಾಪುರ ತಾಲೂಕುಗಳಲ್ಲಿ ಮಹಿಳೆಯರು ಅಧಿಕವಾಗಿ ನೀರಾವರಿ ಭೂಮಿಯನ್ನು ಹೊಂದಿರುವರು. ಇಲ್ಲಿ ಕಾಲುವೆ ನೀರನ್ನು ಪಡೆದು ನೀರಾವರಿ ಭೂಮಿಯನ್ನಾಗಿಸಿದ್ದಾರೆ. ಬೇಸಿಗೆಕಾಲದ ಅಂತಿಮ ಹಂತದಲ್ಲಿ ಕಾಲುವೆಗಳಲ್ಲಿಯೂ ನೀರು ಇರದಿರುವುದನ್ನು ಗಮನಿಸಬೇಕು. ಈ ತಾಲೂಕುಗಳಲ್ಲಿ ಕಾಲುವೆಯ ನೀರಿನ ಪ್ರಯೋಜನ ಪಡೆದರೆ ಉಳಿದ ತಾಲೂಕುಗಳಲ್ಲಿ ಕೃಷಿ ಸಾಲವನ್ನು ಪಡೆದು ಕೊಳವೆ ಬಾವಿ ಮತ್ತು ಬಾವಿಗಳನ್ನು ತೋಡಿಸುವುದರ ಮೂಲಕ ನೀರಾವರಿ ಭೂಮಿಯ ಒಡತಿಯರಾಗಿರುವರು. ಈ ನೀರಾವರಿ ಭೂಮಿಯ ಒಡೆತನವನ್ನು ಪರಿಶಿಷ್ಟ ಜಾತಿಯ ಮಹಿಳೆಯರು ಅಧಿಕವಾಗಿ ಹೊಂದಿದರೆ, ಹಿಂದುಳಿದ ವರ್ಗದ ಮಹಿಳೆಯರು ಕಡಿಮೆ ಪ್ರಮಾಣದಲ್ಲಿ ಹೊಂದಿರುವರು. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರು ಹಿಂದುಳಿದ ವರ್ಗದ ಮಹಿಳೆಯರಿಗಿಂತ ಕಡಿಮೆ ಪ್ರಮಾಣದಲ್ಲಿ ಭೂ ಒಡೆತನ ಹೊಂದಿದ್ದರೂ ನೀರಾವರಿ ಭೂಮಿಯ ಒಡೆತನ ಹೊಂದುವಲ್ಲಿ ಇವರ ಪ್ರಮಾಣ ಅಧಿಕವಾಗಿದೆ. ಹಿಂದುಳಿದ ವರ್ಗದ ಮಹಿಳೆಯರಿಗಿಂತ ಈ ವರ್ಗದ ಮಹಿಳೆಯರು ಅಧಿಕವಾಗಿ ಸರ್ಕಾರದ ಸಾಲದ ಪ್ರಯೋಜನವನ್ನು ಪಡೆದಿರುವುದರಿಂದ ಅವರು ಸ್ವಲ್ಪ ಮಟ್ಟಿಗಾದರೂ ನೀರಾವರಿ ಭೂಮಿಯ ಒಡತಿಯರಾಗಿರುವರು.

ಬಂಜರು ಭೂಮಿಯ ಒಡೆತನ ಹೊಂದಿರುವ ಮಹಿಳೆಯರನ್ನು ನೋಡಿದಾಗ, ಶೇ.೬೯ರಷ್ಟು ಪರಿಶಿಷ್ಟ ಜಾತಿಯ ಮಹಿಳೆಯರು, ಮತ್ತು ಶೇ.೭೫ರಷ್ಟು ಪರಿಶಿಷ್ಟ ಪಂಗಡದ ಮಹಿಳೆಯರು ಹಾಗೂ ಹಿಂದುಳಿದ ವರ್ಗದವರಲ್ಲಿ ಶೇ.೮೦ರಷ್ಟು ಮಹಿಳೆಯರು ಕಂಡುಬರುವರು. ಈ ಮೊದಲೇ ತಿಳಿಸಿರುವಂತೆ ಜಿಲ್ಲೆಯಲ್ಲಿ ಬಂಜರು ಭೂಮಿ ಅಧಿಕವಾಗಿದ್ದು ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಬಹುಸಂಖ್ಯಾತ ಮಹಿಳೆಯರು ಬಂಜರು ಭೂಮಿಯ ಮಾಲೀಕರಾಗಿದ್ದಾರೆ.

ಈ ಕೋಷ್ಟಕವನ್ನು ಗಮನಿಸಿದಾಗ ಒಟ್ಟಾರೆಯಾಗಿ ನೀರಾವರಿ ಭೂಮಿಯ ಒಡೆತನ ಹೊಂದಿದವರ ಒಟ್ಟು ಸರಾಸರಿ ಪ್ರಮಾಣ ಶೇ.೨೪ರಷ್ಟು ಇದೆ. ಬಂಜರು ಭೂಮಿಯ ಒಡೆತನ ಹೊಂದಿರುವ ಮಹಿಳೆಯರ ಒಟ್ಟು ಸರಾಸರಿ ಪ್ರಮಾಣ ಶೇ.೭೬ರಷ್ಟು ಇದೆ. ನೀರಾವರಿ ಭೂಮಿಯ ಒಡೆತನದ ಪ್ರಮಾಣಕ್ಕಿಂತ ಬಂಜರು ಭೂಮಿಯ ಒಡೆತನದ ಪ್ರಮಾಣವು ಅಧಿಕವಾಗಿದೆ. ಈ ಮೊದಲು ಹೇಳಿದಂತೆ ಜಿಲ್ಲೆಯಲ್ಲಿ ಮಳೆಯಾಶ್ರಿತವಾಗಿರುವ ಬಂಜರು ಭೂಮಿಯ ಪ್ರಮಾಣವೇ ಅಧಿಕವಾಗಿದೆ. ಮಹಿಳೆಯರು ಪುರುಷರಿಗಿಂತ ಕಡಿಮೆ ಪ್ರಮಾಣದಲ್ಲಿ ನೀರಾವರಿ ಭೂಮಿಯ ಒಡತಿಯರಾಗಿದ್ದಾರೆ. 'ಮಹಿಳೆ' ಒಡೆತನ ಹೊಂದುವ ಭೂಮಿ ಎನ್ನುವ ಕಾರಣಕ್ಕಾಗಿ ಮತ್ತು ಮಹಿಳೆಯು ತವರು ಮನೆಯಿಂದ ವರದಕ್ಷಿಣೆಯ ರೂಪದಲ್ಲಿ ಪಡೆದಂಥ ಭೂಮಿಯು ಬಂಜರು ಭೂಮಿ ಇರುವುದನ್ನೇ ಜಿಲ್ಲೆಯಾದ್ಯಂತ

ಕಂಡು ಬರುತ್ತದೆ. 'ಭೂಮಿಯು ಬೇರೆಯವರಿಗೆ ಸೇರುತ್ತದೆ. ಹಾಗಾಗಿ ನೀರಾವರಿ ಭೂಮಿಗಿಂತ ಬಂಜರು ಭೂಮಿಯನ್ನು ಕೊಟ್ಟರಾಯಿತು' ಎಂಬ ಮನೋಭಾವನೆ ಬಹುತೇಕ ಪುರುಷರಲ್ಲಿರುವುದನ್ನು ಕಾಣಬಹುದು. ಹಾಗೆಯೇ ಸರ್ಕಾರದಿಂದ ಕೃಷಿ ಸಾಲ ಸೌಲಭ್ಯವನ್ನು ರಿಯಾಯಿತಿಯಲ್ಲಿ ಪಡೆಯುವ ಸಲುವಾಗಿ ಬಂಜರು ಭೂಮಿಯನ್ನು ಮಹಿಳೆಯರ ಹೆಸರಿನಲ್ಲಿ ಮಾಡಿರುವುದನ್ನು ಕಾಣಬಹುದು. ಜಿಲ್ಲೆಯಲ್ಲಿ ಮಹಿಳೆಯರು ಅತಿ ಸಣ್ಣ ಭೂ ಹಿಡುವಳಿಯಿಂದ ದೊಡ್ಡ ಭೂ ಹಿಡುವಳಿಯ ಒಡತಿಯರಾದರೂ ಬಹುತೇಕ ಮಹಿಳೆಯರು ಬಂಜರು ಭೂಮಿಯ ಮಾಲೀಕರಾಗಿರುವರು. ಗುಲಬರ್ಗಾ ಜಿಲ್ಲೆಯಲ್ಲಿ ಮಹಿಳೆಯರು ಒಡೆತನ ಹೊಂದಿರುವುದನ್ನು ಗಮನಿಸಿದಾಗ ಕೆಲವರು ಸ್ವಂತ ಒಡೆತನವನ್ನು ಹೊಂದಿದ್ದರೆ, ಕೆಲವು ಮಹಿಳೆಯರು ಜಂಟಿ ಒಡೆತನವನ್ನು ಹೊಂದಿರುವುದನ್ನು ಗಮನಿಸಲಾಗಿದೆ.

ಮಹಿಳೆಯರು ಸ್ವಂತ ಒಡೆತನ ಅಥವಾ ಜಂಟಿ ಭೂ ಒಡೆತನ ಹೊಂದುವುದಕ್ಕೆ ಇರುವ ಕಾರಣಗಳನ್ನು ನೋಡಿದಾಗ, ಸ್ವಂತ ಭೂ ಒಡೆತನ ಹೊಂದಿರುವ ಮಹಿಳೆಯರ ಪ್ರಮಾಣದಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರು ಶೇ.೩೮ ರಷ್ಟಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ.೫೦ರಷ್ಟು ಕಂಡು ಬರುತ್ತದೆ. ಹಿಂದುಳಿದ ವರ್ಗದಲ್ಲಿ ಶೇ.೪೨ರಷ್ಟು ಮಹಿಳೆಯರು ಕಂಡುಬರುವರು.

ಪರಿಶಿಷ್ಟ ಜಾತಿಯ ಮಹಿಳೆಯರಲ್ಲಿ ಜಂಟಿ ಒಡೆತನ ಹೊಂದಿದವರ ಪ್ರಮಾಣ ಶೇ.೬೨ ರಷ್ಟು ಕಂಡು ಬರುತ್ತದೆ. ಪರಿಶಿಷ್ಟ ಪಂಗಡದಲ್ಲಿ ಶೇ.೫೦ರಷ್ಟಿದ್ದರೆ ಶೇ.೫೮ರಷ್ಟು ಹಿಂದುಳಿದ ವರ್ಗದ ಮಹಿಳೆಯರು ಜಂಟಿ ಒಡೆತನವನ್ನು ಹೊಂದಿದ್ದಾರೆ.

ಒಟ್ಟಾರೆಯಾಗಿ ಸ್ವಂತ ಭೂ ಒಡೆತನ ಹೊಂದಿದವರು ಸರಾಸರಿ ಶೇ.೪೧.೫ ಪ್ರಮಾಣದಲ್ಲಿದ್ದರೆ, ಸರಾಸರಿ ಶೇ.೫೮.೫ ರಷ್ಟು ಪ್ರಮಾಣದಲ್ಲಿ ಮಹಿಳೆಯರು ಅಧಿಕವಾಗಿ ಜಂಟಿ ಭೂ ಒಡೆತನವನ್ನು ಹೊಂದಿರುವುದನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ.

ಸ್ವಂತ ಒಡೆತನ ಓರ್ವ ಮಹಿಳೆಯ ಹೆಸರಿನಲ್ಲಿದ್ದರೆ, ಜಂಟಿ ಒಡೆತನ ಇಬ್ಬರ ಹೆಸರಿನಲ್ಲಿರುತ್ತದೆ. ಜಿಲ್ಲೆಯ ಐದು ರೀತಿಯ ಭೂ ಹಿಡುವಳಿಗಳಲ್ಲಿ ಯಾವುದಾದರೂ ಹಿಡುವಳಿಯ ಒಡೆತನವನ್ನು ಸ್ವಂತ ಒಡೆತನ ಅಥವಾ ಜಂಟಿ ಒಡೆತನ ಪಡೆದಿರಬಹುದು. ಹಾಗೆಯೇ ಆಕೆ ಪತಿಯ ಮನೆಯ ಮೂಲಕ ಅಥವಾ ತಂದೆಯ ಕುಟುಂಬದಿಂದ ಆಸ್ತಿಯನ್ನು ಪಡೆದಿರಬಹುದು. ಜಂಟಿ ಒಡೆತನದಲ್ಲಿ ಪತಿಯ ಮನೆಯ ಮೂಲಕ ಭೂಮಿಯನ್ನು ಪಡೆದಿದ್ದರೆ ತನ್ನ ಮತ್ತು ಪತಿಯ ಹೆಸರಿನಲ್ಲಿ ಅಥವಾ ಮಾವ, ಅತ್ತೆ ಹಾಗೂ ಮಕ್ಕಳ ಹೆಸರಿನಲ್ಲಿ ಜಂಟಿಯಾಗಿರುತ್ತದೆ. ತವರು ಮನೆಯ ಮೂಲಕ ಆಸ್ತಿ ಪಡೆದಿದ್ದರೆ ಅದು ತನ್ನ ಹೆಸರಿನ ಜೊತೆಗೆ ತಾಯಿ, ತಂದೆ, ಅಕ್ಕ ಅಥವಾ ತಂಗಿಯ ಹೆಸರಿನಲ್ಲಿರುತ್ತದೆ. ಒಂದು ವೇಳೆ ವರದಕ್ಷಿಣೆಯಿಂದ ಬಂದ ಭೂಮಿಯು ಪತಿಯ ಕುಟುಂಬದವರ ಜೊತೆ ಜಂಟಿ ಒಡೆತನವನ್ನು ಹೊಂದಿದ್ದರೆ ಪತಿಯ ಕುಟುಂಬದ ಯಾರಾದರೊಬ್ಬ ಸದಸ್ಯರ ಜೊತೆಯಲ್ಲಿ ಜಂಟಿಯಾಗಿರುವುದು.

ಗುಲಬರ್ಗಾ ಜಿಲ್ಲೆಯಲ್ಲಿ ಬಹುತೇಕ ಮಹಿಳೆಯರು ಜಂಟಿ ಭೂ ಒಡೆತನ ಹೊಂದಿರುವುದನ್ನು ಕ್ಷೇತ್ರಕಾರ್ಯದ ಮೂಲಕ ತಿಳಿದುಕೊಳ್ಳಲಾಗಿದೆ. ಸ್ವಂತ ಭೂ ಒಡೆತನ ನೀಡಿದಾಗ ಮಹಿಳೆಯೋರ್ವಳು ಎಲ್ಲಾ ರೀತಿಯಲ್ಲೂ ಸ್ವತಂತ್ರಳಾಗುತ್ತಾಳೆ. ಹೀಗಾಗಿ ಪುರುಷರಿಗೆ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ತಮ್ಮ ಪ್ರತಿಷ್ಠೆ ಕಡಿಮೆಯಾಗುತ್ತದೆ ಎಂಬ ನಂಬಿಕೆಗಳು ಇರುವುದನ್ನು ಜಿಲ್ಲೆಯಾದ್ಯಂತ ಅಲ್ಲದೇ ರಾಜ್ಯದಾದ್ಯಂತ ಕಂಡುಬರುತ್ತದೆ.

ಸ್ವಂತ ಒಡೆತನ ಹಾಗೂ ಜಂಟಿ ಒಡೆತನದ ಭೂಮಿಯನ್ನು ಹೊಂದಿರುವ ಬಹುತೇಕ ಮಹಿಳೆಯರು ಕೇವಲ ಹೆಸರಿಗೆ ಮಾತ್ರ ಭೂ ಒಡೆತನ ಇದೆಯೇ ಹೊರತು ಅದರ ಮೇಲೆ ಸಂಪೂರ್ಣವಾದ ನಿಯಂತ್ರಣ, ನಿರ್ವಹಣೆ ಇಲ್ಲವೆಂದು ಹೇಳಬೇಕು. ಬಂಜರು ಭೂಮಿಯ ಒಡೆತನವನ್ನು ಮತ್ತು ರೈತಾಪಿ ಹಿಡುವಳಿಯ ಭೂಮಿಯನ್ನೇ ಮಹಿಳೆಯರು ಅಧಿಕವಾಗಿ ಹೊಂದಿದ್ದರೂ ಕೂಡ ಸ್ವಂತ ಒಡೆತನವನ್ನು ಹೊಂದದೆ ಜಂಟಿ ಒಡೆತನವನ್ನು ಹೊಂದಿದ್ದಾರೆ. ಅಲ್ಲದೆ ಮಹಿಳೆಗೆ ಸ್ವಂತ ಒಡೆತನ ನೀಡಿದರೆ ಭೂಮಿಯ ಎಲ್ಲಾ ನಿರ್ಧಾರವನ್ನು ಮಹಿಳೆಯೇ ತೆಗೆದುಕೊಳ್ಳುವಳು. ಅವಳು ಸ್ವತಂತ್ರಳಾಗುವಳು ಎಂದು ಜಂಟಿ ಒಡೆತನವನ್ನು ನೀಡುವ ಮೂಲಕ ಅವಳನ್ನು ಅಧೀನ ನೆಲೆಯಲ್ಲಿ ಇರಿಸಲಾಗಿದೆ. ಜಿಲ್ಲೆಯ ಕೆಲವೊಂದು ಕುಟುಂಬಗಳಲ್ಲಿ ಪುರುಷನಿಲ್ಲದ ಸಂದರ್ಭದಲ್ಲಿ ತಾಯಿ ಮತ್ತು ಮಕ್ಕಳ ಹೆಸರಿನಲ್ಲಿ ಭೂಮಿಯನ್ನು ಜಂಟಿಯಾಗಿ ಮಾಡುವುದೂ ಇದೆ. ಮುಂದುವರೆದು ಆ ಮಕ್ಕಳು ಅಪ್ರಾಪ್ತ ವಯಸ್ಸಿನಿಂದ ಪ್ರಾಪ್ತ ವಯಸ್ಸಿಗೆ ಬಂದಾಗ ಮಕ್ಕಳ ಹೆಸರಿಗೆ ಭೂಮಿಯನ್ನು ವರ್ಗಾವಣೆ ಮಾಡುವ ವ್ಯವಸ್ಥೆ ಇದೆ. ಒಟ್ಟಾರೆಯಾಗಿ ಮಹಿಳೆಯರಿಗೆ ತವರಿನಿಂದಾಗಲಿ, ಪತಿಯ ಮನೆಯಿಂದಾಗಲಿ ಭೂ ಒಡೆತನ ದೊರೆತರೂ ಅದು ಅಲ್ಪ ಪ್ರಮಾಣದಲ್ಲಿದೆ, ಹಾಗೆಯೇ ಬಂಜರು ಭೂಮಿಯನ್ನೇ ಅಧಿಕವಾಗಿ ಮಹಿಳೆಯರ ಹೆಸರಿನಲ್ಲಿ ಮಾಡುವುದಲ್ಲದೆ ಜಂಟಿ ಒಡೆತನವನ್ನು ನೀಡುವ ಮೂಲಕ ಮಹಿಳೆಯರಿಗೆ ಭೂ ಒಡೆತನ ನೀಡಿದ್ದು ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವ ಸ್ಥಿತಿಯಲ್ಲಿರುತ್ತದೆ.

**೮.೪. ನಿಯಂತ್ರಣ ಮತ್ತು ನಿರ್ವಹಣೆ**

ಮಹಿಳೆಯರು ಒಡೆತನ ಹೊಂದಿರುವ ಭೂಮಿಯು ಹೆಸರಿಗೆ ಮಾತ್ರ ಇದೆಯೇ ಅಥವಾ ಅದರ ಮೇಲೆ ಅವರು ಸಂಪೂರ್ಣ ನಿಯಂತ್ರಣ ಮತ್ತು ನಿರ್ವಹಣೆಯನ್ನು ಹೊಂದಿರುವರೆ? ನಿಯಂತ್ರಣ ಹೊಂದದೆ ಇರಲು ಕಾರಣಗಳನ್ನು ಮತ್ತು ಮಾರುಕಟ್ಟೆಯ ಜೊತೆಗೆ ಎಷ್ಟರಮಟ್ಟಿಗೆ ಸಂಪರ್ಕ ಹೊಂದಿರುವರು ಎನ್ನುವ ಬಗೆಯನ್ನು ಈ ಕೆಳಗಿನ ಕೋಷ್ಟಕಗಳ ಮೂಲಕ ವಿವರಿಸಲಾಗಿದೆ.

**ಕೋಷ್ಟಕ -೮**

**ಮಹಿಳೆಯರು ಭೂ ಒಡೆತನ ಹೊಂದಿದ ಮೇಲೆ ಕುಟುಂಬದ ಸ್ಥಾನಮಾನದಲ್ಲಾದ ಬದಲಾವಣೆ**

(ಶೇಕಡವಾರು)

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಭೂ ಒಡೆತನ ಹೊಂದಿದ ಮೇಲೆ ಕುಟುಂಬದಲ್ಲಿ ಯಜಮಾನತ್ವ/ಮುಂದಾಳತ್ವ ವಹಿಸುತ್ತಿರುವವರು | ೪ | ೫ | ೨ | ೩ |
| ೦೨. | ಭೂ ಒಡೆತನ ಹೊಂದಿದರು ಕುಟುಂಬದ ಸ್ಥಾನಮಾನದಲ್ಲಿ ಯಾವುದೇ ರೀತಿಯಲ್ಲಿ ಬದಲಾವಣೆ ಆಗದೆ ಮೊದಲಿನ ಹಾಗೆಯೇ ಇದೆ ಎಂದವರು | ೯೬ | ೯೫ | ೯೮ | ೯೭ |

ಮಹಿಳೆಯರು ಭೂ ಒಡೆತನ ಹೊಂದಿದ ಮೇಲೆ ಕುಟುಂಬದ ಸ್ಥಾನಮಾನದಲ್ಲಿ ಆದ ಬದಲಾವಣೆ ಬಗ್ಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅವರ ಅಭಿಪ್ರಾಯವನ್ನು ಕೇಳಿದಾಗ 'ಭೂ ಒಡೆತನ ಹೊಂದಿದ ಮೇಲೆ ನಮ್ಮ ಕುಟುಂಬದಲ್ಲಿ ನಾವು ಯಜಮಾನತ್ವ/ ಮುಂದಾಳತ್ವ ವಹಿಸುತ್ತಿದ್ದೇವೆ' ಎಂದು ಹೇಳಿದವರು ಪರಿಶಿಷ್ಟ ಜಾತಿಯಲ್ಲಿ ಶೇ.೪ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ.೫ರಷ್ಟು ಮಹಿಳೆಯರು ಮತ್ತು ಶೇ.೨ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡು ಬರುತ್ತಾರೆ.

'ಭೂ ಒಡೆತನ ಹೊಂದಿದ ಮೇಲೂ ಕುಟುಂಬದಲ್ಲಿ ತಮ್ಮ ಸ್ಥಾನಮಾನದಲ್ಲಿ ಯಾವುದೇ ರೀತಿಯ ಬದಲಾವಣೆಗಳು ಆಗಿಲ್ಲ' ಎಂದು ಹೇಳಿದವರ ಪ್ರಮಾಣವನ್ನು ಗಮನಿಸಿದಾಗ ಪರಿಶಿಷ್ಟ ಜಾತಿಯಲ್ಲಿ ಶೇ.೯೬ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ.೯೫ರಷ್ಟು ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೯೮ರಷ್ಟು ಮಹಿಳೆಯರು ಕಂಡುಬರುತ್ತಾರೆ. ಇವರೆಲ್ಲರೂ ಕುಟುಂಬದಲ್ಲಿ ಬದಲಾವಣೆಯನ್ನು ಕಾಣದವರು.

ಒಟ್ಟಾರೆ ಗುಲಬರ್ಗಾ ಜಿಲ್ಲೆಯಲ್ಲಿ ಭೂ ಒಡೆತನ ಹೊಂದಿದ್ದರೂ ತಮ್ಮ ಕುಟುಂಬದಲ್ಲಿ ಸ್ಥಾನಮಾನದಲ್ಲಿ ಯಾವುದೇ ರೀತಿಯ ಬದಲಾವಣೆಯನ್ನು ಕಾಣದವರೇ ಅಧಿಕ ಪ್ರಮಾಣದಲ್ಲಿ ಕಂಡು ಬರುತ್ತಾರೆ. ಅವರ ಸರಾಸರಿ ಪ್ರಮಾಣ ಶೇ.೯೭ರಷ್ಟು. ಭೂ ಒಡೆತನ ಹೊಂದಿ ಆರ್ಥಿಕ ಸ್ವಾವಲಂಬಿಗಳಾಗುವುದರ ಜೊತೆಗೆ ಕುಟುಂಬದ ಯಜಮಾನತ್ವ ಹೊಂದಿದವರು ವಿಧವೆ ಆದಂಥ ಮಹಿಳೆಯರು, ಪತಿಯಿಂದ ವಿಚ್ಛೇದನೆ ಪಡೆದಂಥ ಮಹಿಳೆಯರು ಮತ್ತು ಕೆಲವರು ಪತಿ ಬೇರೆ ಊರಿನಲ್ಲಿ ಇರುವಂಥ ಸಂದರ್ಭದಲ್ಲಿ ಮಾತ್ರ ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಾಗಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಮೇಲಿನ ಎಲ್ಲಾ ಅಂಕಿ-ಅಂಶಗಳನ್ನು ಗಮನಿಸಿದಾಗ ಜಿಲ್ಲೆಯಲ್ಲಿನ ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಮಹಿಳೆಯರಿಗೆ ಹೆಸರಿಗೆ ಮಾತ್ರ ಭೂ ಒಡೆತನ ನೀಡಿರುವುದನ್ನು ಕಾಣಬಹುದು. ಜೊತೆಗೆ ಭೂ ಒಡೆತನ ಹೊಂದಿದ್ದರೂ ಭೂಮಿಯ ನಿರ್ವಹಣೆ ಮತ್ತು ನಿಯಂತ್ರಣ ಮಹಿಳೆಯರ ಕೈಗೆ ದಕ್ಕದಂತೆ ಮಾಡಲು ಪುರುಷರು ನಿರ್ಧರಿಸುತ್ತಲೇ ಬಂದಿದ್ದಾರೆ. ಕೆಲವು ಕೃಷಿ ಕುಟುಂಬಗಳಲ್ಲಿ ಪುರುಷನಿದ್ದಾಗಲೂ ಕುಟುಂಬದ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರ ವಹಿಸಿದರೆ ಅದನ್ನು ನೆರೆ ಹೊರೆಯವರು ಮತ್ತು ಕುಟುಂಬದ ಇನ್ನಿತರ ಸದಸ್ಯರೇ ಸಹಿಸುವುದಿಲ್ಲ. ಅಂತಹ ಪುರುಷನನ್ನು 'ಹೆಂಡತಿಯ ಗುಲಾಮ' ಎಂದು ಹಾಗೂ 'ಹೆಂಡತಿಯ ಸೆರಗಿನ ಹಿಂದೆ ಅಡ್ಡಾಡುವನೆಂದು' ಕರೆಯುವರು. ಅಂದರೆ ಅವರ ಈ ಮನೋಭಾವದ ಹಿಂದೆ ಮಹಿಳೆಗೆ ಕಲ್ಪಿಸುವ ಸಮಾನತೆಯನ್ನು ಹತ್ತಿಕ್ಕುವ ಹುನ್ನಾರ ಅಡಗಿರುತ್ತದೆ. ಹೀಗೆ ಕುಟುಂಬಗಳಲ್ಲಿ ಮಹಿಳೆ ಯಾವಾಗಲೂ ಪುರುಷನಿಗೆ ಅಧೀನವಾಗಿಯೇ ಇರಬೇಕೆಂಬ ನಿರೀಕ್ಷೆಗಳಿರುತ್ತವೆ. ಆ ಕಾರಣಕ್ಕಾಗಿಯೇ ಮಹಿಳೆಯನ್ನು ಪುರುಷನಂತೆ ಸರಿಸಮಾನವಾಗಿ ಬದುಕುವುದನ್ನು ಅವರು ಸಹಿಸುವುದಿಲ್ಲ. ಮಹಿಳೆ ಒಂದು ವೇಳೆ ಕುಟುಂಬದ ಜವಾಬ್ದಾರಿ ಹೊತ್ತಿದ್ದರೆ ಅವಳನ್ನು 'ಗಂಡು ಬಿರಿ' ಎಂದೋ, 'ಗಯ್ಯಾಳಿ' ಎಂದೋ ಕರೆಯುವರು. ಹೀಗೆ ಕೃಷಿಯ ಕೌಟುಂಬಿಕ ಆವರಣದಲ್ಲಿ ಪುರುಷನಿಗೆ ಪ್ರಾಶಸ್ತ್ಯವಿದ್ದಷ್ಟು ಮಹಿಳೆಗೆ ಪ್ರಾಶಸ್ತ್ಯವಿಲ್ಲ. ಇದರಿಂದ ಇಂದಿಗೂ ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಮಹಿಳೆಯರನ್ನು ಕಡೆಗಣಿಸುತ್ತದೆ ಎಂಬುದನ್ನು ತಿಳಿಯಬಹುದಾಗಿದೆ.

ಗುಲಬರ್ಗಾ ಜಿಲ್ಲೆಯ ಗ್ರಾಮೀಣ ಪ್ರದೇಶದ ಮಹಿಳೆಯರು ಭೂ ಒಡೆತನ ಹೊಂದಿದರೂ ಅದರ ಆದಾಯ ಯಾರ ಕೈ ಸೇರುತ್ತದೆ ಎನ್ನುವುದನ್ನು ಕೆಳಗಿನ ಕೋಷ್ಟಕದಲ್ಲಿ ವಿಶ್ಲೇಷಿಸಲಾಗಿದೆ.

ಕೋಷ್ಟಕ -೯

**ಭೂ ವರಮಾನದ ಮೇಲೆ ಮಹಿಳೆಯರ ಹಕ್ಕುದಾರಿಕೆ**

(ಶೇಕಡವಾರು)

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಭೂಮಿಯ ಆದಾಯ ತಮಗೆ ಸೇರುತ್ತದೆ | ೩ | ೫ | ೩ | ೩ |
| ೦೨ | ಭೂಮಿಯ ಒಡೆತನ ಹೆಸರಿಗೆ ಮಾತ್ರ ಇರುವುದರಿಂದ ಅವರ ಆದಾಯ ತಮ್ಮ ಕೈ ಸೇರುವುದಿಲ್ಲ | ೯೭ | ೯೫ | ೯೭ | ೯೭ |

ಮಹಿಳೆಯರು ಭೂ ಒಡೆತನ ಹೊಂದಿದ್ದರೂ ಅದರ ವರಮಾನದ ಮೇಲೆ ಎಷ್ಟರಮಟ್ಟಿಗೆ ಹಕ್ಕುಳ್ಳವರು ಎಂಬುದನ್ನು ಈ ಕೋಷ್ಟಕದ ಮೂಲಕ ತಿಳಿದುಕೊಳ್ಳಲಾಗಿದೆ. 'ತಮ್ಮ ಒಡೆತನದ ಭೂಮಿಯ ಆದಾಯ ತಮಗೆ ಸೇರುತ್ತದೆ' ಎಂದು ಹೇಳಿದ ಮಹಿಳೆಯರ ಪ್ರಮಾಣವನ್ನು ಗಮನಿಸಿದಾಗ, ಪರಿಶಿಷ್ಟ ಜಾತಿಯ ಮಹಿಳೆಯರು ಹಾಗೂ ಹಿಂದುಳಿದ ವರ್ಗದ ಮಹಿಳೆಯರು ಶೇ.೩ ರಷ್ಟಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ.೫ ರಷ್ಟು ಮಹಿಳೆಯರು ಆದಾಯ ತಮ್ಮ ಕೈ ಸೇರುತ್ತದೆ ಎಂದಿರುವರು.

'ಭೂಮಿಯ ಒಡೆತನ ಹೆಸರಿಗೆ ಮಾತ್ರ ಇದ್ದು ಅದರಿಂದ ಬಂದ ಆದಾಯ ತಮ್ಮ ಕೈ ಸೇರುತ್ತಿಲ್ಲ' ಎಂದು ಹೇಳಿದವರಲ್ಲಿ ಹಿಂದುಳಿದ ವರ್ಗದ ಮಹಿಳೆಯರು ಹಾಗೂ ಪರಿಶಿಷ್ಟ ಜಾತಿಯ ಮಹಿಳೆಯರು ಶೇ.೯೭ರಷ್ಟು ಇದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ.೯೫ ರಷ್ಟು ಮಹಿಳೆಯರು ಕಂಡುಬರುತ್ತಾರೆ.

ಒಟ್ಟಾರೆ ಭೂಮಿಯ ಒಡೆತನದೊಂದಿಗೆ ಅದರ ಆದಾಯವನ್ನು ಪಡೆಯುತ್ತಿರುವ ಗುಲಬರ್ಗಾ ಜಿಲ್ಲೆಯ ಮಹಿಳೆಯರ ಸರಾಸರಿ ಪ್ರಮಾಣ ಶೇ.೩ರಷ್ಟಿದೆ. ಹೆಸರಿಗೆ ಮಾತ್ರ ಭೂಮಿ ಇದ್ದು ಆದಾಯವೆಲ್ಲಾ ಪುರುಷನ ಕೈ ಸೇರುತ್ತದೆ ಎಂದವರು ಶೇ.೯೭ ರಷ್ಟು ಮಹಿಳೆಯರು.

ಗುಲಬರ್ಗಾ ಜಿಲ್ಲೆಯ ಕೆಲವು ಮಹಿಳೆಯರು ಭೂ ಒಡೆತನ ಹೊಂದುವುದರ ಜೊತೆಗೆ, ಭೂಮಿಯ ನಿರ್ವಹಣೆ, ನಿಯಂತ್ರಣ ಮತ್ತು ಆದಾಯಗಳೆಲ್ಲವನ್ನು ಅನುಭವಿಸುತ್ತಾರೆ. ಇಂತಹ ಕುಟುಂಬಗಳಲ್ಲಿ ಗಂಡು ಮಕ್ಕಳಿರುವುದಿಲ್ಲ, ಮಹಿಳೆ ವಿಧವೆಯಾದಂಥ ಸಂದರ್ಭದಲ್ಲಿ, ಪತಿಯನ್ನು ಬಿಟ್ಟಂಥ ಸಂದರ್ಭದಲ್ಲಿ, ಮಕ್ಕಳು ಅಪ್ರಾಪ್ತ ವಯಸ್ಕರಾಗಿದ್ದಾಗ ಮಾತ್ರ. ಕೆಲವು ಸಂದರ್ಭಗಳಲ್ಲಿ ಇಂತಹ ಕುಟುಂಬಗಳಲ್ಲೂ ಪುರುಷ ಸಂಬಂಧಿಕರು ಸಹಾಯಕ್ಕೆ ಇರುವುದನ್ನು ಕಾಣಬಹುದು. ಒಟ್ಟು ಗುಲಬರ್ಗಾ ಜಿಲ್ಲೆಯಲ್ಲಿ ಅಧಿಕ ಪ್ರಮಾಣದಲ್ಲಿ ಭೂಮಿಯ ಒಡೆತನದ ನಿಯಂತ್ರಣ, ನಿರ್ವಹಣೆಗಳೆಲ್ಲವೂ ಪುರುಷರದ್ದೆ ಆಗಿದೆ. ಮಹಿಳೆಗೆ ನಿಯಂತ್ರಣ ಮತ್ತು ನಿರ್ವಹಣೆಯ ಅಧಿಕಾರ ಕೊಟ್ಟರೆ ಪುರುಷನು ಅವಳ ಅವಲಂಬಿತನಾಗಬೇಕಾಗುತ್ತದೆ. ಅವಳಿಗೆ ಅಧಿಕಾರ ಕೊಟ್ಟರೆ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ತನ್ನ ಘನತೆಗೆ ಧಕ್ಕೆ ಬರುವುದೆಂದು ಮಹಿಳೆಗೆ ಸಮಾಜದ ವ್ಯವಸ್ಥೆಯು ಭೂ ಒಡೆತನ ಹೊಂದುವಂತೆ ಮಾಡಿದೆ ಆದರೆ ಅದರ ಮೇಲೆ ನಿಯಂತ್ರಣ ಮತ್ತು ನಿರ್ವಹಣೆ ಹೊಂದುವಂತೆ ಮಾಡಿಲ್ಲ.

ಗ್ರಾಮೀಣ ಪ್ರದೇಶದ ಮಹಿಳೆಯರು ಭೂ ಒಡೆತನ ಹೊಂದಿದ ಮೇಲೂ ಮಾರುಕಟ್ಟೆಯ ಜೊತೆಗೆ ಸಂಪರ್ಕವಿರದೆ ಇರಲು ಕಾರಣಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿಶ್ಲೇಷಿಸಲಾಗಿದೆ.

## ಕೋಷ್ಟಕ -೧೦
## ಮಾರುಕಟ್ಟೆಯ ಜೊತೆಗೆ ಮಹಿಳೆಯರಿಗಿರುವ ಸಂಪರ್ಕ

(ಶೇಕಡವಾರು)

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದಿರುವ ಮಹಿಳೆಯರು | ೧೧ | ೧೫ | ೭ | ೯ |
| ೦೨ | ಮಹಿಳೆಯರು ಮನೆಯಿಂದ ಹೊರಗೆ ಹೋಗ ಬಾರದೆನ್ನುವ ಕಾರಣಕ್ಕೆ ಮಾರುಕಟ್ಟೆಯ ಜೊತೆ ಸಂಪರ್ಕ ಹೊಂದದೆ ಇರುವುದು. | ೬ | ೧೦ | ೧೧ | ೯.೫ |
| ೦೩ | ವ್ಯವಹಾರ ಪುರುಷರ ಸ್ವತ್ತು ಎಂಬ ನಂಬಿಕೆಯಿಂದ ಮಹಿಳೆಯರು ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದದೆ ಇರುವುದು | ೬೩ | ೫೦ | ೬೫ | ೬೨.೫ |
| ೦೪ | ತಮಗೆ ವ್ಯವಹಾರ ಜ್ಞಾನ ಇಲ್ಲವೆಂದು ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದದೆ ಇರುವುದು | ೨೦ | ೨೫ | ೧೭ | ೧೯ |

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಹಿಳೆಯರು ಕೃಷಿ ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದಿರುವ ಬಗೆಯನ್ನು ಗಮನಿಸಿದಾಗ, ಪರಿಶಿಷ್ಟ ಜಾತಿಯಲ್ಲಿ ಶೇ.೧೧ರಷ್ಟು ಮಹಿಳೆಯರು, ಶೇ.೧೫ರಷ್ಟು ಪರಿಶಿಷ್ಟ ಪಂಗಡದ ಮಹಿಳೆಯರು ಮತ್ತು ಶೇ.೭ರಷ್ಟು ಹಿಂದುಳಿದ ವರ್ಗದ ಮಹಿಳೆಯರು ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದಿದರೂ ಸಂಬಂಧಿಕರ ಮಧ್ಯಸ್ಥಿಕೆಯ ಮುಖಾಂತರ ಸಂಪರ್ಕ ಹೊಂದಿರುವುದು ಕಂಡುಬರುವುದು. ಪುರುಷರು ಇಲ್ಲದ ಕುಟುಂಬದ ಮಹಿಳೆಯರು, ದೂರದ ಊರಲ್ಲಿ ಪತಿ ಕೆಲಸಕ್ಕೆಂದು ಹೋದಂಥ ಸಂದರ್ಭದಲ್ಲಿ ವ್ಯವಹಾರಗಳನ್ನು ಮಹಿಳೆಯೇ ನಿಭಾಯಿಸಬೇಕಾಗುತ್ತದೆ. ಆಗ ಸಂಬಂಧಿಕರ ಸಹಾಯದಿಂದ ಮಾರುಕಟ್ಟೆಯ ವ್ಯವಹಾರ ಮುಗಿಸುವ ಮಹಿಳೆಯರು ಜಿಲ್ಲೆಯಾದ್ಯಂತ ಕಂಡುಬರುತ್ತಾರೆ.

ಯಾವುದೇ ರೀತಿಯಲ್ಲಿ ಕೃಷಿ ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದಿರದ ಮಹಿಳೆಯರನ್ನು ಗುಲಬರ್ಗಾ ಜಿಲ್ಲೆಯಾದ್ಯಂತ ಕಾಣಬಹುದು. ಅವರಲ್ಲಿ 'ಮನೆಯಿಂದ ಹೆಣ್ಣು ಹೊರಗೆ ಹೋಗಬಾರದು ಎಂಬ ನಂಬಿಕೆ ನಮ್ಮ ಕುಟುಂಬದಲ್ಲಿರುವುದರಿಂದ ಹೊರಗೆ ಹೋಗುವುದಿಲ್ಲ' ಎಂದು ಹೇಳಿದವರು ಪರಿಶಿಷ್ಟ ಜಾತಿಯಲ್ಲಿ ಶೇ.೬ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ ಶೇ.೧೦ರಷ್ಟು ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೧೨ರಷ್ಟು ಮಹಿಳೆಯರು ಕಂಡುಬರುವವರು. ಕೋಷ್ಟಕದ ಮೂಲಕ ಹಿಂದುಳಿದ ವರ್ಗದ ಕುಟುಂಬಗಳಲ್ಲಿ ಈ ರೀತಿಯ ನಂಬಿಕೆಗಳು ಅಧಿಕವಾಗಿರುವುದು ಕಂಡು ಬರುತ್ತದೆ. ಅದೇ ರೀತಿ ಪರಿಶಿಷ್ಟ ಜಾತಿಯಲ್ಲಿ ಈ ನಂಬಿಕೆಗಳು ಕಡಿಮೆ ಪ್ರಮಾಣದಲ್ಲಿದೆ.

‘ವ್ಯವಹಾರ ಪುರುಷರ ಸ್ವತ್ತು ಎಂಬ ನಂಬಿಕೆಯಿರುವುದರಿಂದ ಮನೆಯಿಂದ ಮಾರುಕಟ್ಟೆಯಂತಹ ವ್ಯವಹಾರ ಕೇಂದ್ರಗಳಿಗೆ ಸಂಪರ್ಕ ಹೊಂದಿಲ್ಲ’ ಎಂದು ಹೇಳಿದವರು ಪರಿಶಿಷ್ಟ ಜಾತಿಯಲ್ಲಿ ಶೇ.೬೩ ರಷ್ಟು ಮಹಿಳೆಯರು. ಪರಿಶಿಷ್ಟ ಪಂಗಡದಲ್ಲಿ ಶೇ.೫೦ ರಷ್ಟು ಮಹಿಳೆಯರು ಮತ್ತು ಶೇ.೬೫ ರಷ್ಟು ಹಿಂದುಳಿದ ವರ್ಗದ ಮಹಿಳೆಯರು ಕಂಡುಬರುವರು. ಇವರ ಅಭಿಪ್ರಾಯದಂತೆ ಕುಟುಂಬದಲ್ಲಿನ ಸ್ತ್ರೀಯರು ಮನೆಕೆಲಸ, ಹೊಲದ ಕೆಲಸ ಮತ್ತು ಮಕ್ಕಳ ಲಾಲನೆ ಪಾಲನೆಗೆ ಸೀಮಿತವಾಗಿದ್ದಾರೆ. ಯಾವುದೇ ರೀತಿಯ ವ್ಯವಹಾರದಲ್ಲಿ ತಾವು ತಲೆ ಹಾಕುವ ಹಾಗಿಲ್ಲ ಎಂಬ ತಲೆತಲಾಂತರದ ನಂಬಿಕೆಯನ್ನು ಉಳಿಸಿ ಬೆಳೆಸಿಕೊಂಡು ಬರುವಂತೆ ವ್ಯವಸ್ಥೆಯೂ ರೂಪಿಸಿದೆ. ಈ ರೀತಿಯ ನಂಬಿಕೆಗಳು ಬದಲಾಗಬೇಕಿದೆ.

‘ವ್ಯವಹಾರ ಜ್ಞಾನ ಇಲ್ಲದ ಕಾರಣ ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದಿಲ್ಲ’ ಎಂದು ಹೇಳಿದವರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇ.೨೦ ರಷ್ಟು ಮಹಿಳೆಯರು ಮತ್ತು ಪರಿಶಿಷ್ಟ ಪಂಗಡದಲ್ಲಿ ಶೇ.೨೫ ರಷ್ಟು ಮಹಿಳೆಯರು. ಹಾಗೂ ಹಿಂದುಳಿದ ವರ್ಗದಲ್ಲಿ ಶೇ.೧೭ ರಷ್ಟು ಮಹಿಳೆಯರು ತಮಗೆ ವ್ಯವಹಾರ ಜ್ಞಾನ ಇಲ್ಲವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಾರುಕಟ್ಟೆಯಲ್ಲಿ ಮಹಿಳೆಯರನ್ನು ಕಂಡು ಮೋಸ ಮಾಡುವರು ಎನ್ನುವ ಕಾರಣಕ್ಕಾಗಿ ತಮಗೆ ವ್ಯವಹಾರ ಜ್ಞಾನ ಇಲ್ಲವೆಂದು ವಕ್ತೃಗಳು ಸ್ಪಷ್ಟಪಡಿಸಿರುವರು.

ಒಟ್ಟಾರೆಯಾಗಿ ಕೋಷ್ಟಕವನ್ನು ಗಮನಿಸಿದಾಗ ವ್ಯವಹಾರ ಪುರುಷರ ಸೊತ್ತು ಎಂಬ ನಂಬಿಕೆಯಿಂದ ಮಹಿಳೆಯರು ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದದೆ ಇರುವವರು ಜಿಲ್ಲೆಯಲ್ಲಿ ಒಟ್ಟು ಸರಾಸರಿ ಶೇ.೬೨.೫ ರಷ್ಟಿದ್ದಾರೆ. ಮಹಿಳೆಯರು ಮನೆಯಿಂದ ಹೊರಗೆ ಹೋಗಬಾರದು ಎಂಬ ನಂಬಿಕೆಯ ಮುಖಾಂತರ ವ್ಯವಹಾರಗಳಿಗೆ ತಡೆಯೊಡ್ಡುವ ಕುಟುಂಬಗಳು ಶೇ.೯.೫ ರಷ್ಟಿದೆ. ‘ತಮಗೆ ವ್ಯವಹಾರ ಜ್ಞಾನ ಇಲ್ಲ’ ಎಂದು ಮನೆಯಲ್ಲಿಯೇ ಶೋಷಿಸಲ್ಪಡುವ ಮಹಿಳೆಯರ ಪ್ರಮಾಣ ಶೇ.೧೯ರಷ್ಟು ಕಂಡುಬರುತ್ತದೆ. ಮಾರುಕಟ್ಟೆಯ ಜೊತೆಗೆ ಸಂಪರ್ಕ ಹೊಂದಿದ ಮಹಿಳೆಯರಲ್ಲಿ ಸರಾಸರಿ ಶೇ.೯ ರಷ್ಟು ಮಾತ್ರ ಕಂಡುಬರುವರು.

ಕೃಷಿ ಭೂಮಿಯ ಮೇಲೆ ಮತ್ತು ಕುಟುಂಬದಲ್ಲಿ ಪುರುಷನು ಅಧಿಕಾರ ಸ್ಥಾಪಿಸಿದನೋ ಅಂದಿನಿಂದ ವ್ಯವಹಾರಗಳೆಲ್ಲಾ ಪುರುಷನ ಸ್ವತ್ತು ಎಂಬಂತಾಯಿತು. ಇವುಗಳ ಜೊತೆಗೆ ಅನೇಕ ಮೂಢನಂಬಿಕೆಗಳು ತಳುಕು ಹಾಕಿಕೊಂಡವು. ಇವುಗಳ ಮೂಲ ಉದ್ದೇಶಗಳೇ ಮಹಿಳೆಯರನ್ನು ಅಧಿಕಾರದಿಂದ ದೂರವಿಡುವುದೇ ಆಗಿತ್ತು ಎನ್ನುವುದರಲ್ಲಿ ಎರಡು ಮಾತಿಲ್ಲ. ಸ್ತ್ರೀಯರನ್ನು ಮಗುವಿರುವಾಗಿನಿಂದಲೇ ಆ ರೀತಿಯಲ್ಲಿ ಬೆಳೆಸಲಾಗುತ್ತದೆ. ನಮ್ಮ ಸಮಾಜದಲ್ಲಿ ಅನೇಕ ನಿಷೇಧಗಳು, ರಕ್ಷಣೆಯ ನೆಪವೊಡ್ಡಿ, ಲಕ್ಷ್ಮಣರೇಖೆಯನ್ನು ದಾಟದ ಹಾಗೆ ಮಾಡಲಾಗುತ್ತದೆ. ಇವೆಲ್ಲವನ್ನು ಹೋಗಲಾಡಿಸಲು ಮಹಿಳೆಯರು ಮುಖ್ಯವಾಗಿ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳಬೇಕಾಗಿದೆ. ಕೃಷಿ ತರಬೇತಿ ಕೇಂದ್ರಗಳಲ್ಲಿ ಮಾರುಕಟ್ಟೆಯಂತಹ ಪ್ರಮುಖ ವ್ಯವಹಾರ ಕೇಂದ್ರಗಳ ಆಗು ಹೋಗುಗಳ ಬಗ್ಗೆ ಮಹಿಳೆಯರಿಗೆ ತಿಳುವಳಿಕೆ ಮೂಡಿಸಬೇಕಾಗಿದೆ. ಮಾರುಕಟ್ಟೆ ಕೇಂದ್ರಗಳಿಗೆ ಮಹಿಳೆಯರನ್ನು ಕರೆದುಕೊಂಡು ಹೋಗಿ ಅಲ್ಲಿಯ ವ್ಯವಹಾರದ ಬಗ್ಗೆ ಮಾಹಿತಿ ನೀಡುವುದು ಜರೂರಾಗಬೇಕಾಗಿದೆ. ಗುಲಬರ್ಗಾ ಜಿಲ್ಲೆಯು ಸಂಪೂರ್ಣವಾಗಿ ಕೃಷಿ ಆಧಾರಿತ ಜಿಲ್ಲೆಯಾದುದರಿಂದ ಪ್ರತಿಯೊಂದು ತಾಲೂಕು, ಹೋಬಳಿ ಕೇಂದ್ರಗಳಲ್ಲಿ ಕೃಷಿಕ ಮಹಿಳೆಯರೆಲ್ಲರೂ ಸೇರಿ ಸಂಘಟನೆಗಳನ್ನು ಮಾಡಿಕೊಂಡು ಹೋರಾಟ ಮಾಡಬೇಕು, ಅಂದಾಗ ಮಾತ್ರ ಮಹಿಳೆಯರು ವ್ಯವಹಾರ ಜ್ಞಾನ, ಶಿಕ್ಷಣ, ಆಸ್ತಿ ಹಕ್ಕುಗಳ ಬಗ್ಗೆ ತಿಳಿದುಕೊಳ್ಳಲು ಅನುಕೂಲವಾಗುವುದು.

## ಕೋಷ್ಟಕ -೧೧
## ಮಹಿಳೆಯರ ಕೃಷಿ ಸಾಲ

(ಶೇಕಡವಾರು)

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಕೃಷಿ ಸಾಲವನ್ನು ಪಡೆದ ಮಹಿಳೆಯರು | ೬೫ | ೬೦ | ೫೫ | ೫೯ |
| ೦೨ | ಕೃಷಿ ಸಾಲವನ್ನು ಪಡೆಯದೆ ಇರುವಂಥ ಮಹಿಳೆಯರು | ೩೫ | ೪೦ | ೪೫ | ೪೧ |

ಈ ಕೋಷ್ಟಕದ ಮೂಲಕ ಗುಲಬರ್ಗಾ ಜಿಲ್ಲೆಯಲ್ಲಿ ಕೃಷಿ ಸಾಲ ಕುರಿತು ಮಹಿಳೆಯರ ಪ್ರಮಾಣವನ್ನು ತಿಳಿದುಕೊಳ್ಳಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಪಡೆದ ಮಾಹಿತಿಯಂತೆ ಪರಿಶಿಷ್ಟ ಜಾತಿಯಲ್ಲಿ ಶೇ. ೬೫ ರಷ್ಟು ಮಹಿಳೆಯರು ಹಾಗೂ ಪರಿಶಿಷ್ಟ ಪಂಗಡದ ಶೇ.೬೦ರಷ್ಟು ಮಹಿಳೆಯರು ಮತ್ತು ಶೇ.೫೫ ರಷ್ಟು ಮಹಿಳೆಯರು ಹಿಂದುಳಿದ ವರ್ಗದಲ್ಲಿ 'ಕೃಷಿ ಸಾಲವನ್ನು ಪಡೆದಿದ್ದೇವೆ' ಎಂದು ಹೇಳಿರುವರು. ಅಂಕಿ-ಅಂಶಗಳನ್ನು ನೋಡಿದರೆ ಪರಿಶಿಷ್ಟ ಜಾತಿಯಲ್ಲಿ ಅಧಿಕ ಮಹಿಳೆಯರು ಕೃಷಿಗೆ ಸಂಬಂಧಿಸಿದಂತೆ ಸಾಲವನ್ನು ಪಡೆದಿದ್ದಾರೆ. ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳಲ್ಲಿ ಅತೀ ಕಡಿಮೆ ವಿಸ್ತೀರ್ಣದ ಭೂಮಿಯನ್ನು ಹೊಂದಿದ್ದಾರೆ. ಬೆಳೆಗಳನ್ನು ಬೆಳೆಯಲು ಹಣಕಾಸಿನ ಕೊರತೆಯನ್ನು ಅಧಿಕ ಪ್ರಮಾಣದಲ್ಲಿ ಎದುರಿಸುತ್ತಿರುವ ಕಾರಣ ಸಹಜವಾಗಿಯೇ ಕೃಷಿ ಸಾಲದ ಮೊರೆ ಹೋಗುತ್ತಾರೆ. ಮೊದಮೊದಲು ತಾವು ಕೂಲಿ ಕೆಲಸಕ್ಕೆ ಹೋಗುವ ಧನಿಕರಲ್ಲಿ ಸಾಲವನ್ನು ಪಡೆಯುತ್ತಿದ್ದರು. ಆದರೆ ಅಸಲು ಮತ್ತು ಬಡ್ಡಿಯನ್ನು ತೀರಿಸಲಾಗದೇ ಜೀತದಾಳಾಗಿ ದುಡಿದ ಪ್ರಕರಣಗಳನ್ನು ಇತಿಹಾಸದಿಂದ ತಿಳಿಯುತ್ತೇವೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಸಾವಿರಾರು ಕೃಷಿ ಕೂಲಿಕಾರರು ಧನಿಕರಿಂದ ಸಾಲ ಪಡೆದು ತಮ್ಮ ಜಮೀನನ್ನು ಕಳೆದುಕೊಂಡ ಉದಾಹರಣೆಗಳು ಕಂಡು ಬಂದಿವೆ. ಸ್ವಾತಂತ್ರ್ಯೋತ್ತರದಲ್ಲಿ ಸರಕಾರ ಅನೇಕ ರಿಯಾಯಿತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ, ಪುರುಷರಿಗೆ ಕೃಷಿ ಸಾಲ ಸೌಲಭ್ಯಗಳನ್ನು ಒದಗಿಸಿರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲವನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಜಿಲ್ಲೆಯ ಅನೇಕ ಕುಟುಂಬಗಳಲ್ಲಿನ ಪುರುಷರು ಮಹಿಳೆಯರಿಗೆ ರಿಯಾಯಿತಿ ದರದಲ್ಲಿ ಸಾಲ ದೊರಕುವುದರಿಂದ ಅವರ ಹೆಸರಿಗೆ ಭೂಮಿಯನ್ನು ವರ್ಗಾಯಿಸುತ್ತಾರೆ.

ಜಿಲ್ಲೆಯ ಅನೇಕ ಕುಟುಂಬಗಳು ಕೃಷಿ ಸಾಲವನ್ನು ಪಡೆಯದಿರುವವರ ಪ್ರಮಾಣವನ್ನು ಗಮನಿಸಿದಾಗ, ಪರಿಶಿಷ್ಟ ಜಾತಿಯಲ್ಲಿ ಶೇ.೩೫ ರಷ್ಟು ಮಹಿಳೆಯರಿದ್ದರೆ, ಶೇ. ೪೦ ರಷ್ಟು ಪ್ರಮಾಣ ಪರಿಶಿಷ್ಟ ಪಂಗಡದಲ್ಲಿ ಕಂಡು ಬರುತ್ತದೆ. ಹಿಂದುಳಿದ ವರ್ಗದಲ್ಲಿ ಶೇ. ೪೫ ರಷ್ಟು ಅಧಿಕ ಪ್ರಮಾಣದ ಮಹಿಳೆಯರು ಕೃಷಿ ಸಾಲವನ್ನು ಪಡೆದಿಲ್ಲ.

ಒಟ್ಟು ಕೃಷಿ ಸಾಲ ಪಡೆದವರ ಸರಾಸರಿಯನ್ನು ಗಮನಿಸಿದಾಗ ಅವರ ಪ್ರಮಾಣ ಜಿಲ್ಲೆಯಲ್ಲಿ ಶೇ.೫೯ರಷ್ಟಿದೆ. ಶೇ.೪೧ರಷ್ಟು ಮಹಿಳೆಯರು ಕೃಷಿ ಸಾಲವನ್ನೇ ಪಡೆದಿಲ್ಲ. ಅಧಿಕ ಪ್ರಮಾಣದಲ್ಲಿ ಕೃಷಿ ಸಾಲ ಪಡೆಯಲು ಕಾರಣಗಳನ್ನು ಗಮನಿಸಿದರೆ, ಕೃಷಿ ಸಾಲ ಪಡೆಯುವ ಸಲುವಾಗಿಯೇ ಅನೇಕ ಕುಟುಂಬಗಳಲ್ಲಿ ಮಹಿಳೆಯರ ಹೆಸರಿನಲ್ಲಿ ಭೂಮಿಯನ್ನು ಮಾಡುವ ಪುರುಷರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಈ ಮೊದಲು ವಿವರಿಸಿದಂತೆ

ಜಮೀನ್ದಾರರ ಹತ್ತಿರ ಮತ್ತು ಊರ ಗೌಡರ ಹತ್ತಿರ ಸಾಲ ಪಡೆದು ಅಧಿಕ ಬಡ್ಡಿ ಕಟ್ಟಿ ಸೋತ ರೈತರು, ಇಂದು ಸಹಕಾರಿ, ಗ್ರಾಮೀಣ ಮತ್ತು ರಾಷ್ಟ್ರೀಕೃತ ಬ್ಯಾಂಕುಗಳಿಂದ ಸುಲಭವಾಗಿ ಯಾವುದೇ ಮೋಸ ವಂಚನೆಗಳಿಲ್ಲದೇ ಸಾಲ ಪಡೆದಿರುವುದನ್ನು ಅವರ ಹೇಳಿಕೆಗಳಿಂದಲೇ ತಿಳಿಯಬಹುದು. ಕೆಲವು ಕುಟುಂಬಗಳಲ್ಲಿ ಪತಿ ಸರ್ಕಾರಿ ನೌಕರನಾಗಿರುವುದರಿಂದ ಮತ್ತು ಕುಟುಂಬದಲ್ಲಿ ಪುರುಷ ಮತ್ತು ಸ್ತ್ರೀಯರು ಅಧಿಕ ಪ್ರಮಾಣದಲ್ಲಿ ಭೂಮಿಯನ್ನು ಹೊಂದಿರುವುದರಿಂದ ಕೃಷಿ ಸಾಲ ಪಡೆಯುವ ಪ್ರಸಂಗಗಳೇ ಉದ್ಭವಿಸುವುದಿಲ್ಲ. ಇದ್ದ ಭೂಮಿಯ ಆದಾಯವೇ ಅವರಿಗೆ ಸರಿ ಹೋಗುವುದರಿಂದ ಬ್ಯಾಂಕ್ ಅಥವಾ ಇತರ ಮೂಲಗಳಿಂದ ಸಾಲ ಪಡೆಯುವ ಗೋಜಿಗೇ ಹೋಗುವುದಿಲ್ಲ. ಒಟ್ಟಿನಲ್ಲಿ ರೈತಾಪಿ ಹಿಡುವಳಿ ಹೊಂದಿದವರು ಮಾತ್ರ ಅಧಿಕ ಪ್ರಮಾಣದಲ್ಲಿ ಕೃಷಿ ಸಾಲ ಪಡೆಯುವರು ಹೊರತಾಗಿ ಜಮೀನ್ದಾರಿ ಹಿಡುವಳಿ ಹೊಂದಿದವರು ಪಡೆಯುತ್ತಿಲ್ಲ.

ಕೃಷಿ ಸಾಲವನ್ನು ಪಡೆದಂಥ ಮಹಿಳೆಯರು ಬ್ಯಾಂಕ್‌ಗಳಿಗೆ ಒಬ್ಬರೆ ಹೋಗದೆ ಕುಟುಂಬದ ಪುರುಷರ ಸಹಾಯವನ್ನು ಪಡೆಯುವರು, ಕಾರಣ ಕುಟುಂಬದಲ್ಲಿ ಮಹಿಳೆಯೊಬ್ಬಳೆ ಬ್ಯಾಂಕ್‌ಗೆ ಹೋಗಲು ಒಪ್ಪುವುದಿಲ್ಲ. ಬ್ಯಾಂಕಿನ ವ್ಯವಹಾರ ಜ್ಞಾನ ತಿಳಿಯದ ಕಾರಣ ಪುರುಷರ ಸಹಾಯವನ್ನು ಬಯಸುವರು. ಇನ್ನು ಕೆಲವು ಕುಟುಂಬದಲ್ಲಿ ಪುರುಷರು ಮಹಿಳೆಯರಿಗೆ ಬ್ಯಾಂಕಿನ ವ್ಯವಹಾರ ತಿಳಿದರೆ 'ಹಣದ ವ್ಯವಹಾರ ಅವಳಿಗೆ ತಿಳಿಯುವುದೆಂದು' ಕೇವಲ ಸಹಿ ಮಾಡಲು ಮಾತ್ರ ಅವಳನ್ನು ಕರೆದುಕೊಂಡು ಹೋಗುವರು. ಇನ್ನು ಕೃಷಿ ಸಾಲ ಪಡೆದ ಮೇಲೆ ಪತಿಯ ಕೈಗೆ ಕೊಡಬೇಕು. ಪುರುಷ ಇಲ್ಲದ ಕುಟುಂಬದಲ್ಲಿ ಮಾತ್ರ ಅವಳು ತನಗೆ ಅನುಕೂಲವಾಗುವಂತೆ ಉಪಯೋಗಿಸುವಳು. ಕೃಷಿ ಸಾಲ ಪಡೆಯುವ ನಿರ್ಧಾರ, ಯಾವ ಸಾಲ ಪಡೆಯಬೇಕು, ಅದರ ಉಪಯೋಗ ಹೇಗೆ ಮಾಡಬೇಕೆಂದು ನಿರ್ಧರಿಸುವವರು ಪುರುಷರು! ಮಹಿಳೆಯರ ಹೆಸರಿನಲ್ಲಿ ಕೃಷಿ ಸಾಲ ಪಡೆದರೆ ರಿಯಾಯಿತಿ ಇರುವುದರಿಂದ ಮಾತ್ರ ಅವಳಿಗೆ ಭೂ ಒಡೆತನದ ಹಕ್ಕು ನೀಡಿರುವುದನ್ನು ಜಿಲ್ಲೆಯಲ್ಲಿ ಕಾಣಬಹುದು.

**೮.೫. ಆಸ್ತಿಗೆ ಸಂಬಂಧಿಸಿದ ಕಾನೂನಿನ ಅರಿವು**

ಮಹಿಳೆಯರಿಗೆ ಸಂಬಂಧಿಸಿದ ಆಸ್ತಿ ಹಕ್ಕಿನ ಕಾನೂನುಗಳನ್ನು ಜಾರಿಗೊಳಿಸುವ ಮೂಲಕ ಸಮಾಜದಲ್ಲಿರುವ ಲಿಂಗ ತಾರತಮ್ಯವನ್ನು ಹೋಗಲಾಡಿಸಲು ಪ್ರಯತ್ನಿಸಲಾಗಿದೆ. ಈ ಕಾಯ್ದೆಯು ಜಾರಿಗೆ ಬರುವ ಮೊದಲು ಮಹಿಳೆಯರು ಮದುವೆಯ ನಂತರ ತವರಿನ ಸಂಬಂಧ ಕಡಿದುಕೊಳ್ಳುತ್ತಿದ್ದರು. ತವರು ಎಂದರೆ ಮಕ್ಕಳಿಗೆ ತಾಯಿ ಮೇಲಿನ ಮೋಹವಲ್ಲದೆ ಬೇರೇನು ಇರಲಿಲ್ಲ. ಆದರೆ ಈಗ ಒಂದೊಂದಾಗಿ ಅನೇಕ ಕಾನೂನುಗಳು ಬದಲಾಗಿವೆ. ಈಗ ವೃದ್ಧೆಯಾಗಿರುವ ಮಹಿಳೆಯು ಕೂಡ ತಂದೆಯ ಆಸ್ತಿಯಲ್ಲಿ ಪಾಲು ಕೇಳುವ ಅವಕಾಶವಿದೆ. ೧೯೫೬ರ ಕಾಯ್ದೆ ಜಾರಿಗೆ ಬರುವ ಮೊದಲು ಆಸ್ತಿಯಲ್ಲಿ ಮಹಿಳೆಯರಿಗೆ ಹಕ್ಕಿದ್ದರೂ ಅದು ವಿಧವಾ ಮಹಿಳೆಯರು ತಮ್ಮ ಜೀವಿತಾವಧಿಯವರೆಗೆ ಮಾತ್ರ ಅನುಭವಿಸಬೇಕಿತ್ತು. ಆದರೆ ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ ಹಕ್ಕಿರಲಿಲ್ಲ. ಈಗ ಒಂದೊಂದಾಗಿ ಸುಧಾರಣೆಯಾಗುತ್ತ ಮಹಿಳೆಗೂ ಆಸ್ತಿಯಲ್ಲಿ ಹಕ್ಕು ಪಡೆಯುವಂತಾಗಿದೆ. ಆದರೆ ಈ ಕಾಯ್ದೆಯನ್ನು ಸಮರ್ಪಕವಾಗಿ ಜಾರಿಗೊಳಿಸುವುದು ಅತ್ಯಗತ್ಯ.

ಒಟ್ಟಾರೆಯಾಗಿ ಮಹಿಳೆಯರಿಗೆ ಆಸ್ತಿ ಹಕ್ಕು ಕಾಯ್ದೆಯು ಜಾರಿಗೆ ಬಂದರೂ ಅದರಲ್ಲಿ ಮಹಿಳೆಯರು ಭಾಗವಹಿಸುವಿಕೆಯಲ್ಲಿರುವ ತೊಡಕುಗಳೇನು? ಇದು ನಮ್ಮ ಮುಂದಿರುವ ಮಹತ್ವದ ಪ್ರಶ್ನೆಯಾಗಿದೆ. ಆದರೆ

ಜಾರಿಗೆ ಬಂದಂಥ ಆಸ್ತಿ ಹಕ್ಕಿನ ಕಾಯ್ದೆಯ ಸದ್ವಿನಿಯೋಗ ಮಾಡಿಕೊಳ್ಳುತ್ತಿಲ್ಲ ಎಂಬುದನ್ನು ಕೇವಲ ಮಹಿಳೆಯರ ಮೇಲೆ ಆರೋಪಿಸಲಿಕ್ಕಾಗದು. ಇದಕ್ಕೆ ಆಕೆಯು ವಾಸವಾಗಿರುವಂಥ ವಾತಾವರಣ, ಸಮಾಜ ವ್ಯವಸ್ಥೆಯು ಕಾರಣವಾಗುತ್ತದೆ. ಏಕೆಂದರೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಹಿಂದಿನಿಂದಲೂ ಅದರಲ್ಲೂ ಗ್ರಾಮೀಣ ಭಾಗಗಳಲ್ಲಿ ಮಹಿಳೆಯರನ್ನು ಶಿಕ್ಷಣದಿಂದ ದೂರವಿಡುತ್ತಲೇ ಬರಲಾಗಿದೆ. ಕಾನೂನುಗಳು ಜಾರಿಗೆ ಬಂದರೂ ಅವು ಮಹಿಳೆಯರಿಗೆ ತಲುಪುತ್ತಿಲ್ಲ. ಹೀಗಾಗಿ ಕಾನೂನಿನ ಬಗ್ಗೆ ಅರಿವಿರದ ಅವರಿಗೆ ಅದರ ಉಪಯೋಗ ಪಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ನಗರ ಪ್ರದೇಶದ ಕೆಲವು ಮಹಿಳೆಯರು ಆಸ್ತಿಯಲ್ಲಿ ವಿವಾದವಾದರೆ, ನ್ಯಾಯಾಲಯದ ಮೊರೆ ಹೋಗುವರು. ಆದರೆ ಹಳ್ಳಿಯ ಮಹಿಳೆಯರಿಗೆ ಮೊದಲೇ ಕಾನೂನಿನ ಬಗ್ಗೆ ಅರಿವಿರುವುದಿಲ್ಲ. ಇನ್ನು ಅವರು ಕೋರ್ಟು ಕಛೇರಿಗೆ ಹೋದರೆ ಕಷ್ಟವಾಗುತ್ತದೆಂದು ಪಂಚಾಯಿತಿಯ ಮೂಲಕವೆ ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸುವರು. ಅಲ್ಲದೆ ಇದಕ್ಕೆಲ್ಲ ಕಾರಣ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರು ಕಂದಾಚಾರದಿಂದ ಇನ್ನು ಹೊರಬರಲಾಗಿಲ್ಲ. ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಜಾತಿ ಧರ್ಮಗಳ ಕವಚಗಳು, ಅನಕ್ಷರತೆ ಮುಂತಾದವುಗಳಿಂದ ಬಂಧಿತರಾಗಿರುವ ಮಹಿಳೆಯರಿಗೆ ಆಸ್ತಿ ಹಕ್ಕಿನ ಕಾಯ್ದೆಗಳ ಬಗ್ಗೆ ಅರಿವಿಲ್ಲದಂತಾಗಿದೆ. ಕೇವಲ ಕಾಯ್ದೆಯನ್ನು ಜಾರಿಗೊಳಿಸಿದರೆ ಸಾಲದು ಅದರ ಬಗ್ಗೆ ಅರಿವು ಮೂಡಿಸಿ ಮಹಿಳೆಯರಿಗೆ ಅದರ ಉಪಯೋಗ ಪಡೆಯುವಂತೆ ಮಾಡುವುದು ತುಂಬಾ ಅವಶ್ಯಕವಾಗಿದೆ.

**ಕೋಷ್ಟಕ -೧೨**

**ಮಹಿಳೆಯರಿಗೆ ಆಸ್ತಿ ಹಕ್ಕು ಕಾಯ್ದೆಯ ಬಗೆಗಿನ ಅರಿವು**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಮಹಿಳೆಯರಲ್ಲಿ ಆಸ್ತಿಹಕ್ಕು ಕಾಯ್ದೆಯ ಬಗ್ಗ ಅರಿವಿದ್ದವರು | ೪ | ೫ | ೪ | ೪ |
| ೦೨ | ಮಹಿಳೆಯೆಂಬ ಕಾರಣದಿಂದ ಆಸ್ತಿಹಕ್ಕು ಕಾಯ್ದೆಯ ಬಗ್ಗೆ ತಿಳಿದುಕೊಳ್ಳದವರು | ೭೫ | ೭೦ | ೬೧ | ೬೬.೫ |
| ೦೪ | ಆಸ್ತಿಹಕ್ಕು ಕಾಯ್ದೆಯ ಬಗ್ಗೆ ಮಾಹಿತಿ ನೀಡುವವರ ಕೊರತೆಯಿದೆ ಎಂದವರು | ೨೧ | ೨೫ | ೩೫ | ೨೯.೫ |

ಗ್ರಾಮೀಣ ಪ್ರದೇಶಗಳ ಮಹಿಳೆಯರು ಆಸ್ತಿ ಹಕ್ಕು ಕಾಯ್ದೆಯ ಬಗ್ಗೆ ಎಷ್ಟರಮಟ್ಟಿಗೆ ತಿಳಿದುಕೊಂಡಿದ್ದಾರೆ ಎನ್ನುವುದನ್ನು ಈ ಕೋಷ್ಟಕದ ಅಂಕಿ-ಅಂಶಗಳ ಮೂಲಕ ತಿಳಿದುಕೊಳ್ಳಲಾಗಿದೆ. ಆಸ್ತಿ ಹಕ್ಕು ಕಾಯ್ದೆಯ ಬಗೆಗೆ ತಿಳುವಳಿಕೆ ಹೊಂದಿದವರ ಪ್ರಮಾಣ ಪರಿಶಿಷ್ಟ ಜಾತಿಯ ಹಾಗೂ ಹಿಂದುಳಿದ ವರ್ಗದ ಮಹಿಳೆಯರಲ್ಲಿ ಶೇ.೪ರಷ್ಟಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ.೫ರಷ್ಟಿರುವುದು ಕಂಡುಬಂದಿದೆ. ಪರಿಶಿಷ್ಟ ಪಂಗಡದವರಿಗೆ ಅಧಿಕ ಪ್ರಮಾಣದಲ್ಲಿ ಮಹಿಳಾ ಆಸ್ತಿ ಹಕ್ಕು ಕಾಯ್ದೆ ಬಗ್ಗೆ ಅರಿವಿರುವುದನ್ನು ಅಂಕಿ-ಅಂಶಗಳು ತಿಳಿಸುತ್ತದೆ. ನಾಲ್ಕು ಗೋಡೆಗಳ ಮಧ್ಯೆಯೇ ಮನೆವಾರ್ತೆಯ ಕೆಲಸಗಳಲ್ಲಿ ತಲ್ಲೀನರಾಗಿರುವ ಸ್ತ್ರೀಯರಿಗೆ ಯಾವುದೇ ಕಾನೂನು, ಹಕ್ಕುಗಳ

ಬಗ್ಗೆ ತಿಳಿಯುವುದಾದರೂ ಹೇಗೆ ಎಂಬುದನ್ನು ಗಮನಿಸಬೇಕಾಗಿದೆ. ಇಡೀ ಜಿಲ್ಲೆಯನ್ನು ಗಮನಿಸಿದರೆ ಅಧಿಕ ಪ್ರಮಾಣದ ಮಹಿಳೆಯರಿಗೆ ಆಸ್ತಿ ಹಕ್ಕು ಕಾಯ್ದೆ ಬಗ್ಗೆ ಏನೂ ತಿಳಿದಿಲ್ಲ. ಅದಕ್ಕೆ ಅನೇಕ ಕಾರಣಗಳನ್ನು ಕೊಡುತ್ತಾರೆ.

'ಕುಟುಂಬದಲ್ಲಿ ಮಹಿಳೆ ಎನ್ನುವ ಕಾರಣಕ್ಕಾಗಿ ಯಾವುದೇ ಕಾಯ್ದೆ ಕಾನೂನುಗಳ ಬಗ್ಗೆ ತಿಳಿದುಕೊಳ್ಳಲು ಆಗುತ್ತಿಲ್ಲ' ಎಂದು ಕಾರಣಗಳನ್ನು ನೀಡಿದವರು ಪರಿಶಿಷ್ಟ ಜಾತಿಯಲ್ಲಿ ಶೇ.೭೫ ರಷ್ಟು ಮಹಿಳೆಯರು, ಪರಿಶಿಷ್ಟ ಪಂಗಡದ ಶೇ.೭೦ರಷ್ಟು ಮಹಿಳೆಯರು ಮತ್ತು ಹಿಂದುಳಿದ ವರ್ಗದಲ್ಲಿ ಶೇ.೬೧ ರಷ್ಟು ಮಹಿಳೆಯರು. ಕಾಯ್ದೆ ಬಗ್ಗೆ ತಿಳುವಳಿಕೆ ಇರಬೇಕಾದುದು ಕುಟುಂಬದ ಪುರುಷನಿಗೆ, ನಾವು ಸ್ತ್ರೀಯರು ಅದರ ಬಗ್ಗೆ ಅರಿತುಕೊಂಡು ಮಾಡುವುದಾದರೂ ಏನಿದೆ? ಎಂಬ ಮಾರ್ಮಿಕ ನುಡಿ ಅವರದು. ಗ್ರಾಮೀಣ ಪ್ರದೇಶಗಳ ಮಹಿಳೆಯರಿಗೆ ಇಂದಿನ ಕಾನೂನು ಕಾಯ್ದೆ, ಅವುಗಳಿಂದಾಗುವ ಲಾಭ ನಷ್ಟಗಳ ಬಗ್ಗೆ ಯಾವುದೇ ರೀತಿಯ ಅರಿವು ಇರುವುದಿಲ್ಲ. ಕುಟುಂಬ ನಿರ್ವಹಣೆಯಲ್ಲಿ ಆಸ್ತಿ ಹಕ್ಕು ಕಾಯ್ದೆ ಬಗೆಗೆ ತಿಳಿದುಕೊಳ್ಳುವ ಯಾವುದೇ ಉತ್ಸಾಹ ಅವರಿಗಿಲ್ಲ ಎಂಬುದು ಅವರ ಹೇಳಿಕೆಗಳಿಂದ ತಿಳಿಯಬಹುದು.

'ಆಸ್ತಿ ಹಕ್ಕು ಕಾಯ್ದೆಯ ಬಗ್ಗೆ ತಿಳಿದುಕೊಳ್ಳಬೇಕೆಂಬ ಆಸಕ್ತಿ ಇದೆ. ಆದರೆ ಮಾಹಿತಿ ನೀಡುವವರು ಯಾರೂ ಇಲ್ಲ' ಎಂದು ಹೇಳಿದವರಲ್ಲಿ ಶೇ.೨೧ ರಷ್ಟು ಮಹಿಳೆಯರು ಪರಿಶಿಷ್ಟ ಜಾತಿಯಲ್ಲಿ ಕಂಡುಬರುತ್ತಾರೆ. ಪರಿಶಿಷ್ಟ ಪಂಗಡದಲ್ಲಿ ಶೇ. ೨೫ ರಷ್ಟು ಮತ್ತು ಹಿಂದುಳಿದ ವರ್ಗದ ಶೇ. ೩೫ ರಷ್ಟು ಮಹಿಳೆಯರು ಆಸಕ್ತಿ ಹೊಂದಿದ್ದಾರೆ, ಆದರೆ ಅವರಿಗೆ ಮಾಹಿತಿ ನೀಡುವವರ ಕೊರತೆ ಇದೆ. ಜಿಲ್ಲೆಯ ಬಹುತೇಕ ಗ್ರಾಮೀಣ ಪ್ರದೇಶಗಳ ಮಹಿಳೆಯರಿಗೆ ಯಾವುದೇ ಕಾನೂನು ಕಾಯ್ದೆ, ಹಕ್ಕುಗಳ ಬಗೆಗೆ ಮಾಹಿತಿಗಳೇ ಇಲ್ಲ. ಕುಟುಂಬದ ಪುರುಷರು ಕೂಡ ಯಾವುದೇ ಮಾಹಿತಿಗಳನ್ನು ಕುಟುಂಬದ ಹೆಣ್ಣು ಮಕ್ಕಳಿಗೆ ನೀಡುವುದಿಲ್ಲ. ಅವುಗಳ ಬಗ್ಗೆ ಮಹಿಳೆಯರು ತಿಳಿದುಕೊಂಡರೆ ನಮ್ಮ ಅಧಿಕಾರಕ್ಕೆ, ಪ್ರತಿಷ್ಠೆಗೆ ಎಲ್ಲಿ ಕುತ್ತು ಬರುತ್ತದೋ ಎಂಬ ಅಪನಂಬಿಕೆ ಅವರನ್ನು ಕಾಡುತ್ತದೆ. ಜಿಲ್ಲೆಯಲ್ಲಿ ಆಸ್ತಿ ಹಕ್ಕು ಕಾಯ್ದೆ ಬಗ್ಗೆ ತಿಳಿದುಕೊಳ್ಳಲು ಆಸಕ್ತಿಯಿರುವವರಲ್ಲಿ ಹಿಂದುಳಿದ ವರ್ಗದ ಮಹಿಳೆಯರ ಪ್ರಮಾಣ ಅಧಿಕವಿರುವುದನ್ನು ಕಾಣಬಹುದು.

ಗುಲಬರ್ಗಾ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರಾಗಲಿ, ಪರಿಶಿಷ್ಟ ಪಂಗಡದ ಮಹಿಳೆಯರಾಗಲಿ ಮತ್ತು ಹಿಂದುಳಿದ ವರ್ಗದ ಮಹಿಳೆಯರಾಗಲಿ ಆಸ್ತಿಹಕ್ಕು ಕಾಯ್ದೆ ಬಗ್ಗೆ ಅರಿತುಕೊಂಡವರ ಪ್ರಮಾಣ ಕಡಿಮೆ ಇದೆ ಎಂಬುದನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ. ಪರಿಶಿಷ್ಟ ಜಾತಿಯ ಮಹಿಳೆಯರಲ್ಲಿ ಈ ಕಾಯ್ದೆಯ ಬಗ್ಗೆ ತಿಳಿದುಕೊಳ್ಳಲು ಆಸಕ್ತಿ ಇಲ್ಲ ಎಂದು ಹೇಳಿದವರು ಅಧಿಕವಾದರೆ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದವರಲ್ಲಿ ಮಹಿಳೆ ಎನ್ನುವ ಕಾರಣಕ್ಕಾಗಿ ತಿಳಿದುಕೊಳ್ಳುತ್ತಿಲ್ಲ ಎನ್ನುವವರ ಪ್ರಮಾಣ ಅಧಿಕವಾಗಿದೆ.

ಜಿಲ್ಲೆಯ ಒಟ್ಟು ಸರಾಸರಿಯನ್ನು ಗಮನಿಸಿದಾಗ, ಅತಿ ಕಡಿಮೆ ಪ್ರಮಾಣದಲ್ಲಿ ಅಂದರೆ ಕೇವಲ ಶೇ.೪ರಷ್ಟು ಮಹಿಳೆಯರು ಕಾನೂನು ಕಾಯ್ದೆ ಬಗ್ಗೆ ಮಾಹಿತಿಗಳನ್ನು ಹೊಂದಿದ್ದಾರೆ. ಆದರೆ ಅಧಿಕ ಪ್ರಮಾಣದಲ್ಲಿ ಶೇ.೬೬.೫ ರಷ್ಟು ಮಹಿಳೆಯರು 'ಮಹಿಳೆ' ಎನ್ನುವ ಕಾರಣಕ್ಕಾಗಿಯೇ ಆಸ್ತಿ ಹಕ್ಕು ಕಾಯ್ದೆ ಬಗ್ಗೆ ಅರಿತಿಲ್ಲ ಎಂದು ಹೇಳಿರುವುದು ವಿಷಾದನೀಯ.

ಗ್ರಾಮೀಣ ಪ್ರದೇಶದ ಮಹಿಳೆಯರಲ್ಲಿಯೇ ಮಹಿಳೆ ಎನ್ನುವ ಒಂದು ರೀತಿಯ ಕೀಳರಿಮೆ ಇದೆ. ಇದಕ್ಕೆ ಕಾರಣ ನಮ್ಮ ಪುರುಷ ಪ್ರಧಾನ ಸಮಾಜ ವ್ಯವಸ್ಥೆ. ಪ್ರತಿಯೊಂದು ಕ್ಷೇತ್ರದಲ್ಲಿಯೂ ವಿವಿಧ ಹಂತಗಳಲ್ಲಿ ಸ್ತ್ರೀಯನ್ನು ಕೆಳಮಟ್ಟದ ಪ್ರಜೆಯನ್ನಾಗಿ ಕಂಡು 'ಅಬಲೆ' ಎಂದು ಬಿಂಬಿಸುತ್ತಾ ಬಂದಿರುವುದನ್ನು ಕಾಣಬಹುದು. ಯಾವುದೇ ಕ್ಷೇತ್ರದಲ್ಲಿ ಸ್ತ್ರೀಯರ ಅಭಿಪ್ರಾಯಗಳು ನಗಣ್ಯವಾಗಿ ಕಾಣುತ್ತವೆ ಪುರುಷರಿಗೆ. ಅದು ಮಹಿಳೆಯರಿಗೆ ಚಿಕ್ಕ ಪ್ರಾಯದಿಂದಲೇ ಮಾನಸಿಕವಾಗಿ ಆತ್ಮವಿಶ್ವಾಸವನ್ನು ಕುಗ್ಗಿಸುವಲ್ಲಿ ಯಶಸ್ವಿಯಾಗುತ್ತದೆ. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಅನೇಕ ಸಂಘ ಸಂಸ್ಥೆಗಳು ಮಹಿಳೆಯರಿಗೆ ಆಸ್ತಿ ಹಕ್ಕಿನ ಬಗ್ಗೆ ಮಾಹಿತಿಗಳನ್ನು ತರಬೇತಿಗಳನ್ನು ನೀಡುವ ಅಗತ್ಯವಿದೆ. ಇವುಗಳ ಕೊರತೆಯಿಂದಾಗಿಯೇ ಜಿಲ್ಲೆಯಲ್ಲಿ ಕಾನೂನುಗಳ ಅರಿವಿಲ್ಲದಿರುವುದನ್ನು ಕಾಣಬಹುದು. ಶೇ. ೨೯.೫ ರಷ್ಟು ಮಹಿಳೆಯರು ಆಸ್ತಿ ಹಕ್ಕು ಕಾಯ್ದೆ ಬಗ್ಗೆ ಮಾಹಿತಿ ನೀಡುವವರ ಕೊರತೆ ಇದೆ ಎಂದು ಹೇಳಿರುವುದು ಉಲ್ಲೇಖನೀಯ.

**ಕೋಷ್ಟಕ -೧೩**

**ಆಸ್ತಿಹಕ್ಕು ಕಾಯ್ದೆಯ ಮೂಲಕ ಭೂ ಒಡೆತನ ಹೊಂದಿರುವ ಮಹಿಳೆಯರು**

**(ಶೇಕಡವಾರು)**

| ಕ್ರ.ಸಂ | ವಿವರ | ಪ.ಜಾ | ಪ.ಪಂ | ಹಿಂ.ವ | ಒಟ್ಟು |
|---|---|---|---|---|---|
| ೦೧ | ಆಸ್ತಿಹಕ್ಕು ಕಾಯ್ದೆಯ ಮೂಲಕ ಭೂ ಒಡೆತನ ಹೊಂದಿದ ಮಹಿಳೆಯರು | - | - | - | - |
| ೦೨ | ಆಸ್ತಿಹಕ್ಕು ಕಾಯ್ದೆಯ ಮೂಲಕ ಭೂಮಿ ಕೇಳಿದರೆ ಕುಟುಂಬದಿಂದ ಸಂಬಂಧ ಕಳಚಿಕೊಳ್ಳುತ್ತದೆ ಎನ್ನುವ ಮಹಿಳೆಯರು | ೩೪ | ೫೦ | ೩೫ | ೩೬ |
| ೦೩ | ಭೂಮಿ ಪುರುಷರ ಸ್ವತ್ತೆಂದು ಕೇಳದವರು | ೬೬ | ೫೦ | ೬೫ | ೬೪ |

ಈ ಕೋಷ್ಟಕದ ಮೂಲಕ ತಿಳಿದು ಬರುವ ಅಂಶವೆಂದರೆ, ಪರಿಶಿಷ್ಟ ಜಾತಿಯಲ್ಲಾಗಲಿ, ಪರಿಶಿಷ್ಟ ಪಂಗಡದಲ್ಲಾಗಲಿ ಮತ್ತು ಹಿಂದುಳಿದ ವರ್ಗದಲ್ಲಾಗಲಿ ಯಾವುದೇ ವರ್ಗದ ಮಹಿಳೆಯರು ಆಸ್ತಿಹಕ್ಕು ಕಾಯ್ದೆಯ ಮೂಲಕ ಕುಟುಂಬದಿಂದ ಆಸ್ತಿಯನ್ನು ಪಡೆದಿರುವುದು ಕಂಡುಬರುವುದಿಲ್ಲ. ''ಆಸ್ತಿ ಹಕ್ಕು ಕಾಯಿದೆ ಮೂಲಕ ತವರಿನ ಕುಟುಂಬದಲ್ಲಿ ಆಸ್ತಿ ಕೇಳಿದರೆ ಕುಟುಂಬದಿಂದ ಸಂಬಂಧ ಕಳಚಿಕೊಂಡು ಹೋಗುತ್ತದೆ'' ಎಂದು ಹೇಳಿದವರು ಪರಿಶಿಷ್ಟ ಜಾತಿಯಲ್ಲಿ ಶೇ. ೩೪ರಷ್ಟು ಪ್ರಮಾಣದ ಮಹಿಳೆಯರು. ಪರಿಶಿಷ್ಟ ಪಂಗಡದಲ್ಲಿ ಈ ರೀತಿಯ ಹೇಳಿಕೆ ನೀಡಿದವರ ಪ್ರಮಾಣ ಶೇ. ೫೦ರಷ್ಟು ಹಾಗೆಯೇ ಶೇ. ೩೫ರಷ್ಟು ಪ್ರಮಾಣದ ಮಹಿಳೆಯರು ಹಿಂದುಳಿದ ವರ್ಗದಲ್ಲಿ ಕಂಡುಬರುತ್ತಾರೆ.

'ಆಸ್ತಿ ಪುರುಷರ ಸ್ವತ್ತು' ಎಂಬ ಸಂಪ್ರದಾಯವಿರುವುದರಿಂದ ನಾವು ಆಸ್ತಿ ಕೇಳಿಲ್ಲ.' ಎಂದು ಅಭಿಪ್ರಾಯ ವ್ಯಕ್ತಪಡಿಸಿದವರ ಪ್ರಮಾಣ ಪರಿಶಿಷ್ಟ ಜಾತಿಯಲ್ಲಿ ಶೇ.೬೬ರಷ್ಟಿದ್ದರೆ, ಪರಿಶಿಷ್ಟ ಪಂಗಡದಲ್ಲಿ ಶೇ ೫೦ ರಷ್ಟಿರುವುದು ಗಮನಿಸಬಹುದು. ಶೇ.೬೫ರಷ್ಟು ಪ್ರಮಾಣದ ಮಹಿಳೆಯರು ಹಿಂದುಳಿದ ವರ್ಗದಲ್ಲಿದ್ದಾರೆ.

ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ಆಸ್ತಿ ಹಕ್ಕು ಕಾಯಿದೆ ಮೂಲಕ ಆಸ್ತಿ ಪಡೆದ ಮಹಿಳೆಯರು ಕಂಡುಬಂದಿಲ್ಲ. ಭಾವನಾತ್ಮಕ ಸಂಬಂಧವನ್ನು ಮುಂದಿಟ್ಟುಕೊಂಡು ಯಾವ ಮಹಿಳೆಯೂ ಕೂಡ ತನ್ನ ತವರಿನ ಆಸ್ತಿಯ ಕಡೆಗೆ ಕಣ್ಣು ಹಾಯಿಸುವುದಿಲ್ಲ ಎಂಬುದು ಸಮಾಜದಲ್ಲಿನ ವಾಸ್ತವ ಸಂಗತಿ. ಜಿಲ್ಲೆಯ ಒಟ್ಟು ಸರಾಸರಿಯನ್ನು ಗಮನಿಸಿದಾಗ ಶೇ.೩೬ ರಷ್ಟು ಮಹಿಳೆಯರು ಆಸ್ತಿ ಕೇಳಿದರೆ ತವರಿನಿಂದ ಸಂಬಂಧ ಕಡಿದು ಹೋಗುತ್ತದೆ ಎಂದು ಹೇಳಿರುವರು.

'ವರದಕ್ಷಿಣೆ ಕೊಟ್ಟು ಮದುವೆ ಮಾಡುವುದರಿಂದ ಆಸ್ತಿ ಕೇಳಲು ಸಾಧ್ಯವಾಗುವುದಿಲ್ಲ. ಕಷ್ಟಕಾಲ ಬಂದರೆ ಅಣ್ಣ ತಮ್ಮಂದಿರು ನೆರವಾಗುತ್ತಾರೆ. ನಾಳೆ ಆಸ್ತಿ ಕೇಳಿದಾಗ ದಾಯಾದಿಗಳಾಗುತ್ತೇವೆ. ತವರಿನವರು ಚೆನ್ನಾಗಿರಬೇಕು. ಅವರಿಂದ ಆಸ್ತಿ ಪಡೆದು ನಾನೇನು ಸಾಧಿಸಬೇಕಾಗಿದೆ?' ಎಂಬುದು ಅನೇಕ ಮಹಿಳೆಯರ ಅಭಿಪ್ರಾಯ.

ಕಾನೂನಿನನ್ವಯ ವರದಕ್ಷಿಣೆ ಪಡೆಯುವುದು, ಕೊಡುವುದು ಅಪರಾಧ. ಆದರೆ ಆಸ್ತಿ ಕೇಳುವುದು ಅಥವಾ ಕೊಡುವುದು ಅಪರಾಧವಲ್ಲ. ಅದು ಹಕ್ಕು ತವರು ಮನೆ ಚೆನ್ನಾಗಿರಬೇಕು. ಸಂಬಂಧ ಯಾವತ್ತು ಕಡಿದು ಹೋಗಬಾರದೆನ್ನುವುದು ಅಕ್ಷರಶಃ ಎಲ್ಲಾ ಮಹಿಳೆಯರ ಭಾವನೆಯಾಗಿದೆ. ಕಷ್ಟ ಕಾಲದಲ್ಲಿ ಅಣ್ಣ ತಮ್ಮಂದಿರು ಸ್ತ್ರೀಯರೆಂದು ಸಹಾಯ ಮಾಡುವುದಿಲ್ಲ. ತಮ್ಮ ಒಡಹುಟ್ಟಿದವಳೆಂದು ಸಹಾಯ ಮಾಡುವವರೇ ಅಧಿಕ. ಆದರೆ ಸಹಾಯ ಮಾಡದೇ ಇರುವವರ ಸಂಖ್ಯೆ ಇಲ್ಲವೆಂದಲ್ಲ. ಅಂಥವರೂ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಈ ಸಂದರ್ಭದಲ್ಲಿ ಹಕ್ಕನ್ನು ಪಡೆಯುವ ಮಧ್ಯೆ ಭಾವನಾತ್ಮಕತೆ ಬೇಕಾಗಿಲ್ಲ.

ಒಟ್ಟಿನಲ್ಲಿ ಈ ಕ್ಷೇತ್ರಕಾರ್ಯಾಧಾರಿತ ಅಧ್ಯಯನದಿಂದ ಗುಲಬರ್ಗಾ ಜಿಲ್ಲೆಯ ಬಹುಪಾಲು ಮಹಿಳೆಯರಿಗೆ ಭೂ ಒಡೆತನದ ಬಗ್ಗೆ ಅರಿವು ಇಲ್ಲ. ಸರಕಾರ ಕಾಯ್ದೆ, ಕಾನೂನುಗಳನ್ನು ರೂಪಿಸಿವೆಯೇ ಹೊರತು ಅದನ್ನು ಜನಸಾಮಾನ್ಯರಿಗೆ ತಲುಪಿಸುವ ಜವಾಬ್ದಾರಿಯುತ ಕಾರ್ಯವನ್ನು ಮಾಡಿಲ್ಲವೆಂದೇ ಹೇಳಬೇಕು. ಇವುಗಳ ಬಗ್ಗೆ ಖಾಸಗಿ ಸಂಘ, ಸಂಸ್ಥೆಗಳು ಕಾರ್ಯೋನ್ಮುಖವಾಗಬೇಕಿದೆ.

ಆಸ್ತಿ ಹಕ್ಕನ್ನು ಮಹಿಳೆಗೆ ಕೊಡಮಾಡಿದರೂ ಅದನ್ನು ತನ್ನಿಚ್ಛೆಯಂತೆ ತನ್ನ ಸಬಲೀಕರಣಕ್ಕಾಗಿ ಬಳಸುವ ನಿಜವಾದ ಅಧಿಕಾರವನ್ನು ಮಹಿಳೆಗೆ ಪುರುಷ ಪ್ರಧಾನ ವ್ಯವಸ್ಥೆ ಇನ್ನೂ ಕೊಡಮಾಡಿಲ್ಲ. ಹಾಗಾಗಿ ಮಹಿಳೆಯರ ಬಗೆಗಿನ ನಮ್ಮ ಸಾಮಾಜಿಕ ನಿಲುವುಗಳು ಬದಲಾಗದ ಹೊರತು ಇಂತಹ ನೂರೆಂಟು ಕಾಯ್ದೆಗಳು ಜಾರಿಗೆ ಬಂದರೂ ಮಹಿಳೆಯರ ಸ್ಥಿತಿಗತಿಗಳು ಬದಲಾಗುವುದು ಕಷ್ಟಸಾಧ್ಯ. ಆದರೂ ಮಹಿಳೆಯರಿಗೆ ಸಂವಿಧಾನಬದ್ಧವಾಗಿ ಆಸ್ತಿಯ ಹಕ್ಕನ್ನು ಕೊಡಮಾಡಿದ್ದು ಪ್ರಶಂಸನಾರ್ಹವೇ ಸರಿ. ಕೊನೆಪಕ್ಷ ಮಹಿಳೆ ಕುಟುಂಬದಲ್ಲಿ ತನ್ನ ಅಸ್ತಿತ್ವ ಕಳೆದುಕೊಳ್ಳುವ ಸಂದರ್ಭದಲ್ಲಿ ಆಸ್ತಿಯಲ್ಲಿ ತನಗೂ ಹಕ್ಕಿದೆ ಎಂದು ಧ್ವನಿಯೆತ್ತುವುದಕ್ಕಾದರೂ ಕಾನೂನು ಸಹಾಯಕವಾಗಿದೆ. ಅಲ್ಲದೆ ಭೂ ಒಡೆತನ ಹೊಂದಿದ ಮಹಿಳೆಯರೆಲ್ಲರೂ ಸಂಪೂರ್ಣವಾಗಿ ಅದರ ಲಾಭ ಪಡೆಯುತ್ತಿಲ್ಲ ಎಂದು ಹೇಳಲಿಕ್ಕಾಗದು. ಕೆಲವು ವಿಧವೆಯರ ಬಾಳಿಗೆ ಆಸ್ತಿ ಹಕ್ಕು ಇರುವುದು ಆಶಾಕಿರಣವಾಗಿದೆ. ಗಂಡನನ್ನು ಕಳೆದುಕೊಂಡು ನಿರ್ಗತಿಕರಾಗಿರುವ ಇಲ್ಲವೆ ಪರಾವಲಂಬಿಗಳಾಗಿ ಬದುಕು ಸಾಗಿಸಬೇಕಾದ ಅನಿವಾರ್ಯತೆಯನ್ನು ತಪ್ಪಿಸಿ ಅವರು ಸಹ ಸಮಾಜದಲ್ಲಿ ಇತರರಂತೆ ಸ್ವಾವಲಂಬಿಗಳಾಗಿ ಬದುಕುವುದಕ್ಕೆ ದಾರಿಮಾಡಿಕೊಟ್ಟಿರುವ ನಿದರ್ಶನಗಳನ್ನು ಕೂಡ ಕಾಣುತ್ತೇವೆ.

ಒಟ್ಟು ಈ ಅಧ್ಯಾಯದಲ್ಲಿ ಗುಲಬರ್ಗಾ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿನ ಮಹಿಳೆಯರು ಭೂ ಒಡೆತನದ ಬಗ್ಗೆ ಎಷ್ಟರಮಟ್ಟಿಗೆ ತಿಳುವಳಿಕೆ ಹೊಂದಿದ್ದಾರೆ ಎಂಬುದರ ಬಗ್ಗೆ ತಿಳಿಯಲು ಪ್ರಯತ್ನಿಸಲಾಗಿದೆ. ಭೂ ಒಡೆತನದ

ಬಗೆಗಿನ ಸಾಮಾಜಿಕ ಗ್ರಹಿಕೆಗಳು, ಭೂ ಒಡೆತನ ಪಡೆದ ಹಿನ್ನೆಲೆ, ಒಡೆತನ ಹೊಂದಿರುವ ಭೂಮಿಯ ಸ್ವರೂಪ, ನಿಯಂತ್ರಣ ಮತ್ತು ನಿರ್ವಹಣೆ ಹಾಗೂ ಆಸ್ತಿಗೆ ಸಂಬಂಧಿಸಿದ ಕಾನೂನಿನ ಅರಿವು ಹೀಗೆ ಐದು ವಿಭಾಗಗಳಲ್ಲಿ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಮಹಿಳೆಯರ ಅಭಿಪ್ರಾಯ ಕೇಳುವ ಮುಖಾಂತರ ಒಟ್ಟು ಸ್ಥಿತಿಗತಿ, ವಾಸ್ತವತೆಯನ್ನು ತಿಳಿಯಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಮಹಿಳೆಯರ ಹೇಳಿಕೆಗಳ ಅನುಗುಣವಾಗಿ ಅಂಕಿ-ಅಂಶಗಳನ್ನು ನೀಡಲಾಗಿದೆ.

ಗ್ರಾಮೀಣ ಪ್ರದೇಶದ ಮಹಿಳೆಯರ ಹೇಳಿಕೆಗಳೇ ಅವರಿಗಿರುವ ಅರಿವನ್ನು ಪ್ರತಿಬಿಂಬಿಸುತ್ತದೆ. 'ಹೆಸರಿಗೆ ಮಾತ್ರ ಭೂಮಿ ಇದ್ದರೆ ಭೂ ಒಡೆತನ ಎನ್ನುವರು','ಮಹಿಳೆಯರಿಗೆ ಭೂ ಒಡೆತನದ ಅವಶ್ಯಕತೆ ಇಲ್ಲ, ನಮಗೆ ಹೊಟ್ಟೆ ತುಂಬಾ ಊಟ ಸಿಕ್ಕರೆ ಸಾಕು. ಹೊಲ, ಗದ್ದೆಯ ವ್ಯವಹಾರದ ಬಗ್ಗೆ ನಾವು ಹೆಣ್ಣು ಮಕ್ಕಳು ಯಾಕೆ ತಲೆಕೆಡಿಸಿಕೊಳ್ಳಬೇಕು.' ಎಂಬ ಹೇಳಿಕೆಗಳು ಮಹಿಳೆಯರಿಗಿರುವ ತಿಳುವಳಿಕೆಯನ್ನು, ದೂರದೃಷ್ಟಿಯನ್ನು ಅನಾವರಣ ಮಾಡುತ್ತದೆ. ಅನೇಕ ಹೇಳಿಕೆಗಳ ಹಿಂದೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯ ನಂಬಿಕೆ, ಸಂಪ್ರದಾಯಗಳ ಪ್ರಭಾವವಿರುವುದು ಕಂಡುಬರುತ್ತದೆ. ಕೇವಲ ಸರಕಾರದಿಂದ ಮಹಿಳೆಯರ ಹೆಸರಲ್ಲಿ ರಿಯಾಯಿತಿ ಮೂಲಕ ಸೌಲಭ್ಯ ಪಡೆಯುವುದಕ್ಕಾಗಿಯೇ ಮಹಿಳೆಯರನ್ನು ಮುಂದಿಟ್ಟುಕೊಂಡು ಹೋಗಿರುವುದನ್ನು ಗಮನಿಸಬೇಕು.

ಗುಲಬರ್ಗಾ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಪ್ರಮುಖ ಜಿಲ್ಲೆಯಾದರೂ ಶಿಕ್ಷಣದಲ್ಲಿ, ಮೂಲ ಸೌಕರ್ಯ ಅಭಿವೃದ್ಧಿಯಲ್ಲಿ ತೀರಾ ಹಿಂದುಳಿದಿದೆ. ಸರಕಾರದ ಅನುದಾನಗಳೆಲ್ಲ ಅಭಿವೃದ್ಧಿ ಕಾರ್ಯಕ್ಕಾಗಿ ವಿನಿಯೋಗವಾಗುತ್ತಿಲ್ಲ ಎಂಬುದು ಪ್ರಮುಖವಾದ ಅಂಶ. ಶಿಕ್ಷಣದಿಂದ ವಂಚಿತರಾದ ಜಿಲ್ಲೆಯ ಮಹಿಳೆಯರಿಗೆ ಸಹಜವಾಗಿಯೇ ಕಾಯ್ದೆ ಕಾನೂನುಗಳ ಮಾಹಿತಿ ಪಡೆಯಲು ಸಾಧ್ಯವಾಗಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಮೂಲ ಸೌಕರ್ಯದ ಕೊರತೆಯಿಂದ ಮಹಿಳೆಯರಾದಿಯಾಗಿ ಬಡತನ ಸ್ಥಿತಿಯಲ್ಲಿ ಜೀವನ ಸಾಗಿಸುತ್ತಿರುವುದನ್ನು ಕಾಣಬಹುದು.

ಓರ್ವ ಮಹಿಳೆಯು ಕೌಟುಂಬಿಕವಾಗಿ, ಸಾಮಾಜಿಕವಾಗಿ ಪ್ರಬಲಳಾಗಬೇಕಾದರೆ ಆಸ್ತಿಯಲ್ಲಿ ಪಾಲು ಪಡೆಯುವುದು ತುಂಬಾ ಅವಶ್ಯಕವಾಗಿದೆ. ಭೂ ಒಡೆತನ ಹೊಂದುವುದು ಎಷ್ಟು ಅವಶ್ಯಕವೋ ಅದರ ಮೇಲೆ ನಿಯಂತ್ರಣ ಹೊಂದುವುದು ಕೂಡ ಅಷ್ಟೇ ಅವಶ್ಯಕವಾಗಿದೆ. ಇದರಿಂದ ಮಹಿಳೆಯರ ಕುಟುಂಬದ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವುದರಲ್ಲಿ ಎರಡು ಮಾತಿಲ್ಲ. ಆ ಮೂಲಕ ಕುಟುಂಬ ಸುಖೀ ಜೀವನವನ್ನು ಕಾಣಲು ಸಾಧ್ಯ. ಪುರುಷರು ಕುಟುಂಬದ ಆದಾಯವನ್ನು ತಮ್ಮ ದುಶ್ಚಟಗಳಿಗೆ ಪೋಲುಮಾಡಿದರೆ ಮಹಿಳೆಯರು ಕುಟುಂಬದ ನಿರ್ವಹಣೆಗಾಗಿಯೇ ಮೀಸಲಿಡುತ್ತಾರೆ.

ಜಿಲ್ಲೆಯ ಎಲ್ಲಾ ತಾಲೂಕು ಕೇಂದ್ರಗಳಲ್ಲಿ ಮಹಿಳೆಯರಿಗಾಗಿ ಕಾನೂನು ಕಾಯ್ದೆಗಳ ಮಾಹಿತಿ ಕೇಂದ್ರಗಳನ್ನು ತೆರೆದು ಹಳ್ಳಿಗಳ ಮಹಿಳೆಯರಿಗೆ ತಲುಪಿಸುವಂತೆ ಮಾಡಬೇಕು. ಮಾಹಿತಿ ಕೇಂದ್ರಗಳಲ್ಲಿ ಮಹಿಳಾ ಕಾರ್ಯಕರ್ತರನ್ನು ನೇಮಿಸಿದರೆ ಮಹಿಳೆಯರ ದುಗುಡ ದುಮ್ಮಾನಗಳ ಬಗ್ಗೆ ಹೆಚ್ಚಿನ ಮುತುವರ್ಜಿಯಿಂದ ಕೆಲಸ ಮಾಡಲು ಸಾಧ್ಯವಾಗುತ್ತದೆ.

* * *

## ಸಮಾರೋಪ

ಪ್ರಸ್ತುತ ಅಧ್ಯಯನವು ಕೃಷಿ ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡು ರಚನೆಗೊಂಡಿದೆ. ಯಾವುದೇ ಸಮಾಜದಲ್ಲಿ ಅಭಿವೃದ್ಧಿಯಾಗಿದೆ ಎನ್ನುವುದಕ್ಕೆ ಪ್ರಮುಖ ಮಾನದಂಡವೆಂದರೆ ಅಲ್ಲಿನ ಮಹಿಳೆಯರ ಸ್ಥಾನಮಾನ. ಸಮಾಜದಲ್ಲಿ ಒಟ್ಟು ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಆ ಸಮಾಜದ ಅಮೂಲ್ಯ ಮಾನವ ಸಂಪನ್ಮೂಲ. ಆದರೆ ಶತಮಾನಗಳಿಂದಲೂ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರು ಹಲವು ಬಗೆಯಲ್ಲಿ ಅಂಚಿಗೆ ಸರಿಯಲ್ಪಡುತ್ತಲೇ ಬಂದಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯ. ಅಲೆಮಾರಿ ಹಂತದಿಂದ ಕುಟುಂಬ ವ್ಯವಸ್ಥೆಗೆ ಬಂದಾಗ ಕುಟುಂಬದಲ್ಲಿ ಪುರುಷನ ಪ್ರಾಬಲ್ಯ ಹೆಚ್ಚಾಯಿತು. ಅದರ ಪರಿಣಾಮವಾಗಿ ಹೆಣ್ಣು ತನ್ನ ಮನೆಯಲ್ಲಿಯೇ ಬಂದಿಯಾಗಿ ಮೂಲೆಗೊತ್ತಲ್ಪಟ್ಟಳು. ಮಕ್ಕಳ ವಂಶವನ್ನು ಪುರುಷನ ಮೂಲಕ ನಿರ್ಧರಿಸುವ ಪದ್ಧತಿ ಕಾಲಕ್ರಮೇಣ ಜಾರಿಗೆ ಬಂದು ಪುರುಷ ತನ್ನ ಮಕ್ಕಳು ತನ್ನವೇ ಎಂದು ಖಚಿತಮಾಡಿಕೊಳ್ಳಲು ಹೆಂಡತಿಯ ಲೈಂಗಿಕ ಸ್ವಾತಂತ್ರ್ಯವನ್ನು ನಿರ್ಬಂಧಗೊಳಿಸಿದನು. ಅದರ ಸಲುವಾಗಿ ಗಂಡನ ಬಗ್ಗೆ ಹೆಣ್ಣಿಗಿರುವ ಏಕನಿಷ್ಠೆಯನ್ನು 'ಪಾತಿವ್ರತ್ಯ'ವೆಂದು ಹೆಸರಿಸುವ ಮೂಲಕ ಆದರ್ಶೀಕರಿಸಲಾಯಿತು. ಅದು ಮುಂದುವರೆಯುತ್ತಲೇ ಬಂದು ಇಂದಿಗೂ ವ್ಯವಸ್ಥೆಯಡಿಯಲ್ಲಿ ಅದೊಂದು 'ಅಸ್ತ್ರ'ಎಂಬಂತಾಯಿತು. ಹೀಗೆ ವೈಧವ್ಯ, ಸಹಗಮನ ಇತ್ಯಾದಿ ಸಂಪ್ರದಾಯ ಪದ್ಧತಿಗಳನ್ನು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜಾರಿಗೆ ತರಲಾಗಿದೆ. ಜೊತೆಗೆ ಯಾವುದೇ ರೀತಿಯ ಅಧಿಕಾರಗಳನ್ನು ಆಕೆ ಪಡೆಯದಂತೆ ನಿರ್ಬಂಧಿಸಲಾಯಿತು.

ಪ್ರಸ್ತುತ 'ಭೂ ಒಡೆತನ ಮತ್ತು ಮಹಿಳೆ' ಎಂಬ ಶೀರ್ಷಿಕೆಯ ಅಧ್ಯಯನ ಗುಲಬರ್ಗಾ ಜಿಲ್ಲೆಯ ಮಹಿಳೆಯರ ಭೂ ಒಡೆತನ ಸ್ಥಿತಿಗತಿಗಳ ಕುರಿತದ್ದಾಗಿದೆ. ರಾಜ್ಯದಲ್ಲಿಯೇ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾದ ಗುಲಬರ್ಗಾ ಜಿಲ್ಲೆಯಲ್ಲಿ ಭೂಮಿಯ ಒಡೆತನ, ನಿಯಂತ್ರಣ, ನಿರ್ವಹಣೆಯನ್ನು ಮಹಿಳೆಯರು ಎಷ್ಟರಮಟ್ಟಿಗೆ ಪಡೆದುಕೊಂಡಿದ್ದಾರೆ ಎಂಬುದರ ಬಗ್ಗೆ ಈ ಅಧ್ಯಯನ ಬೆಳಕು ಚೆಲ್ಲುತ್ತದೆ. ಅಲ್ಲದೆ ಸಂವಿಧಾನಬದ್ಧವಾಗಿ ಮಹಿಳೆಯರಿಗೆ ಆಸ್ತಿಯಲ್ಲಿ ಮತ್ತು ಕೃಷಿ ಭೂಮಿಯಲ್ಲಿ ಸಮಪಾಲು ಪಡೆಯುವ ಹಕ್ಕಿದ್ದಾಗಲೂ ಮಹಿಳೆಯರ ಬದುಕಿನಲ್ಲಾಗಲಿ, ಅವರ ಸ್ಥಿತಿಗಳಲ್ಲಾಗಲಿ ಅಂತಹದ್ದೇನು ವಿಶೇಷವಾದ ಬದಲಾವಣೆಯಾಗಿಲ್ಲ ಎನ್ನುವ ಪ್ರಶ್ನೆ

ಪ್ರಶ್ನೆಯಾಗಿಯೇ ಉಳಿದಿದೆ. ಕೃಷಿ ಭೂಮಿಯ ಒಡೆತನ ಎಷ್ಟರ ಮಟ್ಟಿಗೆ ಮಹಿಳೆಯರಿಗೆ ದಕ್ಕಿದೆ ? ಅದರ ನಿಯಂತ್ರಣ ಮತ್ತು ನಿರ್ವಹಣೆಯ ಹಕ್ಕನ್ನು ಮಹಿಳೆಯರು ಪಡೆದಿರುವರೇ? ಕೃಷಿ ಕ್ಷೇತ್ರದಲ್ಲಿ ಮಹಿಳೆಯರ ಸ್ಥಾನಮಾನವೇನು? ಕೃಷಿಯಲ್ಲಿ ಅವರ ಪಾಲುದಾರಿಕೆ ಯಾವ ಬಗೆಯದು? ಎನ್ನುವ ಅಂಶಗಳನ್ನು ತಿಳಿಯಲು ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಸರಕಾರದ ಬಹುತೇಕ ಯೋಜನೆಗಳ ಬಗ್ಗೆ ಯಾವುದೇ ರೀತಿಯ ಮಾಹಿತಿಗಳು ಗ್ರಾಮೀಣ ಮಹಿಳೆಯರಿಗೆ ತಲುಪುತ್ತಿಲ್ಲ. ಇಪ್ಪತ್ತೊಂದನೆಯ ಶತಮಾನದಲ್ಲಿಯೂ ನೂರಾರು ಮೂಢನಂಬಿಕೆಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ತೊಳಲಾಡುವಂತೆ ಸಮಾಜದಲ್ಲಿ ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿರುವುದು ಕಂಡುಬರುತ್ತದೆ. ಹಗಲು ರಾತ್ರಿ ಕೃಷಿ ಭೂಮಿಯ ಜೊತೆ ಸಂಪರ್ಕವಿರಿಸಿಕೊಂಡ ಸ್ತ್ರೀಯರಿಗೆ ಆ ಭೂಮಿಯ ಒಡೆತನ ದೊರೆಯದೆ ಪುರುಷರ ಪಾಲಾಗಿದೆ. ಕೃಷಿರಂಗಕ್ಕೆ ಮಹಿಳೆಯರ ಕೊಡುಗೆ ಅಪರಿಮಿತ, ದೇಶಕ್ಕೆ ಕೃಷಿ ಬೆನ್ನೆಲುಬಾದರೆ ಕೃಷಿಗೆ ಮಹಿಳೆಯರೇ ಬೆನ್ನೆಲುಬು. ಕೃಷಿಯಲ್ಲಿ ದಿನವಿಡೀ ಕೆಲಸ ಮಾಡಿದರೂ ಮಹಿಳೆಯರು ಭೂ ಒಡೆತನ ಹೊಂದುವಾಗ ಹೇಗೆ ನಿರ್ಲಕ್ಷ್ಯಕ್ಕೊಳಗಾಗುತ್ತಿದ್ದಾರೆ? ಈ ರೀತಿಯ ಹತ್ತು ಹಲವು ಸಾಮಾಜಿಕ ವಾಸ್ತವಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅರ್ಥೈಸುವ ಸಣ್ಣ ಪ್ರಯತ್ನವನ್ನು ಮಾಡಲಾಗಿದೆ.

ಪ್ರಸ್ತುತ ಅಧ್ಯಯನವು ಒಟ್ಟು ಒಂಬತ್ತು ಅಧ್ಯಾಯಗಳನ್ನು ಒಳಗೊಂಡಿದೆ. ಅಧ್ಯಯನವನ್ನು ಪ್ರಧಾನವಾಗಿ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಪ್ರಾಥಮಿಕ ಮಾಹಿತಿಗಳ ಆಧಾರದ ಮೇಲೆ ಕೈಗೊಳ್ಳಲಾಗಿದೆ. ಅಲ್ಲದೆ ಅಧ್ಯಯನಕ್ಕೆ ವಿವಿಧ ಮೂಲಗಳಿಂದ ಪಡೆದ ಆನುಷಂಗಿಕ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಈ ಅಧ್ಯಯನವು ಪ್ರಮುಖವಾಗಿ ಕ್ಷೇತ್ರಕಾರ್ಯ ಮತ್ತು ಅಂಕಿ-ಅಂಶಗಳನ್ನು ಆಧರಿಸಿದೆ. ಒಟ್ಟಾರೆಯಾಗಿ ಮಹಿಳಾ ದೃಷ್ಟಿಕೋನದಿಂದ ಮಹಿಳಾ ಭೂ ಒಡೆತನದ ಸ್ಥಿತಿಗತಿಯನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಅಧ್ಯಯನವು ಮೊದಲು ಪ್ರಸ್ತಾವನೆಯಿಂದ ಪ್ರಾರಂಭವಾಗಿದ್ದು, ನಂತರ ಅಧ್ಯನಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿದೆ. ಹಾಗೆಯೇ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ ಹಾಗೂ ಅಧ್ಯಯನದ ಮಹತ್ವವನ್ನು ಸ್ಪಷ್ಟಪಡಿಸಲಾಗಿದೆ.

ಅಧ್ಯಾಯ ಎರಡು 'ಮಹಿಳೆ, ಭೂಮಿ, ಆಸ್ತಿ ಒಡೆತನ ಕುರಿತ ನಿರ್ವಚನ' ವನ್ನು ಒಳಗೊಂಡಿದೆ. ಮಹಿಳೆಯೇ 'ಭೂಮಿ' ಮತ್ತು 'ಆಸ್ತಿ' ಯಾಗಿರುವುದರಿಂದ ಆಕೆಗೆ ಭೂಮಿಯಂಥ ಆಸ್ತಿ ಏತಕ್ಕಾಗಿ ಎನ್ನುವ ಮನೋಭಾವನೆ ಸಮಾಜ ವ್ಯವಸ್ಥೆಯಲ್ಲಿ ಬೇರೂರಿರುವುದರಿಂದ ಸ್ಮೃತಿಗಳ ಕಾಲದಿಂದಲೂ ಮಹಿಳೆಯರಿಗೆ ಆಸ್ತಿಹಕ್ಕಿನಿಂದ ವಂಚಿಸಿ ಕೇವಲ 'ಸ್ತ್ರೀಧನ'ದ ಮೇಲೆ ಮಾತ್ರ ಅಧಿಕಾರ ಹೊಂದುವಂತೆ ಮಾಡಲಾಗಿದೆ. ಸ್ಥಿರಾಸ್ತಿಯನ್ನು ಪುರುಷರಿಂದ ಪುರುಷರಿಗೆ ವರ್ಗಾಯಿಸಬೇಕೆಂಬ ಕಾರಣದಿಂದ ಗಂಡು ಸಂತಾನಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಕೆಲವೇ ಕೆಲವು ಆದಿವಾಸಿ ಪಂಗಡಗಳನ್ನು ಹೊರತುಪಡಿಸಿ ಇತರೆ ಆದಿವಾಸಿ ಪಂಗಡಗಳೂ ಕೂಡ ಮಹಿಳೆಯನ್ನು ಚರಸ್ವತ್ತಿಗೆ ಹೋಲಿಸಿ ಅವಳ ಮೇಲೆ ಒಡೆತನವನ್ನು ಹೊಂದಿರುವುದು ಕಂಡುಬರುತ್ತದೆ. ಜನಪದರಲ್ಲಿಯೂ ಕೂಡ ಗಂಡುಸಂತತಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಅಲ್ಲದೆ ಆಸ್ತಿಯ ಒಡೆತನ ಪುರುಷನೆ ಹೊಂದಬೇಕೆಂಬ ನಂಬಿಕೆಯೂ ಅವರಲ್ಲಿದೆ. ''ಮಹಿಳೆಯರಿಗೆ ಸ್ವತಂತ್ರವಾದ ಭೂ ಹಕ್ಕು ಇರುವುದರಿಂದ ಬಡತನದ ಗಂಡಾಂತರವನ್ನು ತಪ್ಪಿಸುವುದರ ಜೊತೆಗೆ ಪುರುಷರ ಅಧೀನಕ್ಕೆ ಒಳಪಡದ ಸ್ಥಿತಿ ಉಂಟು ಮಾಡುತ್ತದೆ.'' ಎಂಬ ಬಿನಾ ಅಗರವಾಲ್ ಅವರ ಹೇಳಿಕೆಯಂತೆ ಭೂ ಒಡೆತನದ ಮೂಲಕ ಮಹಿಳೆಯು ಆರ್ಥಿಕವಾಗಿ, ಸಾಮಾಜಿಕವಾಗಿ ಸ್ವತಂತ್ರಳಾಗುತ್ತಾಳೆ.

'ಮಹಿಳೆ : ಭೂ ಒಡೆತನ ಮತ್ತು ಕಾನೂನು' ಎಂಬ ಮೂರನೆಯ ಅಧ್ಯಾಯದಲ್ಲಿ ಮಹಿಳೆಗೆ ನೀಡಿದ ಆಸ್ತಿ ಹಕ್ಕಿನ ಕಾಯ್ದೆ-ಕಾನೂನುಗಳ ಕುರಿತ ವಿಶ್ಲೇಷಣೆಯ ಜೊತೆಗೆ ಕೃಷಿ ಭೂಮಿಗೆ ಸಂಬಂಧಿಸಿದ ಕಾಯ್ದೆಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ವಸಾಹತು ಮತ್ತು ವಸಾಹತೋತ್ತರ ಕಾಲಘಟ್ಟಗಳಲ್ಲಿ ಮಹಿಳೆಯರ ಆಸ್ತಿಹಕ್ಕುಗಳಿಗೆ ಸಂಬಂಧಿಸಿದಂತೆ ಅನೇಕ ಕಾಯ್ದೆ-ಕಾನೂನುಗಳು ಜಾರಿಗೆ ಬಂದಿವೆ. ಬಹುತೇಕ ಕಾಯ್ದೆ-ಕಾನೂನುಗಳನ್ನು ರಚಿಸುವಾಗ ಕೇಂದ್ರ ಸರ್ಕಾರವು ಕೃಷಿ ಭೂಮಿಯ ಹಕ್ಕುಗಳಿಗೆ ಸಂಬಂಧಿಸಿದ ಅಂಶಗಳನ್ನು ರಾಜ್ಯಸರ್ಕಾರಕ್ಕೆ ಒಪ್ಪಿಸಿತು. ಭೂ ಸುಧಾರಣೆ ಕಾಯ್ದೆ ಮೂಲಕ ಸರ್ಕಾರವು ರೈತರಿಗೆ ಭೂಮಿಯನ್ನು ಹಂಚಿತಾದರೂ ನಮ್ಮಲ್ಲಿ ಪುರುಷ ಪ್ರಧಾನ ಕುಟುಂಬಗಳೇ ಹೆಚ್ಚಾಗಿ ಇರುವುದರಿಂದ ಹಂಚಿದ ಭೂಮಿ ಪುರುಷರಿಗೆ ಸೇರಿತು. ಆ ಮೂಲಕ ಪುರುಷರೇ ಭೂ ಒಡೆತನದ ಹಕ್ಕುಳ್ಳವರಾದರು. ೧೯೫೬ರ ಹಿಂದೂ ಉತ್ತರಾಧಿಕಾರ ಕಾಯಿದೆಗೆ ಕೇಂದ್ರ ಸರ್ಕಾರವು ೨೦೦೫ರಲ್ಲಿ ತಿದ್ದುಪಡಿ ಮಾಡುವ ಮೂಲಕ ಕೃಷಿ ಭೂಮಿಯನ್ನು ಪರಿಗಣಿಸಿ ಮಹಿಳೆಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಮತ್ತು ಕೃಷಿ ಭೂಮಿಯಲ್ಲಿ ಪುರುಷನಂತೆ ಸಮಪಾಲು ಹೊಂದುವಂತೆ ಮಾಡಿದೆ. ಇದುವರೆಗೆ ಮಹಿಳೆಯರಿಗೆ ಆಸ್ತಿಹಕ್ಕು ಹಾಗೂ ಕೃಷಿ ಭೂಮಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವಾಗಲೀ, ರಾಜ್ಯಸರ್ಕಾರವಾಗಲೀ ಜಾರಿಗೆ ತಂದಂಥ ಕಾಯಿದೆ-ಕಾನೂನುಗಳು ಪುರುಷ ಚಿಂತನೆಗಳಿಂದಲೇ ರಚಿತವಾಗಿವೆ. ಅದರಿಂದ ಸ್ತ್ರೀಯರ ಬದಲು ಪುರುಷರಿಗೆ ಹೆಚ್ಚು ಅನುಕೂಲವಾಗಿರುವುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

'ಭೂ ಒಡೆತನ : ಕೆಲ ಪ್ರಕರಣಗಳು' ಎಂಬ ನಾಲ್ಕನೇ ಅಧ್ಯಾಯದಲ್ಲಿ ಸಂವಿಧಾನ ಹಾಗೂ ಆನಂತರದಲ್ಲಿ ಜಾರಿಗೆ ಬಂದಂಥ ಆಸ್ತಿಹಕ್ಕು ಕಾಯ್ದೆ ಮತ್ತು ಕೃಷಿ ಭೂಮಿಯ ಒಡೆತನದ ಹಕ್ಕಿನ ಕಾಯ್ದೆ ಯಾವ ರೀತಿಯಲ್ಲಿ ಗುಲಬರ್ಗಾ ಜಿಲ್ಲೆಯ ಮಹಿಳೆಯರಿಗೆ ಪ್ರಯೋಜನವಾಗಿವೆ ಎಂಬುದನ್ನು ಪ್ರಕರಣಗಳ ಅಧ್ಯಯನದ ಮುಖಾಂತರ ತಿಳಿಯಲಾಗಿದೆ. ಜಿಲ್ಲೆಯ ಗ್ರಾಮೀಣ ಪ್ರದೇಶದ ಮಹಿಳೆಯರು ತಮ್ಮ ಆಸ್ತಿಹಕ್ಕುಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯ ಮತ್ತು ಊರಿನ ಪಂಚಾಯತಿಯ ಮೂಲಕ ಬಗೆಹರಿಸಿಕೊಂಡ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ವಾದಿ, ಪ್ರತಿವಾದಿಗಳಿಂದ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ. ಆಸ್ತಿಹಕ್ಕಿನ ಕಾಯ್ದೆ-ಕಾನೂನುಗಳಿದ್ದಾಗ್ಯೂ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಅವುಗಳ ಸದುಪಯೋಗ ಪಡಿಸಿಕೊಳ್ಳುವಲ್ಲಿ ಯಾವ ರೀತಿಯ ಕಷ್ಟನಷ್ಟಗಳು ಉಂಟಾಗುತ್ತವೆ ಎಂಬುದನ್ನು ಪ್ರಕರಣಗಳ ಮೂಲಕ ತಿಳಿಯಲು ಪ್ರಯತ್ನಿಸಲಾಗಿದೆ. ನ್ಯಾಯಾಲಯಕ್ಕೆ ಅಥವಾ ಪಂಚಾಯತಿಗೆ ಸಂಬಂಧಿಸಿದ ಪ್ರಕರಣಗಳಲ್ಲಿ ಮಹಿಳೆಯರು ಪುರುಷರ ಸಹಾಯವನ್ನು ಅವಲಂಬಿಸುವಂತೆ ಸಮಾಜ ವ್ಯವಸ್ಥೆ ರೂಪಿಸಿರುವುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಯಾದ ಗುಲಬರ್ಗಾ ಜಿಲ್ಲೆಯಲ್ಲಿ ಬಹುಸಂಖ್ಯಾತ ಮಹಿಳೆಯರು ಅನಕ್ಷರಸ್ಥರಾಗಿದ್ದು, ಯಾವುದೇ ರೀತಿಯ ಕಾನೂನು ಮಾಹಿತಿಗಳನ್ನು ತಿಳಿದುಕೊಳ್ಳುವಲ್ಲಿ ಹಿಂದುಳಿದಿದ್ದಾರೆ. ಜೊತೆಗೆ ಇಂದಿಗೂ ಸಮಾಜದಲ್ಲಿ ಅನೇಕ ಮೂಢನಂಬಿಕೆ, ಆಚರಣೆಗಳು ರೂಢಿಯಲ್ಲಿವೆ.

ಯಾವುದೇ ಕಾನೂನು-ಕಾಯ್ದೆಗಳು ಜಾರಿಗೆ ಬಂದರೂ ಕಟ್ಟಕಡೆಯ ಮಹಿಳೆಗೆ ಅದರ ಉಪಯೋಗವಾಗುತ್ತಿಲ್ಲ. ಗಂಡು ಮಕ್ಕಳಿಲ್ಲದಿದ್ದರೆ ಮಾತ್ರ ಹೆಣ್ಣು ಮಕ್ಕಳಿಗೆ ತಂದೆಯ ಆಸ್ತಿಯಲ್ಲಿ ಪಾಲು ಸಿಗುತ್ತದೆ ಎಂದು ಈಗಲೂ ಬಹುತೇಕ ಮಹಿಳೆಯರು ನಂಬಿರುವರು. ಭಾವನಾತ್ಮಕ ಸಂಬಂಧಗಳು ಮಹಿಳೆಯರನ್ನು ನ್ಯಾಯಾಲಯದ,

ಪಂಚಾಯತಿಯ ಮೆಟ್ಟಿಲೇರಲು ಅಡ್ಡಗೋಡೆಯಾಗಿ ಪರಿಣಮಿಸಿವೆ. ಗಂಡು ಮಕ್ಕಳಿಲ್ಲದ ಸಂದರ್ಭದಲ್ಲಿ, ಗಂಡ ತೀರಿದ ಸಂದರ್ಭದಲ್ಲಿ, ಮಹಿಳೆ ಅಂಗವಿಕಲತೆಯಿಂದ ಕೂಡಿದಾಗ ವರದಕ್ಷಿಣೆಯ ರೂಪದಲ್ಲಿ, ಸರ್ಕಾರದಿಂದ ಸಾಲ ಪಡೆಯಲು ಮತ್ತು ಪತಿ ಸರ್ಕಾರಿ ನೌಕರನಾಗಿರುವಂಥ ಸಂದರ್ಭದಲ್ಲಿ ಮಾತ್ರ ಮಹಿಳೆ ಆಸ್ತಿಹಕ್ಕನ್ನು ಪಡೆಯುತ್ತಿದ್ದಾಳೆಯೇ ಹೊರತು 'ನಮಗೂ ಭೂ ಒಡೆತನ ಹೊಂದುವ ಹಕ್ಕಿದೆ' ಎಂದು ಜಿಲ್ಲೆಯ ಬಹುತೇಕ ಮಹಿಳೆಯರು ತಿಳಿದಿಲ್ಲ. ನ್ಯಾಯಾಲಯಗಳಲ್ಲಿ ಅನೇಕ ಬಾರಿ ವಾದಿ-ಪ್ರತಿವಾದಿಗಳು ಮರಣ ಹೊಂದಿದರೂ ಪ್ರಕರಣಗಳ ತೀರ್ಪು ಹೊರಬೀಳುವುದಿಲ್ಲ. ಈ ರೀತಿಯ ವಿಳಂಬ ಮತ್ತು ಬಡತನದ ಪರಿಸ್ಥಿತಿ ಅನೇಕ ಮಹಿಳೆಯರನ್ನು ನ್ಯಾಯಾಲಯಕ್ಕೆ ಹೋಗದಂತೆ ತಡೆಯುತ್ತವೆ. ಸಮಾಜದಲ್ಲಿರುವ ಸಂಪ್ರದಾಯ, ಮಾನ-ಮರ್ಯಾದೆಯ ವಿಷಯಗಳಿಗೆ ಅಂಟಿಕೊಂಡು ಅನೇಕ ಮಹಿಳೆಯರು ತಮಗಾದ ಅನ್ಯಾಯಗಳನ್ನು ಸಹಿಸಿಕೊಂಡು ದಿನದೂಡುತ್ತಿರುವುದು ಕಂಡುಬರುತ್ತದೆ.

'ಪಂಚವಾರ್ಷಿಕ ಯೋಜನೆಗಳು : ಭೂ ಒಡೆತನ ಮತ್ತು ಮಹಿಳೆ' ಎಂಬ ಐದನೆಯ ಅಧ್ಯಾಯದಲ್ಲಿ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರ ಅಭಿವೃದ್ಧಿಗೆ ಮತ್ತು ಮಹಿಳಾ ಭೂ ಒಡೆತನಕ್ಕೆ ನೀಡಿದ ಪ್ರಾನಿಧ್ಯದ ಬಗ್ಗೆ ತಿಳಿಯಲಾಗಿದೆ. ದೇಶದ ಅಭಿವೃದ್ಧಿಗೆ ಪೂರಕವಾಗಿ ಜಾರಿಗೆ ಬಂದ ಪಂಚವಾರ್ಷಿಕ ಯೋಜನೆಗಳು ಮಹಿಳಾ ಅಭಿವೃದ್ಧಿಗೆ ಯಾವ ರೀತಿ ಪೂರಕವಾಗಿವೆ ಮತ್ತು ಯಾವ ಯಾವ ಪಂಚವಾರ್ಷಿಕ ಯೋಜನೆಗಳು ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದ ಕಾನೂನು, ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಕ್ಕೆ ತಂದಿರುವುದರ ಬಗೆಗೆ ಈ ಅಧ್ಯಾಯದಲ್ಲಿ ಗಮನಿಸಲಾಗಿದೆ. ಅಭಿವೃದ್ಧಿ ಸಿದ್ಧಾಂತ ಅಧ್ಯಯನಗಳನ್ನು ಆಧರಿಸಿ ರೂಪಿಸಲಾಗಿರುವ ಯೋಜನೆಗಳು ಮಹಿಳೆಯರನ್ನು ಕೇವಲ ಅನುಕಂಪದ ಆಧಾರದಿಂದಲೇ ನೋಡಿವೆ. ಪ್ರತಿಯೊಂದು ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯರ ಅಭಿವೃದ್ಧಿಯನ್ನು ಬಯಸಿದರೂ ಭೂ ಒಡೆತನಕ್ಕೆ ಸಂಬಂಧಿಸಿದಂತೆ ಆರು, ಏಳು, ಎಂಟು ಮತ್ತು ಒಂಬತ್ತನೆ ಪಂಚವಾರ್ಷಿಕ ಯೋಜನೆಗಳಲ್ಲಿ ಮಾತ್ರ ಪ್ರಸ್ತಾಪಗೊಂಡಿದೆ. ಆರನೇ ಪಂಚವಾರ್ಷಿಕ ಯೋಜನೆಯಲ್ಲಿ ಭೂ ಒಡೆತನದ ಬಗ್ಗೆ ಕೊನೆಯ ವಿಷಯವಾಗಿ ಮಾತ್ರ ಪ್ರಸ್ತಾಪಗೊಂಡಿದೆ. ಎಂಟನೆಯ ಮತ್ತು ಒಂಬತ್ತನೆಯ ಪಂಚವಾರ್ಷಿಕ ಯೋಜನೆಗಳಲ್ಲಿ ಭೂ ಸುಧಾರಣ ನೀತಿಯ ಮೂಲಕ ಭೂಮಿಯ ಹಂಚಿಕೆ ಮಾಡಲಾಯಿತು. ಆದರೆ ಈ ಭೂ ಹಂಚಿಕೆಯ ಕಾರ್ಯಕ್ರಮದಿಂದ ಪುರುಷ ಕೇಂದ್ರಿತ ಕುಟುಂಬಗಳಿಗೆ ಮಾತ್ರ ಲಾಭವಾಗಿರುವುದನ್ನು ಗಮನಿಸಬೇಕು. ಕಾರಣ ಬಹುತೇಕ ಕುಟುಂಬಗಳಲ್ಲಿ ಪೂರ್ಣಪ್ರಮಾಣದ ಭೂ ಒಡೆತನ ಪುರುಷನ ಕೈಯಲ್ಲಿಯೇ ಇರುವುದನ್ನು ಕಾಣಬಹುದು.

ಆರನೆಯ ಅಧ್ಯಾಯ 'ರೈತ ಚಳುವಳಿಗಳು ಮತ್ತು ಮಹಿಳೆ' ಎಂಬ ಶೀರ್ಷಿಕೆಯದ್ದಾಗಿದೆ. ದೇಶ ಮತ್ತು ರಾಜ್ಯದ ಪ್ರಮುಖ ರೈತ ಚಳುವಳಿಗಳಲ್ಲಿ ಮಹಿಳೆಯರ ಪಾತ್ರವನ್ನು ಮತ್ತು ಈ ಚಳುವಳಿಯಿಂದ ಮಹಿಳೆಯರಿಗಾದ ಪ್ರಯೋಜನಗಳನ್ನು ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಮಹಾರಾಷ್ಟ್ರದ ವಾರ್ಲಿ ರೈತ ಚಳುವಳಿ, ಬಂಗಾಲದ ತೇಭಾಗ ರೈತ ಚಳುವಳಿ, ಹೈದ್ರಾಬಾದ ತೆಲಂಗಾಣ ರೈತ ಹೋರಾಟ ಮತ್ತು ಭೂದಾನ ಚಳುವಳಿ ಹೀಗೆ ದೇಶದ ಪ್ರಮುಖ ಚಳುವಳಿಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹಾಗೆಯೇ ರಾಜ್ಯದ ಪ್ರಮುಖ ರೈತ ಚಳುವಳಿಗಳಾದ ಕಾಗೋಡು ಸತ್ಯಾಗ್ರಹ, ಹೆಬ್ಬಳ್ಳಿ ಭೂ ಹೋರಾಟ, ದಲಿತ ಸಂಘರ್ಷ ಸಮಿತಿಯ ಭೂ

ಹೋರಾಟ, ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿ ಕಾರ್ಮಿಕರ ಸಂಘದ ರಾಯಚೂರು ಹೋರಾಟ, ಕರ್ನಾಟಕ ಪ್ರಾಂತ ರೈತ ಸಂಘದ ಚಳುವಳಿ ಮತ್ತು ಬಾಗೂರು-ನವಿಲೆ ರೈತ ಚಳುವಳಿಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಇದ್ದರೂ ಅವುಗಳು ಮಹಿಳಾ ಭೂ ಒಡೆತನದ ಕುರಿತು ಮಾತನಾಡಿವೆಯೇ ಎಂಬುದನ್ನು ನೋಡಲು ಪ್ರಯತ್ನಿಸಲಾಗಿದೆ. ಬಹುತೇಕ ರೈತ ಹೋರಾಟಗಳಲ್ಲಿ ಮಹಿಳೆಯರು ಭಾಗವಹಿಸಿದ್ದರೂ ಅವರು ಪ್ರಧಾನವಾಗಿ ಕಂಡುಬರದಿರುವುದಕ್ಕೆ ವ್ಯವಸ್ಥೆಯೇ ಕಾರಣ ಎಂದು ಹೇಳಬೇಕು. ಹೋರಾಟದಿಂದ ಪಡೆದ ಭೂಮಿಯನ್ನು ಹಂಚಿಕೊಳ್ಳುವ ಸಂದರ್ಭದಲ್ಲಿ ಪುರುಷ-ಪುರುಷರಲ್ಲಿಯೇ ಹಂಚಿಕೊಂಡರೇ ವಿನಃ ಮಹಿಳೆಯರಿಗೆ ದೊರೆಯಲಿಲ್ಲ. ರೈತ ಚಳುವಳಿಗಳ ಮೂಲಕ ಮಹಿಳೆಯರಿಗೆ ಕೆಲವೊಂದು ಸಣ್ಣ-ಪುಟ್ಟ ತೊಂದರೆಗಳನ್ನು ಬಗೆಹರಿದಿರುವುದನ್ನು ಬಿಟ್ಟರೆ, ಭೂ ಒಡೆತನದ ಹಕ್ಕು, ಆರ್ಥಿಕ ಸ್ವಾತಂತ್ರ್ಯದ ಹಕ್ಕು, ಸಮಾನತೆಯಂತಹ ಬದಲಾವಣೆಗಳನ್ನು ಕಾಣಲು ಸಾಧ್ಯವಾಗಿರುವುದನ್ನು ಅಧ್ಯಯನದಿಂದ ತಿಳುದುಕೊಳ್ಳಬಹುದು.

'ಭೂ ಒಡೆತನ ಮತ್ತು ಮಹಿಳೆ' ಎಂಬ ಏಳನೆಯ ಅಧ್ಯಾಯವು ಕೃಷಿ ಗಣತಿಯ ಅಂಕಿ-ಅಂಶಗಳ ಆಧಾರಿತ ವಿಶ್ಲೇಷಣೆಯನ್ನು ಒಳಗೊಂಡಿದೆ. ಅಧ್ಯಯನದ ವ್ಯಾಪ್ತಿಯಾದ ಗುಲಬರ್ಗಾ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ ಮತ್ತು ಭೌಗೋಳಿಕ ಲಕ್ಷಣಗಳನ್ನು ಕ್ವಚಿತ್ತಾಗಿ ನೀಡಲಾಗಿದೆ. ಅತಿಸಣ್ಣ, ಸಣ್ಣ, ಅರೆಮಧ್ಯಮ, ಮಧ್ಯಮ ಮತ್ತು ದೊಡ್ಡ ಭೂ ಹಿಡುವಳಿ ಹೀಗೆ ಐದು ತರಹದ ಭೂ ಹಿಡುವಳಿಗಳಲ್ಲಿ ಲಿಂಗವಾರು ಮತ್ತು ಜಾತಿವಾರು ಅಂಕಿ-ಅಂಶಗಳನ್ನು ನೀಡಲಾಗಿದೆ. ಜಿಲ್ಲೆಯ ಹತ್ತು ತಾಲೂಕುಗಳಲ್ಲಿನ ಭೂ ಹಿಡುವಳಿಯಲ್ಲಿ ಕಂಡುಬರುವ ಅಸಮಾನತೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟಾರೆ ಭೂ ಒಡೆತನದ ಪ್ರಮಾಣವನ್ನು ಗಮನಿಸಿದಾಗ ಮಹಿಳೆಯರಿಗಿಂತ ಪುರುಷರು ಅಧಿಕ ಪ್ರಮಾಣದಲ್ಲಿ ಭೂ ಒಡೆತನವನ್ನು ಹೊಂದಿದ್ದಾರೆ. ಭೂ ಒಡೆತನದ ಪ್ರಮಾಣವನ್ನು ಗಮನಿಸಿದಾಗ ಮಹಿಳೆಯರು ಶೇ. ೧೩.೫೨ರಷ್ಟು ಇದ್ದರೆ, ಪುರುಷರು ಶೇ. ೮೬.೪೮ರಷ್ಟು ಅಧಿಕ ಪ್ರಮಾಣದಲ್ಲಿ ಒಡೆತನದ ಸಂಖ್ಯೆಯನ್ನು ಹೊಂದಿರುವುದು ಕಂಡುಬರುತ್ತದೆ. ಹಾಗೆಯೇ ಒಡೆತನ ಹೊಂದಿರುವ ಭೂಮಿಯ ವಿಸ್ತೀರ್ಣದ ಪ್ರಮಾಣವನ್ನು ಗಮನಿಸಿದಾಗ ಮಹಿಳೆಯರ ಒಡೆತನದಲ್ಲಿ ಶೇ. ೧೧.೯೪ ಹೆಕ್ಟೇರುಗಳಷ್ಟು ಭೂಮಿ ಇದ್ದರೆ, ಪುರುಷರ ಅಧೀನದಲ್ಲಿ ಶೇ.೮೮.೦೬ ಹೆಕ್ಟೇರುಗಳಷ್ಟು ಭೂಮಿ ಅಧಿಕವಾಗಿದೆ. ಇಲ್ಲಿ ಮಹಿಳೆಯರು ಪುರುಷರಿಗಿಂತ ಭೂ ಒಡೆತನದ ಸಂಖ್ಯೆ ಮತ್ತು ಭೂಮಿಯ ವಿಸ್ತೀರ್ಣ ಹೊಂದುವಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಜಿಲ್ಲೆಯಲ್ಲಿ ಅತಿಸಣ್ಣ ಭೂ ಹಿಡುವಳಿಯ ಭೂಮಿಯ ಗಾತ್ರಕ್ಕಿಂತ ದೊಡ್ಡ ಭೂ ಹಿಡುವಳಿಯ ಭೂಮಿಯ ಗಾತ್ರ ಅಧಿಕವಾಗಿದೆ. ಕಾರಣ ಜಮೀನ್ದಾರಿ ಮತ್ತು ಪಾಳೆಗಾರಿಕೆ ವ್ಯವಸ್ಥೆ ಇನ್ನೂ ಮುಂದುವರೆಯುತ್ತಿರುವುದು. ಭೂಮಿಯ ಒಡೆತನದ ಸಂಖ್ಯೆಯನ್ನು ಗಮನಿಸಿದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗಿಂತ ಇತರರು ಅಧಿಕ ಸಂಖ್ಯೆಯಲ್ಲಿ ಒಡೆತನ ಹೊಂದಿರುವರು.

ಜಿಲ್ಲೆಯ ಐದು ತರಹದ ಭೂ ಹಿಡುವಳಿಗಳಲ್ಲಿ ಮಹಿಳೆಯರು ಅತಿ ಸಣ್ಣ ಭೂ ಹಿಡುವಳಿಯ ಒಡೆತನವನ್ನು ಅಧಿಕವಾಗಿ ಹೊಂದಿರುವರು. ಅದರ ಪ್ರಮಾಣ ಶೇ. ೧೪.೦೭ ರಷ್ಟಿದ್ದರೆ, ದೊಡ್ಡ ಭೂ ಹಿಡುವಳಿಯಲ್ಲಿ ಶೇ. ೧೨.೩೨ರಷ್ಟು ಮಾತ್ರ ಮಹಿಳೆಯರು ಒಡೆತನ ಹೊದಿದ್ದಾರೆ. ಮಹಿಳೆಯರು ಒಡೆತನ ಹೊಂದಿದವರಲ್ಲಿ ಜಾತಿವಾರು

ನೋಡಿದಾಗ ಐದು ತರಹದ ಭೂ ಹಿಡುವಳಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರ ಭೂ ಒಡೆತನದ ಸಂಖ್ಯೆಗಿಂತ ಇತರೆ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಭೂ ಒಡೆತನವನ್ನು ಹೊಂದಿರುವುದನ್ನು ಕಾಣಬಹುದು. ಖಾಸಗಿ ಸಂಪತ್ತಿನ ಮುಖ್ಯಭಾಗವಾದ ಚರ ಮತ್ತು ಸ್ಥಿರ ಆಸ್ತಿಗಳು ಬಹುಪಾಲು ಪುರುಷರ ಅಧಿಕಾರದಲ್ಲಿವೆ. ಜಿಲ್ಲೆಯಲ್ಲಿ ಜಮೀನ್ದಾರಿ ಪದ್ಧತಿ ಅಸ್ತಿತ್ವದಲ್ಲಿರುವುದರಿಂದ ಮಹಿಳೆಯರಿಗೆ ಅಧಿಕ ಪ್ರಮಾಣದಲ್ಲಿ ಭೂ ಒಡೆತನ ಹೊಂದಲು ಸಾಧ್ಯವಾಗಿಲ್ಲ. ಆಸ್ತಿ ಒಡೆತನ ಪುರುಷನೇ ಹೊಂದಬೇಕೆಂಬ ಮನೋಭಾವನೆ ಸಮಾಜ ವ್ಯವಸ್ಥೆಯಲ್ಲಿ ಬೇರೂರಿರುವುದರಿಂದ ಸಂವಿಧಾನ ಮಹಿಳೆಯರಿಗೆ ಭೂ ಒಡೆತನದ ಹಕ್ಕನ್ನು ಜಾರಿಗೆ ತಂದರೂ ಸಹ ಭೂ ಒಡೆತನ ಪಡೆಯಲು ಸಾಧ್ಯವಾಗುತ್ತಿಲ್ಲ ಎನ್ನುವುದನ್ನು ಗಮನಿಸಲಾಗಿದೆ.

ಅಧ್ಯಾಯ ಎಂಟು 'ಸಮಕಾಲೀನ ಸಂದರ್ಭ : ಭೂ ಒಡೆತನದ ಹಕ್ಕುದಾರಿಕೆ' ಈ ಅಧ್ಯಾಯದಲ್ಲಿ ಪ್ರಸ್ತುತ ಕಾಲಮಾನದಲ್ಲಿ ಜಿಲ್ಲೆಯ ಮಹಿಳೆಯರಲ್ಲಿ ಕಂಡುಬರುವ ಭೂ ಒಡೆತನದ ಬಗೆಗಿನ ಸಾಮಾಜಿಕ ಗ್ರಹಿಕೆಗಳು, ಮಹಿಳೆ ಭೂ ಒಡೆತನ ಪಡೆದ ಹಿನ್ನೆಲೆ, ಒಡೆತನ ಹೊಂದಿರುವ ಭೂಮಿಯ ಸ್ವರೂಪ, ಮಹಿಳೆ ಒಡೆತನ ಹೊಂದಿದ ಭೂಮಿಯ ನಿಯಂತ್ರಣ ಮತ್ತು ನಿರ್ವಹಣೆ ಹಾಗೂ ಆಸ್ತಿಗೆ ಸಂಬಂಧಿಸಿದ ಕಾನೂನಿನ ಅರಿವಿನ ಬಗ್ಗೆ ಮಹಿಳೆಯರ ಅಭಿಪ್ರಾಯಗಳನ್ನು ಅಂಕಿ-ಅಂಶಗಳಲ್ಲಿ ನೀಡಲಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಮಹಿಳೆಯರು ಭೂ ಒಡೆತನ ಹೊಂದಿದ್ದರೂ ಕೂಡ ಭೂಮಿಯ ಮೇಲೆ ನಿಯಂತ್ರಣ ಮತ್ತು ನಿರ್ವಹಣೆಯ ಜವಾಬ್ದಾರಿ ಹೊಂದಿರದೆ ಹೆಸರಿಗೆ ಮಾತ್ರ ಭೂ ಒಡೆತನ ಹೊಂದಿದ್ದಾರೆ.

ಗುಲಬರ್ಗಾ ಜಿಲ್ಲೆಯ ಬಹುತೇಕ ಮಹಿಳೆಯರಿಗೆ ಭೂ ಒಡೆತನದ ಹಕ್ಕು ಮತ್ತು ಆಸ್ತಿಗೆ ಸಂಬಂಧಿಸಿದಂತೆ ಕಾಯ್ದೆ, ಕಾನೂನುಗಳ ಮಾಹಿತಿ ಬಗ್ಗೆ ಅರಿವಿಲ್ಲದಿರುವುದು ಪ್ರಮುಖವಾಗಿ ಗಮನಿಸಬೇಕಾದ ಅಂಶ. ಶೇ. ೧೨ರಷ್ಟು ಮಹಿಳೆಯರು ಭೂ ಒಡೆತನ ಹೊಂದಿದ್ದರೂ ಶೇ. ೮೨ ರಷ್ಟು ಭೂಮಿಯ ಹಕ್ಕು ಪತ್ರ ಪುರುಷರಲ್ಲಿಯೇ ಇವೆ. ಮಹಿಳೆಯರು ಒಡೆತನ ಹೊಂದಿರುವ ಭೂಮಿಯ ಪ್ರಮಾಣವು ಕಡಿಮೆ ಇದೆ ಮತ್ತು ಪಡೆದಂತಹ ಭೂಮಿಯ ಗುಣಲಕ್ಷಣಗಳನ್ನು ಗಮನಿಸಿದರೆ ಬಂಜರು ಭೂಮಿಯು ಫಲವತ್ತಾದ ಭೂಮಿಗಿಂತ ಎರಡರಷ್ಟಿದೆ. ಅಲ್ಲದೆ ಮಹಿಳೆಯರು ಸ್ವಂತ/ ವೈಯಕ್ತಿಕ ಒಡೆತನಕ್ಕಿಂತ ಜಂಟಿ ಒಡೆತನ ಹೊಂದಿದವರೆ ಅಧಿಕ ಪ್ರಮಾಣದಲ್ಲಿದ್ದಾರೆ. ಮಹಿಳೆಯರು ಗಂಡು ಸಂತಾನವಿರದಿದ್ದಾಗ, ವರದಕ್ಷಿಣೆಯ ರೂಪದಲ್ಲಿ ಮಾತ್ರ ತವರು ಮನೆಯಿಂದ ಭೂ ಒಡೆತನ ಹೊಂದಿದ್ದರೆ, ಪತಿ ಸರ್ಕಾರಿ ನೌಕರನಿದ್ದರೆ, ಸರ್ಕಾರದಿಂದ ಕೃಷಿ ಸಾಲ ಪಡೆಯಲು ಪತಿಯ ಮನೆಯ ಭೂಮಿಯ ಒಡೆತನವನ್ನು ಹೊಂದಿರುವರು ಹೊರತಾಗಿ ಎರಡು ಮನೆಗಳಲ್ಲಿ ಅದು ತನ್ನ ಹಕ್ಕು ಎಂದು ಭೂ ಒಡೆತನ ಹೊಂದಿರದೆ ತಾರತಮ್ಯಕ್ಕೆ ಒಳಗಾಗಿರುವುದನ್ನು ಅಧ್ಯಯನದಿಂದ ತಿಳಿಯಲಾಗಿದೆ.

**ಸಲಹೆಗಳು**

* ಸ್ತ್ರೀಯು ಕೃಷಿಯ ಶೋಧಕಳು, ಆದರೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಡಿಯಲ್ಲಿ ಭೂ ಒಡೆತನವನ್ನು ಹೊಂದದೇ ನಗಣ್ಯಳಾಗಿರುವಳು. ಆರ್ಥಿಕ ಸ್ವಾಲಂಬಿಯಾಗಬೇಕಾದರೆ ಮಹಿಳೆಯು ಭೂ ಒಡೆತನ ಹೊಂದುವುದು ಅತ್ಯಗತ್ಯ. ಈ ನಿಟ್ಟಿನಲ್ಲಿ ಕಾಯ್ದೆ-ಕಾನೂನುಗಳು ಇನ್ನು ಹೆಚ್ಚಿನ ಕಟ್ಟುನಿಟ್ಟಿನಲ್ಲಿ ಕಾರ್ಯ ಪ್ರವೃತ್ತವಾಗಬೇಕು.

* ಮಹಿಳೆಯ ಬಗೆಗೆ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಈಗಿರುವ ಮನೋಭಾವನೆಗಳು ಬದಲಾಗದ ಹೊರತು ಕೃಷಿ ಭೂಮಿಯ ಒಡೆತನ ಹೊಂದಿದ ಮಹಿಳೆಯರ ಸ್ಥಾನಮಾನ ಬದಲಾಯಿಸಲು ಸಾಧ್ಯವಾಗದು.
* ಮಹಿಳೆಯರಿಗೆ ಭೂ ಒಡೆತನದ ಹಕ್ಕು ನೀಡಿದರೆ ಸಾಲದು, ಅದರ ಜೊತೆಗೆ ಭೂಮಿಯ ಮೇಲೆ ನಿಯಂತ್ರಣ, ನಿರ್ವಹಣೆ ಹೊಂದುವಂತಾಗಬೇಕು.
* ಪುರುಷರ ಅನುಕೂಲಕ್ಕೆ ತಕ್ಕಂತೆ ಮಹಿಳೆಯರ ಹೆಸರಿಗೆ ಭೂಮಿಯನ್ನು ಮಾಡದೇ, ನಿಜವಾಗಿಯೂ ಅವಳು ಆ ಭೂಮಿಯ ಮೇಲೆ ಹಕ್ಕುಳ್ಳವಳಾಗಬೇಕು.
* ಮಹಿಳಾ ಆಸ್ತಿಹಕ್ಕು ಕಾಯ್ದೆ, ಕಾನೂನುಗಳ ಬಗ್ಗೆ ಎಲ್ಲಾ ಮಹಿಳೆಯರು ಅರಿತುಕೊಂಡು ಅದರ ಸಂಪೂರ್ಣ ಉಪಯೋಗವನ್ನು ಪಡೆದುಕೊಳ್ಳುವಂತಾಗಬೇಕು.
* ರೈತ ತರಬೇತಿ ಕೇಂದ್ರಗಳಲ್ಲಿ ಮಹಿಳೆಯರಿಗೆ ಬೆಳೆಗಳ ಮಾಹಿತಿಯನ್ನು ನೀಡುವುದರ ಜೊತೆಗೆ ಮಹಿಳೆಯರಿಗೆ ಮಾರುಕಟ್ಟೆಯ ಜೊತೆ ಸಂಪರ್ಕ, ಬ್ಯಾಂಕಿನ ವ್ಯವಹಾರದ ಬಗ್ಗೆ ಮಾಹಿತಿಯನ್ನು ನೀಡಬೇಕು. ಆಗ ಮಹಿಳೆ ಒಡೆತನ ಜೊತೆಗೆ ನಿಯಂತ್ರಣ ಮತ್ತು ನಿರ್ವಹಣೆ ಹೊಂದಲು ಸಾಧ್ಯವಾಗುವುದು.
* ಜಿಲ್ಲಾಕೇಂದ್ರ ಮತ್ತು ತಾಲೂಕು ಕೇಂದ್ರಗಳಲ್ಲಿರುವ ಕಾನೂನು ಮಾಹಿತಿ ಘಟಕಗಳಿಂದ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಯಾವುದೇ ರೀತಿಯಲ್ಲಿ ಪ್ರಯೋಜನವಾಗುತ್ತಿಲ್ಲ. ಸರ್ಕಾರ ಇಲ್ಲವೆ ಖಾಸಗಿ ಸಂಸ್ಥೆಗಳು ಮಹಿಳಾ ಕಾರ್ಯಕರ್ತರನ್ನು ನೇಮಿಸಿ ಪ್ರತಿಯೊಂದು ಹಳ್ಳಿಗಳಿಗೆ ಅವರು ಭೇಟಿ ನೀಡಿ ಮಹಿಳೆಯರಿಗೆ ಕಾನೂನು ಮಾಹಿತಿಗಳನ್ನು ಒದಗಿಸುವಂತಾಗಬೇಕು.
* ಮಹಿಳಾ ಭೂ ಒಡೆತನಕ್ಕೆ/ಆಸ್ತಿಗೆ ಸಂಬಂಧಿಸಿದ ಪ್ರಕರಣಗಳನ್ನು ತ್ವರಿತ ನ್ಯಾಯಾಲಯದ ಮೂಲಕ ಬಗೆಹರಿಸಿಕೊಳ್ಳುವ ವ್ಯವಸ್ಥೆ ಮಾಡಬೇಕು.
* ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಜೀವಂತವಾಗಿರುವ ಮೂಢನಂಬಿಕೆಗಳನ್ನು ಜಾಗೃತ ಸಮಾವೇಶ, ಬೀದಿನಾಟಕಗಳ ಮೂಲಕ ಹೋಗಲಾಡಿಸುವ ಪ್ರಯತ್ನ ಸರ್ಕಾರ, ಸಂಘ-ಸಂಸ್ಥೆಗಳು ಮಾಡಬೇಕು.

* * *

## ಕೋಷ್ಟಕ-೧

## ಮಹಿಳೆಯರ ಭೂ ಒಡೆತನದ ವಿವರ : ಗುಲಬರ್ಗಾ ಜಿಲ್ಲೆ

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರಸಂ | ತಾಲೂಕುಗಳು | ಮಹಿಳೆಯರು | | | | | | ಪುರುಷರು | | | | | | ಒಟ್ಟು | |
|---|---|---|---|---|---|---|---|---|---|---|---|---|---|---|---|
| | | ಪ.ಜಾ | | ಪ.ಪಂ | | ಇತರರು | | ಪ.ಜಾ | | ಪ.ಪಂ | | ಇತರರು | | | |
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೮೪೪ | ೧೩೯೧ | ೬ | ೧೦ | ೫೨೪೬ | ೧೫೨೬೪ | ೪೧೬೪ | ೭೯೮೧ | ೧೨ | ೧೩ | ೩೧೫೫೩ | ೯೯೨೩೬ | ೪೧೮೨೫ | ೧೨೩೮೯೫ |
| ೨ | ಆಳಂದ | ೧೧೯೬ | ೧೯೬೦ | ೩೨ | ೬೨ | ೬೦೫೨ | ೧೫೮೨೫ | ೮೫೯೬ | ೧೪೬೪೦ | ೩೯೮ | ೯೫೮ | ೪೫೮೬೭ | ೧೨೭೯೨೬ | ೬೨೧೪೧ | ೧೬೧೩೭೧ |
| ೩ | ಚಿಂಚೋಳಿ | ೧೭೪೧ | ೨೬೨೮ | ೧೧ | ೨೦ | ೫೫೦೬ | ೧೪೮೩೬ | ೯೭೯೯ | ೧೮೬೦೮ | ೪೨ | ೧೧೫ | ೨೬೩೩೭ | ೭೪೮೫೩ | ೪೩೪೩೬ | ೧೧೧೦೬೦ |
| ೪ | ಚಿತ್ತಾಪೂರ | ೧೬೨೬ | ೨೯೭೦ | ೩೪ | ೧೦೫ | ೬೩೦೯ | ೧೮೪೭೩ | ೧೦೮೩೩ | ೨೨೮೪೭ | ೧೯೧ | ೪೨೭ | ೩೬೧೯೦ | ೧೦೫೯೫೩ | ೫೫೧೮೩ | ೧೫೦೭೭೫ |
| ೫ | ಗುಲಬರ್ಗಾ | ೧೩೩೦ | ೨೬೧೧ | ೧೭ | ೪೭ | ೬೨೦೮ | ೧೭೯೯೬ | ೯೧೭೭ | ೨೦೨೩೨ | ೧೦೫ | ೨೯೪ | ೩೫೨೧೪ | ೧೧೨೨೬೨ | ೫೨೦೫೧ | ೧೫೩೪೪೨ |
| ೬ | ಜೇವರ್ಗಿ | ೧೦೦೬ | ೧೭೮೦ | ೨೭೩ | ೬೬೨ | ೬೪೭೭ | ೧೯೫೩೪ | ೬೨೮೩ | ೧೨೪೨೦ | ೧೪೬೬ | ೩೯೭೦ | ೪೨೬೯೪ | ೧೫೦೭೧೨ | ೫೮೧೯೯ | ೧೭೧೪೭೮ |
| ೭ | ಸೇಡಂ | ೯೪೩ | ೧೪೩೯ | ೭೫ | ೧೨೪ | ೪೩೪೬ | ೧೧೪೮೭ | ೬೯೦೦ | ೧೦೮೫೧ | ೫೩೩ | ೧೦೮೧ | ೨೪೯೯೦ | ೬೩೭೩೯ | ೩೭೭೮೭ | ೮೮೭೨೧ |
| ೮ | ಶಹಾಪುರ | ೧೫೩೦ | ೨೫೩೫ | ೭೩೮ | ೧೪೭೦ | ೬೫೧೧ | ೧೬೬೧೬ | ೧೦೨೬೮ | ೧೮೫೨೩ | ೪೨೦೮ | ೯೦೪೦ | ೩೮೮೨೫ | ೧೦೦೮೨೯ | ೬೨೦೮೦ | ೧೪೯೦೧೩ |
| ೯ | ಸುರಪುರ | ೧೧೧೬ | ೧೮೪೦ | ೧೨೮೦ | ೨೭೩೨ | ೬೨೬೮ | ೧೫೩೧೩ | ೮೨೮೯ | ೧೪೬೦೦ | ೮೪೧೦ | ೧೮೨೫೭ | ೪೦೭೮೫ | ೧೦೧೯೦೫ | ೬೬೧೪೮ | ೧೫೪೬೪೭ |
| ೧೦ | ಯಾದಗಿರಿ | ೧೫೩೮ | ೨೧೭೯ | ೫೫೬ | ೮೯೮ | ೫೪೧೦ | ೧೧೫೦೯ | ೧೪೮೭೮ | ೨೨೯೬೬ | ೪೭೫೮ | ೭೫೭೫ | ೪೨೯೨೧ | ೮೬೫೨೨ | ೭೦೦೬೧ | ೧೩೧೬೪೯ |
| | ಒಟ್ಟು | ೧೨೮೭೦ | ೨೧೩೩೩ | ೩೦೨೨ | ೬೧೩೦ | ೫೮೩೩೩ | ೧೫೬೮೫೩ | ೮೯೧೮೭ | ೧೬೩೬೬೮ | ೨೦೧೨೩ | ೪೧೭೩೦ | ೩೬೫೩೭೬ | ೧೦೨೩೯೩೭ | ೫೪೮೯೧೧ | ೧೩೯೬೦೫೧ |

ಆಧಾರ : ಕೃಷಿ ಗಣತಿ ೨೦೦೦-೨೦೦೧, ಕರ್ನಾಟಕ

## ಕೋಷ್ಟಕ-೨

## ಗುಲಬರ್ಗಾ ಜಿಲ್ಲೆಯ ಭೂ ಒಡೆತನದ ವಿವರ : ಅತಿಸಣ್ಣ ಭೂ ಹಿಡುವಳಿಗಳು

(೧ ಹೆಕ್ಟೇರ್‌ಗಿಂತ ಕಡಿಮೆ)

ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

| ಕ್ರ.ಸಂ | ತಾಲೂಕುಗಳು | ಮಹಿಳೆಯರು | | | | | | ಪುರುಷರು | | | | | | ಒಟ್ಟು | |
|---|---|---|---|---|---|---|---|---|---|---|---|---|---|---|---|
| | | ಪ.ಜಾ | | ಪ.ಪಂ | | ಇತರರು | | ಪ.ಜಾ | | ಪ.ಪಂ | | ಇತರರು | | | |
| | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ೧ | ಅಫಜಲಪೂರ | ೨೩೨ | ೧೬೮ | – | – | ೩೨೮ | ೨೧೮ | ೭೯೬ | ೪೯೨ | – | – | ೨೨೮೧ | ೧೪೮೪ | ೩೬೩೭ | ೨೩೬೨ |
| ೨ | ಆಳಂದ | ೩೭೭ | ೨೮೧ | ೮ | ೫ | ೭೯೧ | ೫೨೪ | ೨೧೦೬ | ೧೨೮೦ | ೭೬ | ೪೫ | ೬೧೩೦ | ೩೯೬೩ | ೯೪೮೮ | ೬೦೯೮ |
| ೩ | ಚಿಂಚೋಳಿ | ೭೭೦ | ೫೬೭ | ೨ | ೨ | ೯೪೦ | ೬೧೪ | ೨೭೨೫ | ೧೭೦೪ | ೫ | ೪ | ೪೪೪೬ | ೨೭೬೫ | ೮೮೮೮ | ೫೬೫೬ |
| ೪ | ಚಿತ್ತಾಪೂರ | ೫೯೭ | ೪೧೮ | ೨ | ೧ | ೯೦೧ | ೫೬೭ | ೨೬೨೫ | ೧೪೬೩ | ೪೧ | ೨೫ | ೫೫೪೨ | ೩೨೫೧ | ೯೭೦೮ | ೫೭೨೫ |
| ೫ | ಗುಲಬರ್ಗಾ | ೩೬೪ | ೨೫೧ | ೩ | ೧ | ೯೦೮ | ೫೫೯ | ೨೦೭೪ | ೧೩೦೧ | ೨೧ | ೧೫ | ೪೭೨೯ | ೨೯೭೨ | ೮೦೯೯ | ೫೦೯೯ |
| ೬ | ಜೇವರ್ಗಿ | ೨೮೯ | ೨೨೨ | ೬೭ | ೫೪ | ೬೪೨ | ೪೪೪ | ೧೩೨೯ | ೮೪೦ | ೨೦೮ | ೧೪೦ | ೪೧೬೭ | ೨೬೯೬ | ೬೭೦೨ | ೪೩೯೬ |
| ೭ | ಸೇಡಂ | ೪೦೮ | ೨೪೧ | ೨೫ | ೧೫ | ೧೦೬೩ | ೫೯೮ | ೨೯೧೭ | ೧೫೮೦ | ೧೬೫ | ೯೦ | ೬೭೧೨ | ೩೬೦೦ | ೧೧೨೯೦ | ೬೧೨೪ |
| ೮ | ಶಹಾಪುರ | ೫೫೪ | ೩೫೯ | ೨೮೬ | ೧೯೯ | ೧೪೬೪ | ೮೯೧ | ೨೯೪೧ | ೧೭೪೬ | ೧೦೭೩ | ೬೪೫ | ೭೯೬೩ | ೪೭೧೭ | ೧೪೨೮೧ | ೮೫೫೭ |
| ೯ | ಸುರಪುರ | ೩೪೧ | ೨೨೬ | ೩೧೯ | ೨೧೪ | ೧೨೭೯ | ೮೧೧ | ೨೨೪೩ | ೧೪೬೧ | ೨೦೮೦ | ೧೩೫೯ | ೮೧೮೦ | ೪೯೯೯ | ೧೪೪೪೨ | ೯೦೭೦ |
| ೧೦ | ಯಾದಗಿರಿ | ೭೧೨ | ೩೮೫ | ೨೨೦ | ೧೧೫ | ೧೯೧೩ | ೯೯೪ | ೬೦೪೨ | ೩೨೬೫ | ೧೮೨೩ | ೯೫೩ | ೧೫೦೧೫ | ೭೭೫೧ | ೨೫೭೨೫ | ೧೩೪೬೩ |
| | ಒಟ್ಟು | ೪೬೪೪ | ೩೧೧೮ | ೯೩೨ | ೬೦೬ | ೧೦೨೨೯ | ೬೨೨೦ | ೨೫೭೯೮ | ೧೫೧೩೨ | ೫೪೯೨ | ೩೨೭೬ | ೬೫೧೬೫ | ೩೮೧೯೮ | ೧೧೨೨೬೦ | ೬೬೫೫೦ |

ಆಧಾರ : ಕೃಷಿ ಗಣತಿ ೨೦೦೦–೨೦೦೧, ಕರ್ನಾಟಕ

